# ಹೊಸತು

ಒಳಗೇನಿದೆ?

## ನೆಮ್ಮದಿಯ ನಾಳೆ ನಮ್ಮದು



---


**ಚಿತ್ರಗಳು :** ರವಿ ಹೆಗ್ಗಡಿ, ತನು, ಶ್ರೀಹರಿ, ಸ್ಮಿತಾ ಕೌಶಿಕ್, ಕಮಲಂ ಅರಸು
ವಿ. ಗೋಪಾಲ್, ಜಿಎಂಬೊ, ಗೋಪಿ, ವಿ.ಆರ್.ಸಿ. ಶೇಖರ್

**ಮುಖಪುಟ :** ಸ್ವಾತಂತ್ರ್ಯೋತ್ಸವ – ೬೮ ಮತ್ತು 'ಹೊಸತು' – ೧೬ರ ಸಂಭ್ರಮ

**ವಿನ್ಯಾಸ :** ನವಕರ್ನಾಟಕ ವಿನ್ಯಾಸ

**ಕಚೇರಿ ಸಹಕಾರ :** ಜಿ. ವಿ. ತೇಜೋವತಿ


## ಈ ತಿಂಗಳು

ಜ್ಯಪಾಲರಾಗಿದ್ದ ಶ್ರೀ. ಎಚ್. ಆರ್. ಭಾರದ್ವಾಜ್‌ಗೆ ನಮ್ಮ ರಾಜ್ಯವು "ನಿರಾಸೆ" ತಂದಿತಂತೆ, ಆದ್ದರಿಂದ ಹೃದಯವನ್ನು ನಿರಾಸೆಯಿಂದ ಭಾರ ಮಾಡಿಕೊಂಡು ಕಡೆಗೂ ನಿರ್ಗಮಿಸಿದ್ದಾರೆ. ಈತ ಇನ್ನೂ ಯಾವಾಗ ಹೋಗುವುದು ಎಂಬ ಪ್ರಶ್ನೆಯನ್ನು ಹಲವರು ಪದೇಪದೇ ಹಾಕಿಕೊಳ್ಳಬೇಕಾಗಿ ಬಂದಿತ್ತು; ಅಂತಹ ಅನನ್ಯ ವ್ಯಕಿತ್ವ ಇವರದು. ಮಾಧ್ಯಮಗಳು ಒಂದು ಅಲಿಖಿತ ನಿಯಮವನ್ನು ಪಾಲಿಸುತ್ತಿವೆ; ಅದೇನೆಂದರೆ ರಾಜ್ಯಪಾಲರನ್ನು ಟೀಕಿಸಬಾರದು, ಎಂದು. ಆತನ ಅಥವಾ ಆಕೆಯ ನಡತೆ ಮತ್ತು ವ್ಯವಹಾರಗಳು ಎಷ್ಟೇ ಪ್ರಶ್ನಾರ್ಹವಾಗಿದ್ದರೂ ಅವನ್ನು ಎತ್ತಿ ಬಹಿರಂಗವಾಗಿ ಆಡದಿರುವುದು ಮಾಧ್ಯಮಗಳ ನೀತಿಸಂಹಿತೆ. ಇದು ನಿಜಕ್ಕೂ ಅನೀತಿ ಸಂಹಿತೆ, ಏಕೆಂದರೆ ಮಾಧ್ಯಮಗಳ ಈ ನಿಯಮವು ರಾಜಭವನದಲ್ಲಿದ್ದು ಆಡಳಿತವನ್ನು ವೀಕ್ಷಿಸುವ ಮತ್ತು ಪರಿಶೀಲಿಸುವ ವ್ಯಕ್ತಿಗೆ ಅಸೀಮ ಸ್ವಾತಂತ್ರ್ಯವನ್ನು ನೀಡಿ ಭ್ರಷ್ಟಾಚಾರಕ್ಕೆ ಧೈರ್ಯವಾಗಿ ಕೈ ಹಾಕಲು ಪ್ರೇರಣೆ ನೀಡುವಂಥದು. ಅದರ ಲಾಭವನ್ನು ಭಾರದ್ವಾಜರು ಬೃಹತ್ ಪ್ರಮಾಣದಲ್ಲಿ ಪಡೆದುಕೊಂಡರೆಂಬುದು ಜನರಿಗೆ ಚೆನ್ನಾಗಿ ಗೊತ್ತು, ಆದರೆ ಮುಖ್ಯಮಂತ್ರಿಗಳಿಂದ ಹಿಡಿದು ಕಾರಕೂನನವರೆಗೆ ಯಾರೂ ಆ ಬಗ್ಗೆ ತುಟಿ ಬಿಚ್ಚುವುದಿಲ್ಲ, ಎನ್ನಲಾಗುತ್ತಿದೆ. ವಿಧಾನಸಭೆಯಲ್ಲಿ ಒಬ್ಬ ಸದಸ್ಯರು ಭಾರದ್ವಾಜರು ಎಸಗಿದ್ದಾರೆನ್ನಲಾದ ಭ್ರಷ್ಟಾಚಾರದ ಬಗ್ಗೆ ಪ್ರಸ್ತಾಪವನ್ನೆತ್ತಿದಾಗ ಅವರನ್ನು ಸಭಾಧ್ಯಕ್ಷರು ತಡೆದರು. ಭಾರದ್ವಾಜರ ನಿರಾಸೆಯೇನೆಂದರೆ ಅವರ ಅವಧಿ ಮುಗಿಯುವ ಹಿಂದಿನ ದಿನ ಯಾರೋ ಒಬ್ಬರನ್ನು ವಿಶ್ವವಿದ್ಯಾನಿಲಯವೊಂದರ ಉಪಕುಲಪತಿಯನ್ನಾಗಿ ನೇಮಿಸಿದಂತೆ ವೈದ್ಯಕೀಯ ವಿಶ್ವವಿದ್ಯಾನಿಲಯಕ್ಕೂ ಮಾಡಿಹೋಗಬೇಕೆಂಬ ತರಾತುರಿಯಲ್ಲಿದ್ದರು; ಆದರೆ ಅದು ಸಾಧ್ಯವಾಗಲಿಲ್ಲವಲ್ಲ, ಎನ್ನುತ್ತಾರೆ. ವ್ಯವಹಾರ ಜ್ಞಾನ ಇರುವವರ ಪ್ರಕಾರ ಅದು ಸಾಕಷ್ಟು ಕೋಟಿ ನಷ್ಟದಿಂದಾದ ನಿರಾಸೆ. ಲೋಕಾಯುಕ್ತ ವಿಶೇಷ ತನಿಖಾ ತಂಡಕ್ಕೆ "ಸನ್ಮಾನ್ಯರು" ನಿರ್ಗಮಿಸುವ ಮುನ್ನ ಒಬ್ಬ ಕಾನೂನು ಸಲಹೆಗಾರರನ್ನು ನೇಮಿಸಿದರು; ಅಂತೆಯೇ ಒಬ್ಬ ಕಾರ್ಯದರ್ಶಿಯನ್ನು ಸಹ. ಅವರಿಬ್ಬರನ್ನೂ ತೆಗೆದುಹಾಕಬೇಕೆಂದು ಭ್ರಷ್ಟಾಚಾರ ವಿರೋಧಿ ಸಮಿತಿಯ ಶ್ರೀ. ಹಿರೇಮಠರು ಬಹಿರಂಗವಾಗಿ ಒತ್ತಾಯಿಸಿದ್ದಾರೆ. ಇಬ್ಬರೂ ಭಾರದ್ವಾಜರ ಎಡಗೈ–ಬಲಗೈ ಆಗಿದ್ದರು. ಸಾಹಿತ್ಯ – ಸಂಸ್ಕೃತಿ ಕ್ಷೇತ್ರಗಳಿಂದ ರಾಜ್ಯದ ವಿಧಾನ ಪರಿಷತ್ತಿಗೆ ನಾಮಕರಣಗೊಂಡ ಸದಸ್ಯರು ಯಾರೆಂದು ಲೋಕಕ್ಕೆ ತಿಳಿದಿದೆ. ಅವರಲ್ಲಿ ಒಬ್ಬರು ಮಾತ್ರ ಸಿನಿಮಾ ರಂಗದವರು, ಮಿಕ್ಕವರೆಲ್ಲ ಕಾಂಗ್ರೆಸ್ ರಾಜಕಾರಣಿಗಳು. ಭಾರದ್ವಾಜರು ತೆರಳುವ ಮುನ್ನ "ನಿರಾಸೆ"ಯಿಂದ ರಾಜ್ಯಕ್ಕೆ ನೀಡಿದ ಬಳುವಳಿ ಅದು. ಆದರೆ ನಿರಾಸೆ ಹೋಗಲಾಡಿಸಿಕೊಳ್ಳಲು ಅವರು ರಾಜ್ಯಪಾಲರಾಗಿದ್ದಷ್ಟು ಕಾಲವೂ ಸತತವಾಗಿ ಹೇರಳವಾಗಿ "ಉಂಬಳಿ"ಯನ್ನು ತುಂಬಿಕೊಂಡರೆಂದು ರಾಜಭವನದ ಕಂಬಗಳು ಪಿಸುಗುಟ್ಟುತ್ತಿವೆಯಂತೆ. ಕೇಂದ್ರ ಗೃಹಮಂತ್ರಿ ರಾಜನಾಥ ಸಿಂಗ್ ಬೇಕಾದರೆ ವಿಚಾರಣಾ ಆಯೋಗವೊಂದನ್ನು ರಚಿಸಿ ನಿಜಾಂಶ ಪಡೆದು ಬಯಲು ಮಾಡಬಹುದು. ಮಾಧ್ಯಮಗಳು ಮಡಿವಂತಿಕೆಯನ್ನು ಬಿಟ್ಟು ರಾಜಭವನದ ವಾಸ್ತವ ಸಂಗತಿಗಳನ್ನು ರಾಜ್ಯದ ಪ್ರಜೆಗಳಿಗೆ ತಿಳಿಸುವ ಕಾಯಕಕ್ಕೆ ಮುಂದಾಗಬೇಕು. ಬೆಕ್ಕುಗಳು ಕಣ್ಣುಮುಚ್ಚಿ ಹಾಲು ಕುಡಿಯುವುದು ಸ್ವಭಾವವೆನ್ನುತ್ತಾರೆ; ಆದರೆ ಮಾನವರು ಅದನ್ನು ನೋಡದಂತೆ ನಟಿಸುವುದು ಸಹಜ ಸ್ವಭಾವವಲ್ಲ.

✴ ✴ ✴

ದೆಹಲಿ ವಿಶ್ವವಿದ್ಯಾಲಯದ ಉಪಕುಲಪತಿ ಸಾಹಸ ಸಿಂಹನಂತೆ ದನಿಯೆತ್ತಿ ಆರ್ಭಟಿಸಿ ಆಮೇಲೆ ಒಂದು ಏಡಿ ಅಥವಾ ನಳ್ಳಿಯಂತೆ ಧ್ವನಿಯನ್ನು ನುಂಗಿಕೊಂಡು ಕೂತರು. ಇದು ಯಾವುದೇ ವಿಶ್ವವಿದ್ಯಾಲಯದ ಸ್ವಾಯತ್ತತೆಗೆ ಘನತೆ ತರುವಂತಹ ವಿಚಾರವಲ್ಲ. ಒಂದು ತೀರ್ಮಾನ ಕೈಗೊಳ್ಳುವಾಗ ವಿಶ್ವವಿದ್ಯಾಲಯವು ವಿವಿಧ ಅಂಗಗಳ ಅಭಿಪ್ರಾಯವನ್ನು ಸಂವಿಧಾನರೀತ್ಯಾ ಪಡೆದುಕೊಳ್ಳಬೇಕು. ಅಂದರೆ, ಅಕೆಡೆಮಿಕ್ ಕೌನ್ಸಿಲ್ ಮತ್ತು ಸಿಂಡಿಕೇಟ್ ಸದಸ್ಯರ ನಿಲುವನ್ನು ಆಯಾ ಸಮಿತಿಗಳಲ್ಲಿ ಚರ್ಚಿಸಿ ಆಮೇಲೆ ನಿರ್ಣಯವನ್ನು

(೬ನೇ ಪುಟಕ್ಕೆ)

ತಿಂಗಳ ಪತ್ರಿಕೆ
**ಹೊಸತು**
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ

ಸಂಪುಟ-೧೬ ಸಂಚಿಕೆ-೧ ಆಗಸ್ಟ್ ೨೦೧೪



■ *ಮುದ್ರಣ*
**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು – ೫೬೦ ೦೫೮
ದೂರವಾಣಿ: ೨೮೯೭೪೨೬

■ *ಹೊಸತು ಕಚೇರಿಯ ವಿಳಾಸ*
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು – ೫೬೦ ೦೦೧
ದೂರವಾಣಿ: ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್: ೩೦೫೭೮೦೨೩
**e-mail : navakarnataka@gmail.com**
**hosathu@gmail.com**
**hosathu.nkp@gmail.com**
**URL : www.navakarnataka.com**
**http : //navakarnataka.blogspot.in**
**http : //hosathumonthly.blogspot.in**

# ಸಂಪಾದಕೀಯ

## ‘ಹೊಸತು’ಗೆ ಹದಿನಾರು

‘ಹೊಸತು’ ಈ ತಿಂಗಳಿಗೆ ಹದಿನೈದು ವರ್ಷಗಳನ್ನು ಯಶಸ್ವಿಯಾಗಿ ಪೂರೈಸಿ ಹದಿನಾರನೇ ವರ್ಷಕ್ಕೆ ಕಾಲಿಡುತ್ತಿದೆ. ‘ಹೊಸತು’ ಕನ್ನಡ ಮಾಧ್ಯಮ ಕ್ಷೇತ್ರದಲ್ಲಿ ಒಂದು ವಿಶಿಷ್ಟವಾದ ಮಾಸಿಕ ಎನ್ನುವುದನ್ನು ಹೆಮ್ಮೆಯಿಂದ, ವಿನಯಪೂರ್ವಕವಾಗಿ ಓದುಗರೊಡನೆ ಹಂಚಿಕೊಳ್ಳಬಯಸುತ್ತೇವೆ. ಜನಪರವಾದ ನಿಲುವಿನೊಂದಿಗೆ ಹದಿನೈದು ವರ್ಷಗಳಿಂದ ಬದ್ಧತೆಯಿಂದ ‘ಹೊಸತು’ವಿನಂತಹ ಒಂದು ಮಾಸ ಪತ್ರಿಕೆಯನ್ನು ನಿರಂತರವಾಗಿ ಪ್ರಕಟಿಸುವುದು ಸಾಮಾನ್ಯ ಸಂಗತಿಯಲ್ಲ. ‘ನವಕರ್ನಾಟಕ ಪ್ರಕಾಶನ’ದ ಕನಸುಗಳಿಗೆ ಆರಂಭಿಕ ಸಂಪಾದಕರ ಹಾಗೂ ಸಂಪಾದಕ ಮಂಡಲಿಯ ಆಶಯಗಳಿಗೆ ಸಮಸ್ತ ‘ಹೊಸತು’ ಲೇಖಕರ ಹಾಗೂ ಓದುಗರ ಬಳಗ ಮತ್ತು ಜಾಹಿರಾತುದಾರರು ಸ್ಪಂದಿಸಿದ ಕಾರಣ ‘ಹೊಸತು’ ಇಂದು ಹದಿನೈದು ವರ್ಷಗಳನ್ನು ಯಶಸ್ವಿಯಾಗಿ ಪೂರೈಸಿ ಹದಿನಾರನೇ ವರ್ಷಕ್ಕೆ ಕಾಲಿಡುತ್ತಿದೆ. ಈ ಸಂದರ್ಭದಲ್ಲಿ ‘ಹೊಸತು’ ಮೊದಲ ಸಂಚಿಕೆಯಿಂದ ಇಂದಿನವರೆಗೆ ಸಹಕರಿಸಿದ ಎಲ್ಲರಿಗೂ ‘ಹೊಸತು’ ಬಳಗದಿಂದ ಧನ್ಯವಾದಗಳನ್ನು ಅರ್ಪಿಸುತ್ತೇವೆ. ಮುಂದೆಯೂ ಇದೇ ರೀತಿ ಸಹಕರಿಸಿ ‘ಹೊಸತು’ ಇನ್ನೂ ಅರ್ಥಪೂರ್ಣವಾಗಿ, ವಿಸ್ತೃತವಾಗಿ ಪ್ರಕಟವಾಗಲು ಸಹಕರಿಸಬೇಕೆಂದು ಕೇಳಿಕೊಳ್ಳುತ್ತೇವೆ.

ಮಾಧ್ಯಮ ಕ್ಷೇತ್ರ ಉದ್ಯಮವಾಗಿ ಪರಿವರ್ತನೆಯಾಗಿರುವ ಇಂದಿನ ಸಂದರ್ಭದಲ್ಲಿ ಮಾಧ್ಯಮದ ಹಿತಾಸಕ್ತಿಗಿಂತ ಉದ್ಯಮದ ಹಿತಾಸಕ್ತಿಗಳೇ ಪ್ರಧಾನವಾಗಿ ಮಾಧ್ಯಮದ ಆಶಯಗಳೂ, ಮೌಲ್ಯಗಳೂ ಕುಸಿಯುತ್ತಿರುವುದು ಇಂದಿನ ಆತಂಕಕಾರಿ ಸಂಗತಿಯಾಗಿದೆ. ಅದರಲ್ಲೂ ಇಂದು ಕಾರ್ಪೊರೇಟ್ ಕಂಪನಿಗಳು ಮಾಧ್ಯಮ ಕ್ಷೇತ್ರದ ಮೇಲೆ ಬಹುತೇಕ ನಿಯಂತ್ರಣವನ್ನು ಸಾಧಿಸಿ ಮಾಧ್ಯಮವನ್ನು ವ್ಯಾಪಾರೀಕರಣಗೊಳಿಸಿರುವುದು ಮಾತ್ರವಲ್ಲ ಅದನ್ನು ತಮ್ಮ ಇತರೆ ವ್ಯಾಪಾರ ಮತ್ತು ತಮ್ಮ ಪರವಾದ ರಾಜಕೀಯಕ್ಕೆ ಪೂರಕವಾಗಿ ಬಳಸಿಕೊಳ್ಳುತ್ತಿವೆ. ಇದು ಅತ್ಯಂತ ಅಪಾಯಕಾರಿ ಹಾಗೂ ಆತಂಕಕಾರಿ ಸಂಗತಿಯಾಗಿದೆ. ಉದ್ಯಮ ಪ್ರೇರಿತ ಮಾಧ್ಯಮಗಳು ಇಂದು ಸೃಷ್ಟಿಸುತ್ತಿರುವ ವಾತಾವರಣವನ್ನು ಗಮನಿಸಿದರೆ, ಜನತೆ, ಜನತೆಯ ಬದುಕು, ಮಾಧ್ಯಮಗಳಿಗೆ ಕೇಂದ್ರವಾಗದೆ ವ್ಯಾಪಾರೀಕರಣಕ್ಕೆ ಮತ್ತು ಮಾರುಕಟ್ಟೆ ಸಂಸ್ಕೃತಿಗೆ ಪೂರಕವಾಗಿ, ಪ್ರಚೋದಕಗಳಾಗಿ ಕೆಲಸ ಮಾಡುವುದು ಕಂಡುಬರುತ್ತದೆ. ಮಾಧ್ಯಮಗಳು ಕೇವಲ ಮಾಹಿತಿ ಕೇಂದ್ರಗಳಾಗದೆ, ರಂಜನೆಯ ವಾಹಕಗಳಾಗದೆ ಜನಪರ ಚಿಂತನೆಯನ್ನೂ ಒಳಗೊಳ್ಳಬೇಕು. ಸಮಾಜ ಪ್ರಗತಿಯತ್ತ ಮುನ್ನಡೆವ ಕ್ರಮಕ್ಕೆ ಪೂರಕವಾಗಿರಬೇಕು. ಆದರೆ ಯಾವುದು ಜನಪರ, ಯಾವುದು ಜನಪರವಲ್ಲ ಎಂಬುದನ್ನು ನಿರ್ಧರಿಸುವುದರಲ್ಲಿಯೇ ಗೊಂದಲಗಳನ್ನು ಉಂಟುಮಾಡುವಲ್ಲಿ ಕಾರ್ಪೊರೇಟ್ ಕಂಪನಿಗಳು ಯಶಸ್ವಿಯಾಗಿವೆ. ಇಂಥ ಗೊಂದಲದ ಸಂದರ್ಭದಲ್ಲಿ ಈ ವ್ಯಾಪಾರಿ ಮನೋಭಾವದ ಕಾರ್ಪೊರೇಟ್ ಮಾಧ್ಯಮಗಳು ತಾವು ಹೇಳಿದ್ದೇ ಸತ್ಯ, ತಾವು ಪ್ರತಿಪಾದಿಸಿದ್ದೇ ಮೌಲ್ಯ ಎಂದು ಓದುಗರನ್ನು, ವೀಕ್ಷಕರನ್ನು ದಾರಿ ತಪ್ಪಿಸುತ್ತಿವೆ. ಇಂಥ ಮಾಧ್ಯಮಗಳು ಪ್ರಭುತ್ವವನ್ನೋ ಇನ್ನಾವುದೇ ವಿದ್ಯಮಾನವನ್ನೋ ಬೆಂಬಲಿಸುವಲ್ಲಿ, ವಿರೋಧಿಸುವಲ್ಲಿ ವಾಸ್ತವತೆಗಿಂತ, ಸತ್ಯಕ್ಕಿಂತ ಮಿಗಿಲಾಗಿ ತಮ್ಮದೇ ಆದ ಲಾಭ ಹಾನಿಗಳ ಲೆಕ್ಕಾಚಾರವನ್ನು ಹೊಂದಿರುತ್ತವೆ. ಒಂದು ಸುದ್ದಿ ಅಥವಾ ವಿದ್ಯಮಾನದ ಆಯ್ಕೆ, ಬರವಣಿಗೆಯ ಶೈಲಿ, ಅಭಿವ್ಯಕ್ತಿಯ, ವಿಶ್ಲೇಷಣೆಯ ವಿಧಾನಗಳೂ ಕೂಡ ಇಂಥ ಲಾಭ – ಹಾನಿಯ ಲೆಕ್ಕಚಾರ, ಮಾಧ್ಯಮ ಒಡೆತನದ ಹಿತಾಸಕ್ತಿಗೆ ಪೂರಕವಾಗಿಯೇ ನಡೆಯುತ್ತವೆ. ಅಂತರರಾಷ್ಟ್ರೀಯ ಸುದ್ದಿ ಸಂಸ್ಥೆಗಳು ಮೊದಲಿನಿಂದ ಇಂಥ ನಡೆಗೆ ಒಂದು ಮಾರ್ಗವನ್ನೇ ರೂಪಿಸಿವೆ. ಉದಾಹರಣೆಗೆ ಇತ್ತೀಚಿನ ಒಂದು ವಿದ್ಯಮಾನವನ್ನು ಗಮನಿಸಬಹುದು. ಕಳೆದ ಒಂದುವಾರದಿಂದ ಅಂದರೆ ಜುಲೈ ೮ರಿಂದ ಇಸ್ರೇಲ್ ದೇಶ ಪ್ಯಾಲಸ್ತೈನ್ ಜನರ ಮೇಲೆ ಯುದ್ಧ ನಡೆಸುತ್ತಿದೆ. ಜನವಸತಿಗಳ ಮೇಲೆ ಬಾಂಬ್ ದಾಳಿ ನಡೆಸುತ್ತಿದೆ. ಇಂದಿನವರೆಗೆ ಸುಮಾರು ೩೫೦ರಷ್ಟು ಸಾವು ಸಂಭವಿಸಿ ೩೦೦೦ಕ್ಕಿಂತ ಹೆಚ್ಚು ಜನ ಗಾಯಗೊಂಡಿದ್ದಾರೆ. ಸಾವಿಗೀಡಾದವರಲ್ಲಿ ಪುಟ್ಟ ಮಕ್ಕಳು, ಮಹಿಳೆಯರು, ವೃದ್ಧರು ಸೇರಿದ್ದಾರೆ. ಲಕ್ಷಾಂತರ ಜನ ನಿರಾಶ್ರಿತರಾಗಿದ್ದಾರೆ. ಇಸ್ರೇಲ್ ಬಿಂಬಿಸುವಂತೆ ಇವರಾರೂ ಭಯೋತ್ಪಾದಕರು, ಉಗ್ರಗಾಮಿಗಳಲ್ಲ. ಆದರೂ ಇದೊಂದು ಎರಡು ದೇಶಗಳ ನಡುವಿನ, ಅಥವಾ ಉಗ್ರರನ್ನು ಸದೆ ಬಡಿಯಲು ಇಸ್ರೇಲ್ ಮುಂದಾಗಿರುವ ಕ್ರಮವೆನ್ನುವ ರೀತಿಯಲ್ಲಿ ಬಹುರಾಷ್ಟ್ರೀಯ ಕಂಪನಿಗಳ ನಿಯಂತ್ರಣದಲ್ಲಿರುವ ಅಂತರರಾಷ್ಟ್ರೀಯ ಸುದ್ದಿ ಸಂಸ್ಥೆಗಳು ಬಿಂಬಿಸುತ್ತಿವೆ. ಅದೇ ಸಂದರ್ಭದಲ್ಲಿ ಶತಮಾನಗಳಿಂದ ನೆಲಸಿದ್ದ ಪ್ಯಾಲಸ್ತೈನಿಯರನ್ನು ೧೯೪೮ರಲ್ಲಿ ಹೊರತಳ್ಳಿ, ನೆಲಹೀನರನ್ನಾಗಿಸಿ ಇಸ್ರೇಲ್ ದೇಶ ಕಟ್ಟಿಕೊಂಡ ಹಿನ್ನೆಲೆಯನ್ನು ಮರೆಮಾಚಲಾಗುತ್ತದೆ. ಇಸ್ರೇಲ್ ದೇಶ ಅಮೆರಿಕದ ಹಿತಾಸಕ್ತಿಯನ್ನು ಪಶ್ಚಿಮ ಏಷ್ಯಾದಲ್ಲಿ ಕಾಪಾಡುವ ದೇಶವಾಗಿರುವ, ಸದಾ ಅಮೆರಿಕದ ಬೆಂಬಲದೊಂದಿಗೆ ವಿಶ್ವಸಂಸ್ಥೆಯ ತೀರ್ಮಾನಗಳನ್ನು ಧಿಕ್ಕರಿಸುವ ಕ್ರಿಯೆಗಳನ್ನು ಸುದ್ದಿ ಸಂಸ್ಥೆಗಳು ಮರೆಮಾಚುತ್ತವೆ ಅಥವಾ ಅಪ್ರಸ್ತುತ ಎನ್ನುವ ರೀತಿಯಲ್ಲಿ ಪ್ರಕಟಿಸುತ್ತವೆ. ಕಳೆದ ಹಲವಾರು ದಶಕಗಳಿಂದ ಅಮೆರಿಕ ಸಾಮ್ರಾಜ್ಯಶಾಹಿ ಹಲವಾರು ದೇಶಗಳ ಮೇಲೆ ನಡೆಸಿದ ಅಕ್ರಮ ಯುದ್ಧಗಳನ್ನು ಅತಿಕ್ರಮಣಗಳನ್ನು ಜಗದೋದ್ಧಾರದ ದೃಷ್ಟಿಯಿಂದಲೇ ಎಂದು ಬಿಂಬಿಸಲಾಗಿದೆ. ಇದು ಹಿತಾಸಕ್ತ ಮಾಧ್ಯಮಗಳು ಸೃಷ್ಟಿಸಿದ ಸುದ್ದಿ ಅಥವಾ ಮೌಲ್ಯವೇ ಹೊರತು ವಾಸ್ತವ ಅಥವಾ ಮಾನವ ಕುಲವನ್ನು ಪ್ರಗತಿಯತ್ತ ಕೊಂಡೊಯ್ಯುವ ಪ್ರಕ್ರಿಯೆಯಲ್ಲ. ಇದು ಅಂತರರಾಷ್ಟ್ರೀಯ ಮಟ್ಟದಿಂದ ಸ್ಥಳೀಯ ಮಟ್ಟದವರೆಗೂ ಮಾಧ್ಯಮ ಲೋಕದಲ್ಲಿ ನಡೆಯುತ್ತಿರುವ ಸಂಗತಿ. ಇದೇ ಸಂದರ್ಭದಲ್ಲಿ ವ್ಯಾಪಾರೀ ಮಾಧ್ಯಮಗಳು ಏಕಸ್ವಾಮ್ಯತೆಯನ್ನು ಸ್ಥಾಪಿಸುವ ಉದ್ದೇಶದಿಂದ ಜನಪರ ಮೌಲ್ಯಗಳನ್ನು ಪ್ರತಿಪಾದಿಸುವ ಮಾಧ್ಯಮ ವಲಯದ ಮೇಲೆ ಅಪರೋಕ್ಷ ದಾಳಿ ನಡೆಸುತ್ತವೆ. ಇಂಥ ಸಂದರ್ಭದಲ್ಲಿ ಜನಪರ ನಿಲುವು,

ಜನಕೇಂದ್ರಿತ ಆಶಯದ ಮಾಧ್ಯಮವಲಯ ಹೆಚ್ಚು ಬದ್ಧತೆಯಿಂದ, ಎಚ್ಚರದಿಂದ ಇಂಥ ದಾಳಿ ಮತ್ತು ಸವಾಲನ್ನು ಎದುರಿಸಬೇಕಾಗುತ್ತದೆ. ಕ್ರಿಯೆ ಮತ್ತು ಪ್ರತಿಕ್ರಿಯೆಯ ಮೂಲಕ ಇಂಥ ಸವಾಲುಗಳನ್ನು ಎದುರಿಸಲು 'ಹೊಸತು' ಸದಾ ಬದ್ಧ ಮತ್ತು ಸಿದ್ಧವಿದೆ. ನೀವು ನಮ್ಮೊಂದಿಗಿದ್ದೀರಿ ಎಂಬ ವಿಶ್ವಾಸದೊಂದಿಗೆ.

## ಮೋದಿ ಸರಕಾರದ ನಿರಾಶಾದಾಯಕ ಬಜೆಟ್

ಬಂಡವಾಳಶಾಹಿ ವ್ಯವಸ್ಥೆಯಲ್ಲಿ ಜನಪರ ಬಜೆಟ್ ನಿರೀಕ್ಷಿಸುವುದು ಸರಿಯಲ್ಲ. ಇದನ್ನು ಭಾಜಪ ಸರಕಾರದ ಬಜೆಟ್ ಮತ್ತೊಮ್ಮೆ ರುಜುವಾತಾಗಿಸಿದೆ. ಕಾರ್ಪೊರೇಟ್ ವಲಯದ ಪೂರ್ಣ ಬೆಂಬಲದಿಂದ ಅಧಿಕಾರದ ಚುಕ್ಕಾಣಿ ಹಿಡಿದಿರುವ ಭಾಜಪ ಸರಕಾರದಿಂದ ಆಶ್ವಾಸನೆಗಳ ಮಹಾಪೂರ ಹರಿದೀತೆ ಹೊರತು ಬೇರೇನನ್ನೂ ನಿರೀಕ್ಷಿಸಲಾಗದು. ಮೋದಿ ಸರಕಾರದ ಹಣಕಾಸಿನ ಸಚಿವ ಅರುಣ್ ಜೇಟ್ಲಿ ಮಂಡಿಸಿರುವ ಬಜೆಟ್ ಎಲ್ಲ ರೀತಿಯಲ್ಲೂ ಯುಪಿಎ ಸರಕಾರದ ಬಜೆಟ್‌ನಂತೆಯೇ ಇದೆ. ಒಂದು ಬಗೆಯಲ್ಲಿ ಅದರ ಮುಂದುವರಿಕೆಯೇ ಆಗಿದೆ ಎಂದರೆ ಉತ್ಪ್ರೇಕ್ಷೆಯಲ್ಲ. ಮುಂದಿನ ದಿನಗಳಲ್ಲಿ ಮೋದಿ ಸರಕಾರ ಯಾವ ದಿಶೆಯಲ್ಲಿ ಹೋಗುವುದು ಎಂಬ ಸೂಚನೆಯನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ ತಿಳಿಯಬಹುದು. ನೇರ ತೆರಿಗೆಯ ಪ್ರಮಾಣವನ್ನು ಮುಟ್ಟದೆ, ಮಧ್ಯಮವರ್ಗದವರನ್ನು ಸಂಪ್ರೀತಗೊಳಿಸಲು ಆದಾಯ ತೆರಿಗೆಯ ಮಿತಿಯನ್ನು ಐವತ್ತು ಸಾವಿರ ರೂಪಾಯಿಗಳಷ್ಟು ಏರಿಸಲಾಗಿದೆ, ಹಿಂದಿನ ಸರಕಾರದ ಯೋಜನೆಗಳ ಮುಂದುವರಿಕೆ ಬಿಟ್ಟರೆ ಹೊಸ ಸುಧಾರಣೆಗಳೇನೂ ಕಾಣುವುದಿಲ್ಲ. ಮುಂದೆ ಸಬ್ಸಿಡಿಗಳನ್ನು ತೆಗೆದುಹಾಕುವ ಉದ್ದೇಶ ಸ್ಪಷ್ಟವಾಗಿದೆ. ಆಯವ್ಯಯವನ್ನು ಸರಿದೂಗಿಸಿ ಹಣದುಬ್ಬರಕ್ಕೆ ಕಡಿವಾಣ ಹಾಕಲು ಇದು ಅಗತ್ಯ ಎನ್ನುವುದು ಅರ್ಥಶಾಸ್ತ್ರಜ್ಞರ ಅಭಿಮತ. ಕಾರ್ಪೊರೇಟ್ ವಲಯದ ಕೂಗೂ ಅದೇ ಆಗಿದೆ. ಹಾಗಾಗಿ ಈ ಬಜೆಟ್‌ನಲ್ಲಿ ಹಣಕಾಸಿನ ಸಚಿವರು ಹಣದುಬ್ಬರ ತಗ್ಗಿಸಲು ಯಾವುದೇ ಕ್ರಮದ ಸೂಚನೆ ನೀಡಿಲ್ಲ.

ಎಲ್ಲರನ್ನು ಸಮಜಾಯಿಷಿ ಮಾಡುವ ಬಜೆಟ್ ಮಂಡಿಸಿರುವ ಸಚಿವರು ಮುಂದೆ ಸರಕಾರ ಅನುಸರಿಸುವ ಕಾರ್ಪೊರೇಟ್ ವಲಯದ ಪರ ನೀತಿಯ ಸುಳಿವನ್ನು ನೀಡಿದ್ದಾರೆ. ರಕ್ಷಣಾ ವಲಯ ಹಾಗೂ ಇನ್ಶೂರೆನ್ಸ್ ಕ್ಷೇತ್ರದಲ್ಲಿ ವಿದೇಶೀ ಬಂಡವಾಳದ ಹೂಡಿಕೆಯ ಪ್ರಮಾಣವನ್ನು ಶೇಕಡ ೨೬ರಿಂದ ೪೯ರವರೆಗೆ ಹೆಚ್ಚಿಸಲಾಗಿದೆ. ಇದು ಈ ಉದ್ಯಮಗಳಲ್ಲಿ ವಿದೇಶೀಯ ಕೈವಾಡವನ್ನು ಹೆಚ್ಚಿಸುತ್ತದೆ. ಇನ್ಶೂರೆನ್ಸ್‌ಅನ್ನು ಖಾಸಗೀಕರಿಸುವ ಯೋಜನೆ ಯುಪಿಎ–೨ ಸರಕಾರದ್ದು. ಈಗ ವಿದೇಶೀ ಹೂಡಿಕೆಯನ್ನು ಹೆಚ್ಚಿಸಲಾಗಿರುವುದರಿಂದ ದೊಡ್ಡ ಪ್ರಮಾಣದಲ್ಲಿ ವಿದೇಶೀ ಕಂಪೆನಿಗಳ ಪ್ರವೇಶವಾಗುತ್ತದೆ. ರಕ್ಷಣಾ ವಲಯದಲ್ಲಿ ವಿದೇಶೀ ಬಂಡವಾಳದ ಹೂಡಿಕೆಯನ್ನು ಅಧಿಕಗೊಳಿಸಿರುವುದು ಭದ್ರತೆಯ ದೃಷ್ಟಿಯಿಂದ ಸರಿಯಲ್ಲ. ಇನ್ನು ರಿಯಲ್ ಎಸ್ಟೇಟ್ ಉದ್ಯಮದಲ್ಲೂ ವಿದೇಶೀ ಬಂಡವಾಳದ ಪ್ರವೇಶವಾಗಲಿದೆ. ಇದು ಭೂಕಬಳಿಕೆ ಹಾಗೂ ಐಷಾರಾಮಿ ವಸತಿಗಳ ನಿರ್ಮಾಣಕ್ಕೆ ಎಡೆಕೊಡುತ್ತದೆ. ನಗರೀಕರಣದ ಭರಾಟೆಯನ್ನು, ಬಹುಮಹಡಿ ಕಟ್ಟಡಗಳ ಸರಮಾಲೆಯನ್ನು ನಾವು ಈಗಾಗಲೇ ಕಾಣುತ್ತಿದ್ದೇವೆ. ಮುಂದೆ ೩ರಿಂದ ೪ ವರ್ಷಗಳಲ್ಲಿ ಅಭಿವೃದ್ಧಿಯ ಪ್ರಮಾಣವನ್ನು ಶೇಕಡ ೮ಕ್ಕೆ ಹೆಚ್ಚಿಸುವ ಭರವಸೆ ನೀಡಲಾಗಿದೆ. ಇದು ಎಷ್ಟರಮಟ್ಟಿಗೆ ಸಾಧ್ಯವಾಗುತ್ತದೆ ಎನ್ನುವುದನ್ನೂ ಕಾದು ನೋಡಬೇಕಾಗಿದೆ.

ಬೆಲೆ ಏರಿಕೆಯನ್ನು ತಡೆಗಟ್ಟಲು ಹಣಕಾಸಿನ ಸಚಿವರು ಯಾವುದೇ ವಿಶೇಷ ಕ್ರಮಗಳನ್ನು ಸೂಚಿಸಿಲ್ಲ. ಬಜೆಟ್ ನಂತರದ ಒಂದು ವಾರದಲ್ಲಿ ಅಗತ್ಯ ವಸ್ತುಗಳ ಬೆಲೆ ಮತ್ತಷ್ಟು ಏರಿದೆ. ನಿರೀಕ್ಷಿಸಿದ್ದಂತೆ ಭಾಜಪ ಸರಕಾರ ನಗರೀಕರಣಕ್ಕೆ ಹೆಚ್ಚು ಪ್ರೋತ್ಸಾಹ ನೀಡಿದೆ. ಕೃಷಿಕ್ಷೇತ್ರದ ಮಟ್ಟಿಗೆ ಹೊಸ ಯೋಜನೆಗಳನ್ನೇನೂ ಬಜೆಟ್‌ನಲ್ಲಿ ಪ್ರಸ್ತಾಪ ಮಾಡಿಲ್ಲ. ಒಟ್ಟಿನಲ್ಲಿ ಮೋದಿ ಸರಕಾರದ ಮೊದಲ ಬಜೆಟ್ ನಿರೀಕ್ಷೆಗಳನ್ನು ಹುಸಿಯಾಗಿಸಿದೆ. ಚುನಾವಣಾ ಸಮಯದಲ್ಲಿ ನೀಡುವ ಭರವಸೆಗಳೇ ಬೇರೆ; ಅಧಿಕಾರಕ್ಕೆ ಬಂದಮೇಲೆ ಪ್ರಾಯೋಗಿಕವಾಗಿ ಕಾರ್ಯವೆಸಗುವುದೇ ಬೇರೆ ಎನ್ನುವುದಕ್ಕೆ ಈ ಬಜೆಟ್ ಸಾಕ್ಷಿಯಾಗಿದೆ. ಪವಾಡ ಸದೃಶವಾದ ಕ್ರಮಗಳೇನೂ ಸಾಧ್ಯವಿಲ್ಲ ಎನ್ನುವುದನ್ನು ಅದು ತೋರಿಸಿದೆ. ಅಂಥ ನಿರೀಕ್ಷೆ ಇರಿಸಿಕೊಳ್ಳುವುದೂ ಸರಿಯಾಗದು, ೨೦೧೪ರ ಚುನಾವಣೆಗಳಲ್ಲಿ ಜನ ಬದಲಾವಣೆಗೆ ಮತನೀಡಿದರು ಎನ್ನುವುದು ನಿಜ. ಆದರೆ ಆರ್ಥಿಕ ನೀತಿಯ ಕ್ಷೇತ್ರದಲ್ಲಿ ಮಾತ್ರ ಏನೂ ಬದಲಾವಣೆಯಿಲ್ಲ ಎನ್ನುವುದು ೨೦೧೪–೧೫ರ ಬಜೆಟ್‌ನಿಂದ ಸಾಬೀತಾಗಿದೆ.

ಅಧಿಕಾರ ವಹಿಸಿಕೊಂಡ ಎರಡು ತಿಂಗಳೊಳಗೇ ಮಂಡಿಸಿದ್ದು ರೈಲ್ವೆ ಬಜೆಟ್. ಕರ್ನಾಟಕದ ಮಾಜಿ ಮುಖ್ಯಮಂತ್ರಿ ಸದಾನಂದ ಗೌಡ ಈಗ ಮೋದಿ ಸರಕಾರದಲ್ಲಿ ರೈಲ್ವೆ ಸಚಿವ. ಕೇಂದ್ರದಲ್ಲಿ ಕಾಂಗ್ರೆಸ್ ಆಡಳಿತದ ಕಾಲದಲ್ಲಿ ಹನುಮಂತಯ್ಯ ಹಾಗೂ ಜಾಫರ್ ಷರೀಫ್ ಕೂಡ ರೈಲ್ವೆ ಮಂತ್ರಿಗಳಾಗಿದ್ದರು. ಆದರೂ ರಾಜ್ಯಕ್ಕೆ ಅಂಥ ಪ್ರಯೋಜನವೇನಾಗಲಿಲ್ಲ. ಈಗಲೂ ಅಷ್ಟೆ ಗೌಡರಿಂದಲೂ ಏನೂ ನಿರೀಕ್ಷಿಸುವಂತಿಲ್ಲ. ಭರವಸೆಗಳೆಷ್ಟೋ ಅಷ್ಟೆ. ಬುಲೆಟ್ ಟ್ರೇನ್‌ಗಳನ್ನು ತರುವ ಯೋಜನೆ ಪ್ರಕಟಿಸಿದ್ದಾರೆ. ಅದು ಕಾಗದದ ಮೇಲೆ ಉಳಿಯುವುದು ಖಚಿತ. ಏಕೆಂದರೆ ಈಗ ಇರುವ ರೈಲು ಮಾರ್ಗದ ಹಳಿಗಳು ಅದಕ್ಕೆ ಸೂಕ್ತವಲ್ಲ. ಇರುವುದನ್ನೇ ಸುರಕ್ಷಿತಗೊಳಿಸುವುದು ಕ್ಷೇಮ. ರೈಲ್ವೆ ಸಚಿವರು ಬಜೆಟ್ ಮಂಡನೆಗೆ ಮೊದಲೇ ಪ್ರಯಾಣದ ದರಗಳನ್ನು ಶೇಕಡ ೧೪.೨ರಷ್ಟು ಹೆಚ್ಚಿಸಿದ್ದರು. ಕರ್ನಾಟಕದ ಮಟ್ಟಿಗೆ ಹೊಸ ರೈಲು ಮಾರ್ಗ ಕನಸಾಗಿಯೇ ಉಳಿದಿದೆ. ಅಂತೂ ಮೋದಿ ಸರಕಾರ ದೇಶದ ಜನತೆಯ ಮುಂದೆ ಇರಿಸಿರುವ ಸಾಮಾನ್ಯ ಬಜೆಟ್ ಮತ್ತು ರೈಲ್ವೆ ಬಜೆಟ್ ಎರಡೂ ಉತ್ಸಾಹಕ್ಕಿಂತ ಹೆಚ್ಚಾಗಿ ನಿರಾಶೆಯನ್ನು ತಂದಿದೆ.

ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ



**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ₹ ೧೫/- |
| ವಾರ್ಷಿಕ ಚಂದಾ | ₹ ೨೦೦/- |
| ಮೂರು ವರ್ಷಕ್ಕೆ | ₹ ೪೫೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ , ಗಾಂಧಿನಗರ
ಬೆಂಗಳೂರು – ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು – ೫೭೫ ೦೦೧
✆ : ೦೮೨೪-೨೪೪೧೦೦೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು – ೫೭೫ ೦೦೧
✆ : ೦೮೨೪-೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು – ೫೭೦ ೦೨೪
✆ : ೦೮೨೧-೨೪೨೪೦೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ – ೫೮೫ ೧೦೨
✆ : ೦೮೪೭೨-೨೨೪೩೦೨

ಈ ತಿಂಗಳು (೩ನೇ ಪುಟದಿಂದ)

ಅಂಗೀಕರಿಸಬೇಕು. ಸಹಜವಾಗಿಯೇ ಅಂತಹ ನಿರ್ಣಯವು ವಿಶ್ವವಿದ್ಯಾನಿಲಯದ ಧನಸಹಾಯ ಆಯೋಗದ ನಿಯಮಾವಳಿ ಮತ್ತು ಸಂಬಂಧಿತ ಸರ್ಕಾರಗಳ ಘೋಷಿತ ನೀತಿಗಳಿಗೆ ವಿರುದ್ಧವಾಗಿರ ಕೂಡದು. ಇಂತಹ ಕ್ರಮಗಳನ್ನು ಕಟ್ಟುನಿಟ್ಟಾಗಿ ಪಾಲಿಸುವ ಜೊತೆಗೆ ವಿದ್ಯಾರ್ಥಿಗಳ ಮತ್ತು ಅಧ್ಯಾಪಕರ ಪ್ರತಿಕ್ರಿಯೆಗಳಿಗೆ ಸೂಕ್ತ ಮನ್ನಣೆ ನೀಡಬೇಕು. ಇದನ್ನೆಲ್ಲಾ ಮಾಡಿದ್ದೇವೆಂಬ ಖಾತರಿ ವಿಶ್ವವಿದ್ಯಾನಿಲಯದ ಉಪಕುಲಪತಿಗಳಿಗೆ ಇದ್ದರೆ ಮುಂದಿಟ್ಟ ಹೆಜ್ಜೆಯನ್ನು ಹಿಂದಕ್ಕೆ ತೆಗೆಯಬೇಕಿಲ್ಲ. ದೆಹಲಿ ವಿಶ್ವವಿದ್ಯಾಲಯದಲ್ಲಿ ನಾಲ್ಕು ವರ್ಷಗಳ ಪದವಿ ತರಗತಿಗಳನ್ನು ಜಾರಿಗೊಳಿಸಬೇಕೆಂಬ ತೀರ್ಮಾನವನ್ನು ಕಳೆದ ವರ್ಷ ತೆಗೆದುಕೊಳ್ಳಲಾಗಿತ್ತು. ಅದಕ್ಕೆ ಸಂವಿಧಾನಾತ್ಮಕ ಕ್ರಮಗಳನ್ನು ಅನುಸರಿಸಲಾಗಿತ್ತು. ಆದರೆ ವಿದ್ಯಾರ್ಥಿಗಳು, ಪೋಷಕರು ಮತ್ತು ಅಧ್ಯಾಪಕರು ಕೆಲವು ಆಕ್ಷೇಪಗಳನ್ನೆತ್ತಿದ್ದರು. ಅವಕ್ಕೆಲ್ಲಾ ಸೂಕ್ತ ಪ್ರತಿಕ್ರಿಯೆ ನೀಡಿ ನಿರ್ಣಯವನ್ನು ಜಾರಿಗೊಳಿಸುವ ತೀರ್ಮಾನ ಕೈಗೊಂಡಿದ್ದುದಾಗಿ ಉಪಕುಲಪತಿ ಕೆಲವು ತಿಂಗಳುಗಳಿಂದ ಹೇಳುತ್ತಲೇ ಬಂದರು. ಪ್ರಸಕ್ತ ವರ್ಷದಲ್ಲಿ ವಿದ್ಯಾರ್ಥಿಗಳ ಪ್ರವೇಶಕ್ಕೆ ಅದೇ ಹೊಸ ವಿಧಾನವನ್ನು ಅನುಸರಿಸುವುದಾಗಿ ಘೋಷಿಸಿದ್ದರು. ಚುನಾವಣೆ ನಡೆದು ಹೊಸ ಸರ್ಕಾರ ಬಂದಿತು, ಸ್ಮೃತಿ ಇರಾನಿ ಮಾನವ ಸಂಪನ್ಮೂಲ ಸಚಿವೆಯಾದರು. ಯುಜಿಸಿಯ ಅಧ್ಯಕ್ಷರಾಗಿ ಶ್ರೀ. ವೇದಪ್ರಕಾಶ್ ಅವರೇ ಮುಂದುವರಿದರು. ದೆಹಲಿ ವಿಶ್ವವಿದ್ಯಾಲಯದ ತೀರ್ಮಾನವನ್ನು ಒಪ್ಪಿದ್ದ ವೇದಪ್ರಕಾಶ್ ಅವರು ಸ್ಮೃತಿ ಇರಾನಿಯವರು ಬಂದ ನಂತರ 'ಉಲ್ಟಾ' ಹೊಡೆದರು ಮತ್ತು ಉಪಕುಲಪತಿಗೆ ಆಘಾತ ನೀಡಿದರು: ಹೊಸ ವಿಧಾನ ಕೂಡದು, ಹಳೆಯ ಮೂರು ವರ್ಷ ಅವಧಿಯ ನಿಯಮವೇ ಮುಂದುವರಿಯಬೇಕು, ಎಂದು. ಉಪಕುಲಪತಿಯ ಸಿಂಹನಾದ ಬಂದಿದ್ದು ಆಗ. ತಾವು ಸಂವಿಧಾನರೀತ್ಯಾ ತೀರ್ಮಾನ ಕೈಗೊಂಡಿದ್ದುದರಿಂದ ಆ ಹೊಸ ವಿಧಾನವನ್ನೇ ಅನುಸರಿಸುವುದಾಗಿ ಗುಡುಗಿದರು. ಸ್ಮೃತಿ ಇರಾನಿಯವರು "ಅದೆಲ್ಲಾ ನನಗೆ ಸಂಬಂಧಿಸಿಲ್ಲ, ನೀವೇ ಬಗೆಹರಿಸಿಕೊಳ್ಳಿ" ಎಂದು ಬುದ್ಧಿವಂತಿಕೆಯಿಂದ ಹಿಂದಕ್ಕೆ ಸರಿದು ವೇದಪ್ರಕಾಶ್ ಅವರನ್ನು ತಮ್ಮ ತೊಗಲುಗೊಂಬೆ ಮಾಡಿಕೊಂಡರು. ಕಡೆಗೆ, ಸ್ವಾಯತ್ತತೆಯ ಬಗ್ಗೆ ಧೀರವಾಣಿಯಿಂದ ತಮ್ಮ ಧೋರಣೆಯನ್ನು ಪ್ರತಿಪಾದಿಸಿದ್ದ ಉಪಕುಲಪತಿ ಬಾಲ ಮುದುರಿಕೊಂಡು ನಳ್ಳಿಯಂತಾದರು. ಇದು ಶಿಕ್ಷಣ ಸಂಸ್ಥೆಗಳ ಸ್ವಾಯತ್ತತೆಯನ್ನು ರಕ್ಷಿಸುವ ಪರಿಯಲ್ಲ ಮತ್ತು ಸ್ಮೃತಿ ಇರಾನಿಯವರು ಪರದೆಯ ಹಿಂದಿನಿಂದ ನಿರ್ಣಯಗಳನ್ನು ಪ್ರಭಾವಿಸಬೇಕಾಗಿಲ್ಲ. ಶಿಕ್ಷಣ ಸಂಸ್ಥೆಗಳ ಸ್ವಾಯತ್ತತೆಯು ಮೊದಲಿನಿಂದಲೂ ಬಾಯುಪಚಾರದ ಮಾತೇ ಆಗಿದೆ. ಅದನ್ನು ಗುಣಾತ್ಮಕವಾಗಿ ಬದಲಿಸಬೇಕಾದರೆ ಯುಜಿಸಿ ಮತ್ತು ವಿಶ್ವವಿದ್ಯಾಲಯಗಳು ತಮ್ಮ ಕಾಲು ಮತ್ತು ತಲೆಗಳನ್ನು ಗಟ್ಟಿಯಾಗಿಸಿಕೊಳ್ಳಬೇಕು. ಆಗ ಸ್ಮೃತಿ ಇರಾನಿ ಅವರು ತಮ್ಮ ಅಧಿಕಾರವನ್ನು ಸಂವಿಧಾನರೀತ್ಯಾ ನೇರವಾಗಿ ಚಲಾಯಿಸುವುದನ್ನು ಕಲಿಯುತ್ತಾರೆ.

✶ ✶ ✶

ಶ್ರೀ. ಗೋಪಾಲ ಸುಬ್ರಹ್ಮಣ್ಯಂ ಬದಲು ಗುಜರಾತಿನ ಒಬ್ಬ ಹಿರಿಯ ವಕೀಲರು ಸರ್ವೋಚ್ಚ ನ್ಯಾಯಾಲಯದಲ್ಲಿ ನ್ಯಾಯಮೂರ್ತಿ ಆಗಲಿದ್ದಾರೆ. ಒಬ್ಬರು ಶ್ರೀ. ನರೇಂದ್ರ ಮೋದಿಯವರನ್ನು ಗುಜರಾತಿನ ಮತೀಯ ಪಾತಕಗಳ ಸಂದರ್ಭದಲ್ಲಿ ಅಪರಾಧಿ ಸ್ಥಾನದಲ್ಲಿ ನಿಲ್ಲಿಸ ಹೊರಟಿದ್ದವರು, ಇನ್ನೊಬ್ಬರು ಶ್ರೀ. ಅಮಿತ್ ಷಾ ಅವರ ವಕೀಲರಾಗಿ ಅವರ ಕೈ ಹಿಡಿದೆತ್ತಿದವರು. ಅಷ್ಟು ಹೇಳಿದರೆ ಸಾಕು, ಇನ್ನು ಬೇರೆ ವ್ಯಾಖ್ಯಾನದ ಅಗತ್ಯವಿಲ್ಲ. ನ್ಯಾಯಮೂರ್ತಿಗಳ ಆಯ್ಕೆಗೆ ನಮ್ಮ ದೇಶವು ಅನುಸರಿಸುತ್ತಿರುವ ಪದ್ಧತಿಯಲ್ಲಿ ಎಷ್ಟು ತೂತುಗಳಿವೆಯೆಂಬುದು ಈ ಒಂದು ಪ್ರಸಂಗದಲ್ಲಿ ಸ್ಪಷ್ಟವಾಗುತ್ತಿದೆ. ಸರ್ವೋಚ್ಚ ನ್ಯಾಯಾಲಯದ ಕೆಲವು ನ್ಯಾಯಮೂರ್ತಿಗಳು 'ಕೊಲೀಜಿಯಂ' ಎನಿಸಿಕೊಳ್ಳುತ್ತಾರೆ ಮತ್ತು ಆ ಕೊಲೀಜಿಯಂ ಆಯ್ಕೆ ಮಾಡುತ್ತದೆ. ಅದು "ನ್ಯಾಯಾಂಗದ ಸ್ವಾತಂತ್ರ್ಯ"ವನ್ನು ಭದ್ರಗೊಳಿಸುವ ಸಾಧನವೆಂದು ಹೇಳಲಾಗುತ್ತದೆ. ತಮ್ಮನ್ನು ತಾವೇ ಆಯ್ಕೆ ಮಾಡಿಕೊಳ್ಳುವುದು, ತಮಗೆ ತಾವೇ ಬಡ್ತಿ ಕೊಟ್ಟುಕೊಳ್ಳುವುದು, ತಮ್ಮನ್ನು ತಾವೇ ಅಗತ್ಯಬಿದ್ದರೆ ದಂಡಿಸಿಕೊಳ್ಳುವುದು, ಇದೆಲ್ಲಾ ನ್ಯಾಯಾಂಗದ ಅನನ್ಯ ಸವಲತ್ತು. ಆದರೆ ಅದಕ್ಕೆ ಸಂವಿಧಾನಾತ್ಮಕ ಬಿಗಿ ಕವಚ ತೊಡಿಸಲಾಗಿದೆ. ಕೊಲೀಜಿಯಂ ಹೆಸರುಗಳನ್ನು ಕೇಂದ್ರ ಸರ್ಕಾರಕ್ಕೆ ಕಳಿಸುತ್ತದೆ. ಸರ್ಕಾರವು ಅಂಗೀಕರಿಸುತ್ತದೆ. ಇಲ್ಲವೇ ಷರಾ ಬರೆದು ಹಿಂದಿರುಗಿಸುತ್ತದೆ. ಆಗ ಕೊಲೀಜಿಯಂ ಅದೇ ಹೆಸರನ್ನು ಮತ್ತೆ ಕಳಿಸಿದರೆ ಸರ್ಕಾರ ಒಪ್ಪಲೇಬೇಕು. ಇಲ್ಲವಾದರೆ ಕೊಲೀಜಿಯಂ ಬೇರೊಂದು ಹೆಸರನ್ನು ಕಳಿಸಬಹುದು. ಕೊಲೀಜಿಯಂ ಗೋಪಾಲ ಸುಬ್ರಹ್ಮಣ್ಯಂ ಅವರ ಹೆಸರನ್ನು ಕಳಿಸಿತು, ಆದರೆ ಸರ್ಕಾರ ಅದನ್ನು ಅಂಗೀಕರಿಸಲಿಲ್ಲ. ಮುಂದೆ 'ಕೊಲೀಜಿಯಂ' ಏನು ಮಾಡಬಹುದಿತ್ತು? ಮತ್ತೆ ಅದೇ ಹೆಸರನ್ನು ಕಳಿಸಬಹುದಿತ್ತು, ಇಲ್ಲವೆ ಬೇರೊಂದು ಹೆಸರನ್ನು ಸೂಚಿಸಬಹುದಿತ್ತು. ನ್ಯಾಯಾಂಗದ ತಥಾಕಥಿತ ಸ್ವಾತಂತ್ರ್ಯದ ಪರೀಕ್ಷೆ ನಡೆಯುವುದಿತ್ತು, ಆದರೆ ಗೋಪಾಲ ಸುಬ್ರಹ್ಮಣ್ಯಂ ಸ್ವತಃ ತಾವೇ ತಮ್ಮ ಹೆಸರನ್ನು ಹಿಂದಕ್ಕೆ ತೆಗೆದುಕೊಂಡರು. ನ್ಯಾಯಾಂಗದ ಸ್ವಾಯತ್ತತೆಯ ಪರೀಕ್ಷೆ ಅದರಿಂದಾಗಿ ನಡೆಯದೇ ಹೋಯಿತು. ಅಂದರೆ, ಶ್ರೀ. ಮೋದಿಯವರ ಸರ್ಕಾರವು ಮಗುಮ್ಮಾಗಿ ತನಗೆ ಇಚ್ಛೆ ಬಂದಂತೆ ನಡೆದುಕೊಂಡಿತು. ಹಾಗೆ ನಡೆದುಕೊಳ್ಳಲು ಗೋಪಾಲ ಸುಬ್ರಹ್ಮಣ್ಯಂ ಅವಕಾಶ ಕಲ್ಪಿಸಿಕೊಟ್ಟರು. ಆಮೇಲೆ ಕೊಲೀಜಿಯಂ ಅಮಿತ್ ಷಾ ಅವರ ವಕೀಲರ ಹೆಸರನ್ನು ಸರ್ಕಾರಕ್ಕೆ ಕಳಿಸಿತು. ಇದರಲ್ಲೆಲ್ಲಾ ಸ್ವತಂತ್ರ ಆಯ್ಕೆ ಯಾವುದು, ಅತಂತ್ರ ಆಯ್ಕೆ ಯಾವುದು, ಎಂಬುದನ್ನು ಯಾರೂ ಪ್ರಶ್ನಿಸುವಂತಿಲ್ಲ. ಒಟ್ಟಿನಲ್ಲಿ "ನ್ಯಾಯಾಂಗದ ಸ್ವಾತಂತ್ರ್ಯವನ್ನು ಅಲುಗಾಡಿಸಲು ನಾನು ಅವಕಾಶವನ್ನು ಸರ್ವಥಾ ನೀಡುವುದಿಲ್ಲ" ಎಂದು ಸರ್ವೋಚ್ಚ ನ್ಯಾಯಾಲಯದ ಮುಖ್ಯ ನ್ಯಾಯಾಧೀಶರು ಘೋಷಿಸಿಬಿಟ್ಟಿದ್ದಾರೆ. ಅಲ್ಲಿಗೆ ನಾಟಕದ ಅಂಕ ಮುಗಿದು ಪರದೆ ಬಿದ್ದಿದೆ.

ಈ ಸಂಬಂಧದಲ್ಲಿ ಮನೋಜ್ ಮಿತ್ತ ಎಂಬ ಪತ್ರಿಕಾ ಸಂಪಾದಕರು ಕೆಲವು ತಿಂಗಳುಗಳ ಹಿಂದೆ ಪ್ರಕಟಿಸಿದ ಒಂದು ಪುಸ್ತಕದ ಅವಗಾಹನೆ ಸೂಕ್ತವಾಗಿರುತ್ತದೆ. ಪುಸ್ತಕದ ಹೆಸರು "ಸತ್ಯಶೋಧನೆಯೆಂಬ ಕಟ್ಟುಕತೆ" (The Fiction of Fact-finding) ಅಥವಾ "ಮೋದಿ ಮತ್ತು ಗೋಧ್ರಾ" ಎಂಬುದಾಗಿದೆ. ಕಳೆದ ಇಪ್ಪತ್ತು ವರ್ಷಗಳಲ್ಲಿ ಗೋಧ್ರಾ ಮತ್ತು ಗುಜರಾತ್‌ನ ಮತೀಯ ಹತ್ಯೆಗಳ ಪ್ರಸಂಗವು ಕಾನೂನಿನ ಸಮರದಲ್ಲಿ ಸಾಗಿಬಂದಿರುವ ವಿಚಿತ್ರ ಹಾದಿಯನ್ನು ಇದರಲ್ಲಿ ವಿಸ್ತಾರವಾಗಿ ವಿಶ್ಲೇಷಿಸಲಾಗಿದೆ. ಪ್ರಕಾಶಕರು : ಹಾರ್ಪರ್ ಕಾಲಿನ್ಸ್, ೨೦೧೪. ಪ್ರತಿಯೊಂದು ಇಕ್ಕಟ್ಟಿನ ಸಂದರ್ಭದಲ್ಲೂ ಶ್ರೀ. ಮೋದಿಯವರನ್ನು ರಕ್ಷಿಸಲು ತನಿಖಾಧಿಕಾರಿಗಳಾಗಿದ್ದ ಆರ್. ಕೆ. ರಾಘವನ್ (ಮಾಜಿ ಸಿ. ಬಿ. ಐ. ನಿರ್ದೇಶಕ) ಮತ್ತು ಜೆ. ಎಸ್. ವರ್ಮಾ (ಮಾಜಿ ಸರ್ವೋಚ್ಚ ನ್ಯಾಯಾಲಯದ ನ್ಯಾಯಮೂರ್ತಿ) ಹೇಗೆ ಲೋಪಗಳನ್ನೆಸಗಿದರೆಂಬುದನ್ನು ಟೈಮ್ಸ್ ಆಫ್ ಇಂಡಿಯಾದ ಪತ್ರಕರ್ತ ಮನೋಜ್ ಮಿತ್ತ ಈ ಪುಸ್ತಕದಲ್ಲಿ ಅತ್ಯಂತ ವಿವರವಾಗಿ ತೋರಿಸಿಕೊಟ್ಟಿದ್ದಾರೆ. ನಮ್ಮ ವ್ಯವಸ್ಥೆಯಲ್ಲಿ ವಸ್ತುನಿಷ್ಠವಾಗಿ ನ್ಯಾಯವು ದೊರೆಯುವುದು ಮರೀಚಿಕೆಯಾಗಿದೆ ಎಂಬುದನ್ನು ಹೊಸದಾಗಿ ಹೇಳಬೇಕಾಗಿಲ್ಲ. ಆದರೆ ಮಿತ್ತ ಅದನ್ನು ಮೋದಿ –ಗುಜರಾತ್ ಹಿನ್ನೆಲೆಯಲ್ಲಿ ಆಮೂಲಾಗ್ರವಾಗಿ ನಿರೂಪಿಸಿದ್ದಾರೆ. ಕೊಲೀಜಿಯಂ ಹೇಳಿಕೊಳ್ಳುವ "ನ್ಯಾಯಾಂಗದ ಸ್ವಾತಂತ್ರ್ಯವನ್ನು ಎತ್ತಿಹಿಡಿಯುವ ಪ್ರಕ್ರಿಯೆ" ರಾಘವನ್ – ವರ್ಮಾರಂತಹವರ ತಂತ್ರಗಳಿಂದ ಮುಕ್ತವಾಗಿಲ್ಲವೆಂಬುದಂತೂ ಸ್ಥಿರಸತ್ಯ.

✶ ✶ ✶

ಮುಂಬೈನ ಸಮುದ್ರತೀರದಲ್ಲಿ ನಾರಿಮನ್ ಪಾಯಿಂಟ್ ಎಂಬುದು ಪ್ರಸಿದ್ಧವಾದ ಜಾಗ. ಸಮುದ್ರವನ್ನು ಹಿಂದಕ್ಕೆ ದೂಡಿ ಭೂಮಿಯನ್ನು ದೊರಕಿಸಿಕೊಂಡಿರುವ ಅಪೂರ್ವ ಜಾಗ ಅದು. ಭೂಮಿಯ ಬೆಲೆ ಅಲ್ಲಿ ಮುಂಬೈನಲ್ಲಿ ಬೇರೆಲ್ಲೂ ಇಲ್ಲದಿರುವಷ್ಟು ದುಬಾರಿ. ಅಲ್ಲಿ ಒಂದಂಗುಲದಷ್ಟು ಭೂಮಿ ಇದ್ದರೆ ಸಾಕು, ಕೋಟಿಗಟ್ಟಲೆ ಸಂಪತ್ತು ಪಡೆಯಬಹುದು. ಈಗಿನ ಕತೆ ಇರಲಿ, ಈಗ್ಗೆ ಎಂಭತ್ತು ವರ್ಷಗಳ ಹಿಂದೆ ಎಸ್. ಕೆ. ಪಾಟೀಲ್ ಹೇಳಿದ್ದರು, "ಇಲ್ಲಿಯ ಒಂದೊಂದು ಮರಳಿನ ಕಣದ ಬೆಲೆಯೂ ಅದರ ತೂಕದ ಚಿನ್ನಕ್ಕಿಂತಲೂ ಹೆಚ್ಚು ಬೆಲೆಯುಳ್ಳದ್ದು" ಎಂದು. ಅಲ್ಲಿ ಇಂಡಿಯನ್ ಎಕ್ಸ್‌ಪ್ರೆಸ್ ಸಂಸ್ಥೆಯು ತನ್ನ ಕಟ್ಟಡ ಮತ್ತು ಜಾಗವನ್ನು ಹೊಂದಿತ್ತು; ಈಚೆಗೆ ಅದನ್ನು ೮೭೦ ಕೋಟಿ ರೂಪಾಯಿಗಳಿಗೆ ಮಾರಿದೆ. ಅದರಲ್ಲಿ ಸಾರ್ವಜನಿಕರಿಗೆ ಏನು ಹಾನಿ ಎಂಬ ಪ್ರಶ್ನೆ ಅಪ್ರಸ್ತುತವಲ್ಲ. ಇಂಡಿಯನ್ ಎಕ್ಸ್‌ಪ್ರೆಸ್‌ನಂತಹ ಸಂಸ್ಥೆ ಆ ಜಾಗದಲ್ಲಿ ತನ್ನ ಆಸ್ತಿ ಮಾಡಿಕೊಳ್ಳಲು ಎಂತಹ ಪ್ರಭಾವ ಬೀರಿದ್ದಿರಬೇಕೆಂಬುದನ್ನು ಸಾರ್ವಜನಿಕರು ಗಮನಿಸಬೇಕು. ಅದನ್ನು ತಿಳಿಯುವುದು ಸುಲಭ: ಬೆಂಗಳೂರಿನ ಅತ್ಯಂತ ಪ್ರಶಸ್ತವಾದ ಜಾಗದಲ್ಲಿ

ಇಂಡಿಯನ್ ಎಕ್ಸ್‌ಪ್ರೆಸ್‌ನ ಕಟ್ಟಡವಿದೆ. ಅದರ ಬೆಲೆ ಎಷ್ಟಿರಬಹುದೆಂದು ಊಹಿಸುವಷ್ಟು ಜಾಣ್ಮೆ ಮತ್ತು ಅನುಭವ ನಮಗಿಲ್ಲ. ಅದೂ ೫೦೦–೭೦೦ ಕೋಟಿ ರೂಪಾಯಿಗಳಿರಬಹುದೇನೋ! ಅದನ್ನು ರಾಮನಾಥ ಗೋಯೆಂಕಾ ತಮ್ಮ ಇಂಡಿಯನ್ ಎಕ್ಸ್‌ಪ್ರೆಸ್‌ಗಾಗಿ ಪಡೆದದ್ದು ಕೆಲವು ಕವಡೆ ಕಾಸುಗಳನ್ನು ಕೊಟ್ಟು! ಮಾನ್ಯ ಶ್ರೀ. ಎಸ್. ನಿಜಲಿಂಗಪ್ಪನವರು ಮುಖ್ಯಮಂತ್ರಿಯಾಗಿದ್ದಾಗ ಸರ್ಕಾರ ಆ ವಿಶಾಲ ಜಾಗವನ್ನು ಗೋಯೆಂಕಾಗೆ ಕೊಟ್ಟರು. ಚದರಡಿಗೆ ಹತ್ತು ರೂಪಾಯಿಗಳನ್ನೂ ಪಡೆಯಲಿಲ್ಲವೋ ಏನೊ! ಆಗ ಅವರು ಹೇಳಿದ್ದು "ಪತ್ರಿಕಾ ಸ್ವಾತಂತ್ರ್ಯವು ಪ್ರಜಾಪ್ರಭುತ್ವಕ್ಕೆ ಅತ್ಯಂತ ಅಗತ್ಯವಾದ್ದು, ಅದನ್ನು ಪೋಷಿಸಲು ಈ ಜಾಗವನ್ನು ಇಂಡಿಯನ್ ಎಕ್ಸ್‌ಪ್ರೆಸ್‌ಗೆ ನೀಡಲಾಗುತ್ತಿದೆ" ಎಂದು. ಆ ಪತ್ರಿಕಾ ಸ್ವಾತಂತ್ರ್ಯವನ್ನು ವಿ. ಕೆ. ಕೃಷ್ಣ ಮೆನನ್ "ಜೂಟ್ (ಸೆಣಬಿನ) ಪ್ರೆಸ್‌ನ ಸ್ವಾತಂತ್ರ್ಯ" ಎನ್ನುತ್ತಿದ್ದರು. ಅದು ಬೇರೆ ಮಾತು. ಈಗ ಊಹಿಸಿಕೊಳ್ಳೋಣ: ಗೋಯೆಂಕಾ ಕುಟುಂಬವು ಒಡೆದಿದೆ, ಪಾಲುದಾರರು ಹಲವರಿದ್ದಾರೆ. ಇಂಡಿಯನ್ ಎಕ್ಸ್‌ಪ್ರೆಸ್ ಕಟ್ಟಡ ಮತ್ತು ಜಾಗ ಮಾರಿದರೆ ಬರುವ ಲಾಭವೆಷ್ಟು? ಆ ಜಾಗವನ್ನು ಇವರು ಪಡೆದದ್ದು ಎಷ್ಟಕ್ಕೆ ಮತ್ತು ಏತಕ್ಕೆ? ಅದನ್ನು ಮಾರಕೂಡದು, ಪತ್ರಿಕೆ ಯಾವುದೇ ಕಾರಣಕ್ಕೆ ನಿಂತು ಹೋದರೆ ಇಡೀ ಕಟ್ಟಡವು ಸರ್ಕಾರದ್ದಾಗುತ್ತದೆ, ಎಂಬ ನಿಬಂಧನೆಯೇನಾದರೂ ಕರಾರುಪತ್ರದಲ್ಲಿದೆಯೇ? ಮುಂಬೈಯಲ್ಲಿ "ಪ್ರಜಾಪ್ರಭುತ್ವದ ರಕ್ಷಣೆಗಾಗಿ ಪತ್ರಿಕಾ ಸ್ವಾತಂತ್ರ್ಯವನ್ನು ಅನುಭವಿಸಿದ ಇಂಡಿಯನ್ ಎಕ್ಸ್‌ಪ್ರೆಸ್" ಈಗ ೮೭೦ ಕೋಟಿಯ ಒಡೆಯ. ಬೆಂಗಳೂರಿನಲ್ಲಿ ಇನ್ನಷ್ಟು ಪಡೆಯಬಹುದು. ಈ ಸಂದರ್ಭದಲ್ಲಿ ಇನ್ನೊಂದು ಅಂಶವನ್ನೂ ಗಮನಿಸಬೇಕು: ಬೆಂಗಳೂರಿನಲ್ಲಿ "ದಿ ಹಿಂದು" ಪತ್ರಿಕೆಯು ಇನ್‌ಫೆಂಟ್ರಿ ರಸ್ತೆಯಲ್ಲಿ ವಿಶಾಲ ಜಾಗವನ್ನು ಹೊಂದಿದೆ. ಕೆಲವು ವರ್ಷಗಳ ಹಿಂದೆ ಕರ್ನಾಟಕದ ಸರ್ಕಾರವು ಆ ಜಾಗವನ್ನು ಪತ್ರಿಕೆಗಾಗಿ ಕನಿಷ್ಠ ದರದಲ್ಲಿ ಕೊಟ್ಟಿತು. ಅದನ್ನೂ "ಪ್ರಜಾಪ್ರಭುತ್ವದ ರಕ್ಷಣೆಗಾಗಿಯೇ" ನೀಡಿದ್ದು. ಈ ಎಲ್ಲ ಪ್ರಕರಣಗಳಲ್ಲಿ ಕರಾರುಪತ್ರಗಳು ಯಾವ ನಿಬಂಧನೆಗಳನ್ನು ಅಳವಡಿಸಿಕೊಂಡಿವೆ ಎಂಬುದು ಸಾರ್ವಜನಿಕರು ತಿಳಿಯಬೇಕಾದ ವಿಷಯ. ಈಗಲೇ ಮಾಹಿತಿ ಹಕ್ಕಿನ ಕಾಯ್ದೆಯಡಿ ಆ ವಿವರಗಳನ್ನು ಪಡೆದು ಬಹಿರಂಗಪಡಿಸುವ ಅವಶ್ಯಕತೆ ಇದೆ.

* * *

ಕರ್ನಾಟಕದ ಮಾಜಿ ಮುಖ್ಯಮಂತ್ರಿ ಶ್ರೀ. ಎಚ್. ಡಿ. ಕುಮಾರಸ್ವಾಮಿಯವರ ಮೇಲೆ ಸರ್ಕಾರವು ಮೊಕದ್ದಮೆ ಹೂಡುತ್ತದೆಂಬ ಸುದ್ದಿ ಬಂದಿದೆ. ಅವರ ಪಕ್ಷದ ಸದಸ್ಯರು ವಿಧಾನಸಭೆಯಲ್ಲಿ ಮತ ಚಲಾಯಿಸಲು ಒಂದು ಕೋಟಿ ರೂಪಾಯಿ ಕೇಳಿದ್ದರೆಂಬ ಹಿನ್ನೆಲೆಯಲ್ಲಿ ಬಂದಿರುವ ಮೊಕದ್ದಮೆ ಇದು. ಎಂತೆಂತಹ ಮೊಕದ್ದಮೆಗಳೇ ಹಾರಿಹೋಗಿವೆ, ಅಂಥದರಲ್ಲಿ ಇದು ನಿಲ್ಲಬಹುದೆ? ಯಡಿಯೂರಪ್ಪ, ಸುಬ್ರಹ್ಮಣ್ಯ ನಾಯಿಡು, ಜನಾರ್ದನ ರೆಡ್ಡಿ, ಇತ್ಯಾದಿಗಳು ಸುಕ್ಷೇಮವಾಗಿರುವಾಗ ಕುಮಾರಸ್ವಾಮಿಯವರು ಭಯಬೀಳುವ ಅಗತ್ಯವೆಲ್ಲಿದೆ? ಮಾನ್ಯ ಶ್ರೀ. ದೇವೇಗೌಡರು ಕುದುರೆ ಎಂ. ಎ. ಎಂ. ರಾಮಸ್ವಾಮಿ, ಚಾನೆಲ್ ಒಡೆಯ ರಾಜೀವ ಚಂದ್ರಶೇಖರ, ಅಂಥವರನ್ನು ರಾಜ್ಯಸಭೆಗೆ ನಮ್ಮ ರಾಜ್ಯದಿಂದ ಕಳಿಸಿದ ಖ್ಯಾತಿಯನ್ನುಳ್ಳವರು. ಅದರಲ್ಲೆಲ್ಲಾ "ರಾಜ್ಯದ ಹಿತ" ಎಷ್ಟು ಅಡಗಿತ್ತೆಂಬುದರ ಸಂಶೋಧನೆ ಅನಗತ್ಯ. ಬದಲಾಗಿ, ವ್ಯವಹಾರವನ್ನು ಎಷ್ಟು ಚಮತ್ಕಾರದಿಂದ ಮತ್ತು ಯಾವ ಮಟ್ಟದಲ್ಲಿ ಕುದುರಿಸಿಕೊಳ್ಳಲಾಯಿತು ಎಂಬುದು ನಿಗೂಢ ಪ್ರಶ್ನೆ. ಈ ವರ್ಷ ಮತ್ತೆ ಇಬ್ಬರು (ಕುಪೇಂದ್ರ ಮತ್ತು ಕುಪಿತೇಂದ್ರ ಇರಬಹುದು) ರಾಜ್ಯಸಭೆಗೆ ಏರಿಹೋಗಿದ್ದಾರೆ. ಅದರಲ್ಲಿ ಕೋಟಿ ಉಂಟೋ ಅಥವಾ "ರಾಜ್ಯದ ಹಿತ"ವುಂಟೋ ರಾಜ್ಯದ ನಾಗರಿಕರು ಪರೀಕ್ಷಿಸಿಕೊಳ್ಳಬೇಕು. ಒಟ್ಟಿನಲ್ಲಿ ವಿಧಾನಸಭೆಯ ಶಾಸಕರು ಮತ ಹಾಕುತ್ತಾರೆ, ದೇವೇಗೌಡರ ಪಕ್ಷವು "ರಾಜ್ಯದ ಹಿತ"ವನ್ನು ಚಾತುರ್ಯದಿಂದ ಕಾಪಾಡುತ್ತದೆ. ಹೀಗೆ ಕಾಪಾಡಲು ತಮ್ಮ ಪಾಲೂ ಇದೆಯೆಂದರಿತ ಶಾಸಕರು ತಮ್ಮ ಪಾಲಿನ "ಕೂಲಿ" ಕೇಳುತ್ತಿದ್ದಾರೆ, ಅಷ್ಟೆ. ಅಷ್ಟಕ್ಕೂ ಮಾನ್ಯ ಕುಮಾರಸ್ವಾಮಿಯವರು ಸದರಿ ಕೂಲಿಯನ್ನು ಕೊಟ್ಟಿದ್ದಾರೆಂದು ಎಲ್ಲೂ ದಾಖಲಾಗಿಲ್ಲ. ಹೀಗಿರುವಾಗ ಮೊಕದ್ದಮೆಯ ಭವಿಷ್ಯವು ಪೂರ್ವನಿರ್ಧಾರಿತವಾದ್ದು. ನಮ್ಮ ಕೂಲಿಯಿಂದ ನಿಮ್ಮ ಸಂಪತ್ತು ವೃದ್ಧಿಯಾಗುತ್ತಿದೆಯಾದ್ದರಿಂದ ನಮಗೂ ಒಂದಿಷ್ಟು ಕೂಲಿ ಕೊಡಿರೆಂದು ಕೇಳುವುದರಲ್ಲಿ ತಪ್ಪೇನಿದೆಯೆಂದು ಶಾಸಕರು ವಾದಿಸಿಯಾರು! ಜೈ ಕರ್ನಾಟಕ ಎನ್ನಬೇಕೆ? ಕೆಲವು ಪ್ರಸಂಗಗಳು ಬಯಲಾಗುತ್ತವೆ, ಅವುಗಳ ನೂರುಪಟ್ಟು ಗುಟ್ಟಾಗಿಯೇ ಉಳಿಯುತ್ತವೆ. ಅದು ನಮ್ಮ ಪ್ರಜಾಪ್ರಭುತ್ವದ ವೈಖರಿ. ಇದನ್ನು ನಿವಾರಿಸಬೇಕೆ? ಹಾಗಿದ್ದರೆ, ಚುನಾವಣೆಗಳಲ್ಲಿ ಅನುಪಾತಾಧಾರಿತ ಪ್ರಾತಿನಿಧ್ಯವನ್ನು ಜಾರಿಗೊಳಿಸಲು ಬದ್ಧರಾಗೋಣ. ಅದು ಕನಿಷ್ಠ ಮಟ್ಟದ ಅಗತ್ಯ. ಅದರಿಂದಲೂ ಪರಿಹಾರವಾಗದ ದೊಡ್ಡ ರೋಗಗಳಿವೆ, ಅವನ್ನು ಜನತೆಯು ತನ್ನ ವೈದ್ಯಕೀಯದಿಂದ ಗುಣಪಡಿಸಬೇಕು.

* * *

ಜುಲೈ ಎರಡನೆಯ ವಾರದಲ್ಲಿ ಅಪರೂಪದ ವೇದ ವಿದ್ವಾಂಸರೊಬ್ಬರು ಬೆಂಗಳೂರಿನಲ್ಲಿ ಗತಿಸಿದರು. ಆಗ್ಗೆ ಡಾ॥ ಶ್ರೀಕಂಠಕುಮಾರಸ್ವಾಮಿಯವರಿಗೆ ಸುಮಾರು ೮೫ರ ಪ್ರಾಯ. ಬನಾರಸ್ ಹಿಂದು ವಿಶ್ವವಿದ್ಯಾನಿಲಯದಲ್ಲಿ ಶ್ರೀಯುತರು ಲೋಹಶಾಸ್ತ್ರವನ್ನು (ಮೆಟಲರ್ಜಿ) ಅಧ್ಯಯನ ಮಾಡಿ ಭದ್ರಾವತಿ ಉಕ್ಕು ಕಾರ್ಖಾನೆಯಲ್ಲಿ ಪೈಪ್ ಫೌಂಡ್ರಿ ಮತ್ತು ಬ್ಲಾಸ್ಟ್ ಫರ್ನೇಸ್ ವಿಭಾಗಗಳ ನಿರ್ದೇಶಕರಾಗಿ ಕೆಲಸ ಮಾಡಿದ್ದರು. ನಂತರ ಚೆನ್ನೈನ ಐ.ಐ.ಟಿ.ಯಲ್ಲಿ ಮೆಟಲರ್ಜಿ ಪ್ರಾಧ್ಯಾಪಕರಾಗಿ ಸುಮಾರು ಮೂರು ದಶಕಗಳ ಕಾಲ ಕೆಲಸ ಮಾಡಿದ್ದರು. ವಿಶೇಷವೇನೆಂದರೆ ಅವರು ಮೆಟಲರ್ಜಿಯಲ್ಲಿ ಪಾರಂಗತರಾಗಿದ್ದಂತೆ ವೇದಾಧ್ಯಯನದಲ್ಲೂ ಅಗಾಧ ಪರಿಣತಿ ಹೊಂದಿದ್ದರು. ಸ್ವತಃ ಘನಪಾಠಿಗಳಾಗಿದ್ದ ಅವರು "ಘನಪಾಠವು ಹೇಳಲು ಮತ್ತು ಕೇಳಲು ಚಂದ, ಆದರೆ ಅದು ನಿರುಪಯುಕ್ತ" ಎಂದು ಹೇಳುತ್ತಿದ್ದರು. "ಘನಪಾಠವಿರುವುದು ವೇದದ ಸ್ವರಗಳನ್ನು ಸ್ಪಷ್ಟವಾಗಿ ನಿಗದಿಗೊಳಿಸಲು; ಅಚ್ಚಾದ ಗ್ರಂಥ ನಿಮ್ಮ ಮುಂದಿರುವಾಗ ಸ್ವರಗಳು ಸ್ಪಷ್ಟವಾಗೇ ಇರುತ್ತವೆ, ಇನ್ನು ಹತ್ತು ವರ್ಷ ಅನಗತ್ಯವಾಗಿ ಪಾಠ ಹೇಳಿಸಿಕೊಂಡು ಸ್ವರಗಳನ್ನು ಸ್ಪಷ್ಟವಾಗಿರಿಸುವ ಪ್ರಮೇಯ ಎಲ್ಲಿಯದು?" ಎಂಬುದು ಅವರ ತಿಳಿವಳಿಕೆ. ವೇದವು ಅಪೌರುಷೇಯವೆಂಬ ಮಾತನ್ನು ಸಹ ಅವರು ಅಲ್ಲಗಳೆಯುತ್ತಿದ್ದರು. "ಯಾವುದನ್ನಾದರೂ ಗೌರವಿಸಿ ಉನ್ನತ ಸ್ಥಾನ ಕೊಡಬೇಕಾದರೆ ಇಂತಹ ವಿಶೇಷಣಗಳನ್ನು ಬಳಸುತ್ತೇವೆ. ಅದನ್ನು ಅಕ್ಷರಶಃ ಹಾಗೆ ತೆಗೆದುಕೊಳ್ಳುವುದು ಮೂರ್ಖತನವಾದೀತು. ಪುರುಷ ಪ್ರಯತ್ನವಿಲ್ಲದೆ ಯಾವ ಗ್ರಂಥವೂ ಅಸ್ತಿತ್ವಕ್ಕೆ ಬರುವುದಿಲ್ಲ. ಅದು ವೇದ, ಕುರ್–ಅನ್, ಬೈಬಲ್ ಇತ್ಯಾದಿಗಳಿಗೆಲ್ಲಾ ಏಕಪ್ರಕಾರವಾಗಿ ಅನ್ವಯವಾಗುತ್ತದೆ" ಎಂಬುದು ಅವರ ನಿಚ್ಚಳ ತತ್ವವಾಗಿದ್ದಿತು. ವೇದದ ಅರ್ಥವನ್ನು ತಿಳಿಯದೆ ಅದರ ಬಗ್ಗೆ ಏನೇನೋ ಹೇಳುವುದು, ಎಲ್ಲಾ ನಿಗೂಢಾರ್ಥವುಳ್ಳದ್ದು ಎನ್ನುವುದು, ಇವೆಲ್ಲಾ ಬಾಲಿಶತನದ ಚಿಹ್ನೆಗಳೆಂದು ಅವರು ಖಡಾಖಂಡಿತವಾಗಿ ಪ್ರತಿಪಾದಿಸುತ್ತಿದ್ದರು. ಜನಿವಾರವನ್ನು ಯಾವಾಗ ಹೇಗೆ ಧರಿಸಬೇಕು, ಎಂಬಿತ್ಯಾದಿ ಆಚರಣೆಗಳು ಸರ್ವಥಾ ವೈಜ್ಞಾನಿಕವೆಂದು ವಾದ ಹೂಡುವುದು ಅವಿವೇಕ, ಆಚರಣೆಗಳಿಗೆಲ್ಲಾ ಅನರ್ಥಕ ವೈಜ್ಞಾನಿಕ ಸಮರ್ಥನೆ ನೀಡಹೋಗುವುದು ವಿಜ್ಞಾನಕ್ಕೆ ಅಪಚಾರವೆಸಗಿದಂತೆ, ಎಂದು ಸಹ ಅವರು ಪ್ರತಿಪಾದಿಸುತ್ತಿದ್ದರು. "ವೈದಿಕ ವಾಙ್ಮಯ" ಎಂಬ ಸಿ.ಡಿ.ಯನ್ನು ಹೊರತಂದು ತಮ್ಮ ವಿಚಾರಗಳನ್ನು ಅವರು ವಿಶದಪಡಿಸಿದ್ದರು. ಆಚರಣೆಗಳನ್ನು ಸರ್ವದಾ ಶ್ರೇಷ್ಠವೆಂದು ಬಗೆಯದ ಈ ಹಿರಿಯ ವಿದ್ವಾಂಸರು ತಮ್ಮ ಸಾವಿನ ನಂತರ ಶರೀರವನ್ನು ಆಸ್ಪತ್ರೆಗೆ ದಾನ ಮಾಡಬೇಕೆಂದೂ, ಯಾವ ಉತ್ತರಕ್ರಿಯೆಗಳನ್ನೂ ನಡೆಸಬೇಕಾಗಿಲ್ಲವೆಂದೂ, ತಿಳಿಸಿದ್ದರು. ಅದರಂತೆ ನಡೆಯಿತು. ಇಂತಹ ಉದ್ದಾಮ ತಂತ್ರಶಾಸ್ತ್ರ ವಿಶಾರದ ಮತ್ತು ವೇದ ವಿದ್ವಾಂಸರನ್ನು ನಾವು ನೆನೆಯಬೇಕು, ಅವರ ವಿಚಾರಗಳನ್ನು ಮನನ ಮಾಡಬೇಕು. ಸ್ತ್ರೀಯರಿಗೆ ವೇದ ಹೇಳಿಕೊಡಬಾರದೆಂಬ ಸಾಂಪ್ರದಾಯಿಕ ಜಡ್ಡುತನವನ್ನು ನಿರಾಕರಿಸಿ ಮಾನ್ಯ ಡಾ॥ ಶ್ರೀಕಂಠಕುಮಾರಸ್ವಾಮಿಯವರು ತಮ್ಮ ಮಗಳಿಗೆ ಘನಪಾಠದವರೆಗಿನ ವೇದಪಾಠ ಹೇಳಿಕೊಟ್ಟಿದ್ದಾರೆ. ದುರದೃಷ್ಟವೆಂದರೆ ಅಂತಹ ಧೀಮಂತರನ್ನು ಪ್ರಸ್ತುತ ಲೇಖಕ ಸಂಧಿಸಿದ್ದು ಕೇವಲ ಒಂದು ಬಾರಿ, ಅದೂ ಅವರ ನಿಧನಕ್ಕೆ ಎರಡು ವಾರ ಮುಂಚೆ. ಆ ವೇಳೆಗೆ ಶ್ರೀಯುತರು ಗಾಲಿಕುರ್ಚಿಯಲ್ಲಿರುತ್ತಿದ್ದರು, ಹೆಚ್ಚಾಗಿ ಮಾತನಾಡುವ ಶಕ್ತಿ ಕಳೆದುಕೊಂಡಿದ್ದರು. ಅವರ ಮಗಳ ಸೌಜನ್ಯದಿಂದ ಮತ್ತು "ಉತ್ಥಾನ" ಮಾಸ ಪತ್ರಿಕೆಯ ಸಂಪಾದಕರ ಸಹಾಯದಿಂದ ಈ ಭೇಟಿ ಸಾಧ್ಯವಾಗಿತ್ತು. ಮಾನ್ಯ ಡಾ॥ ಶ್ರೀಕಂಠಕುಮಾರಸ್ವಾಮಿಯವರಿಗೆ 'ಹೊಸತು' ತಲೆಬಾಗುತ್ತದೆ.

* * *

ನಮ್ರತೆಯಿಂದ ಕೈ ಮುಗಿದು ಮತ ಯಾಚಿಸಿ ಶಾಸಕರಾಗುತ್ತಾರೆ. ಒಮ್ಮೆ ಚುನಾಯಿತರಾದ ಮೇಲೆ ಅವರು ಮತದಾರರನ್ನು ಕಡೆಗಣಿಸುತ್ತಾರೆ. ಹಣ ಹೆಂಡ ಸುರಿದು ಜನರಿಂದ ಮತ ಪಡೆಯುವವರಿಂದ

ಬೇರೆ ಏನನ್ನೂ ನಿರೀಕ್ಷಿಸಲಾಗದು. ಇವರಿಗೊಂದು ನೀತಿಸಂಹಿತೆ ಇಲ್ಲ. ಚುನಾಯಿತ ಪ್ರತಿನಿಧಿಗಳು ಹೇಗೆ ನಡೆದುಕೊಳ್ಳಬೇಕೆಂಬ ಪರಿಜ್ಞಾನವೂ ಇರುವುದಿಲ್ಲ. ಶಾಸಕರಲ್ಲಿ ಸಾಕಷ್ಟು ಮಂದಿಯ ಮೇಲೆ ಕ್ರಿಮಿನಲ್ ಮೊಕದ್ದಮೆಗಳು ದಾಖಲೆಯಾಗಿವೆ. ನಮ್ಮ ವಿಧಾನಸಭೆಯಲ್ಲಿರುವ ಬಹುತೇಕ ಮಂದಿ ಕೋಟ್ಯಾಧೀಶರುಗಳು. ಒಮ್ಮೆ ಚುನಾಯಿತರಾದರೆಂದರೆ ಇವರು ಆಡಿದ್ದೇ ಆಟ. ಪೊಲೀಸ್ ಪೇದೆಗಳು ಇವರ ಅಟ್ಟಹಾಸಕ್ಕೆ ಬಲಿಯಾಗುವುದು ಮಾಮೂಲು. ಬೆಂಗಳೂರಿನ ಸ್ಕೈಬಾರ್‌ನಲ್ಲಿ ಮೋಜಿನಕೂಟದಲ್ಲಿ ಪಾಲ್ಗೊಂಡಿದ್ದ ಕಾಂಗ್ರೆಸ್ ಎಮ್ಮೆಲ್ಯೆ ಕಾಶಪ್ಪನವರು ತಡರಾತ್ರೆಯಲ್ಲಿ ನಡೆಸಿದ ದಾಂಧಲೆ ತಲೆತಗ್ಗಿಸುವಂಥದು. ನಿಗದಿತ ಅವಧಿ ಮೀರಿ ಮದ್ಯ ಸರಬರಾಜು ಮಾಡುತ್ತಿದ್ದ ಬಾರ್ ಅನ್ನು ಪ್ರವೇಶಿಸಿದ ಡ್ಯೂಟಿ ಮೇಲಿದ್ದ ಪೊಲೀಸ್ ಪೇದೆಗಳನ್ನು ಹೀನಾಮಾನವಾಗಿ ಬೈದು ಹಲ್ಲೆ ನಡೆಸಿದ ಪ್ರಕರಣವನ್ನು ಈಗ ಮುಚ್ಚಿಹಾಕಲು ಎಲ್ಲ ಪ್ರಯತ್ನಗಳೂ ನಡೆದಿವೆ. ಶಾಸನಸಭೆಯಲ್ಲೂ ಈ ಪ್ರಕರಣ ಎರಡು ದಿನಗಳ ಕಲಾಪವನ್ನು ನುಂಗಿತು. ಪ್ರಕರಣದ ನಂತರ ನಾಪತ್ತೆಯಾಗಿದ್ದ ಶಾಸಕ ಮೂರು ದಿನಗಳ ನಂತರ ಕಾಣಿಸಿಕೊಂಡು ತಾನೇನೂ ತಪ್ಪು ಮಾಡಿಲ್ಲ ಎಂದು ಹಾಯಾಗಿ ಓಡಾಡಿಕೊಂಡಿದ್ದಾನೆ. ಸರಕಾರ ತನಿಖೆ ಆಶ್ವಾಸನೆ ನೀಡಿ, ಕಾನೂನು ಕ್ರಮ ಕೈಗೊಳ್ಳುವ ಭರವಸೆ ನೀಡಿದೆ. ತಪ್ಪಿತಸ್ಥ ಶಾಸಕನಿಗೆ ಪಕ್ಷದಿಂದಲೂ ಛೀಮಾರಿ ಹಾಕಿಲ್ಲ. ಇಂಥ ಎಷ್ಟೋ ಪ್ರಕರಣಗಳು ಹಾಗೆಯೇ ಮುಚ್ಚಿಹೋಗಿವೆ. ಅಂಥವುಗಳಲ್ಲಿ ಇದೂ ಒಂದಾಗುವುದರಲ್ಲಿ ಸಂಶಯವಿಲ್ಲ. ತಪ್ಪಿತಸ್ಥ ಬಾರ್ ಮಾಲಿಕರ ಮೇಲೆ ಕೂಡ ಕಾನೂನು ಕ್ರಮ ಕೈಗೊಳ್ಳದೇ ಒಂದು ಲಕ್ಷ ರೂಪಾಯಿಗಳ ದಂಡ ವಿಧಿಸಿದೆ. ಸರಕಾರ ಬಾರ್ ಲೈಸನ್ಸ್ ರದ್ದು ಮಾಡುವ ವಿಚಾರ ಪ್ರಸ್ತಾಪವಾಗಿತ್ತು. ಅಂತೂ ಈಗ ಲಕ್ಷ ರೂಪಾಯಿಯಲ್ಲೇ ಎಲ್ಲ ಹೊಂದಿಸಲಾಗಿದೆ. ಕಾಶಪ್ಪನವರು ಖುಲಾಸೆಯಾಗಿ ನಿರಪರಾಧಿಯಾಗುವ ದಿನ ದೂರವಿಲ್ಲ.

* * *

ಸ್ವತಂತ್ರ ಭಾರತದಲ್ಲಿ ತಲೆ ಎತ್ತಿದ ಸರಕಾರೇತರ ಸಂಸ್ಥೆಗಳು, ಎಂದರೆ ಈಗ ಎನ್‌ಜಿಒಗಳೆಂದು ಹೆಸರಾಗಿರುವ ಸಂಘಟನೆಗಳು, ಪ್ರಭಾವಿ ಸಂಸ್ಥೆಗಳಾಗಿ ಬೆಳೆದಿವೆ. ಇವುಗಳ ಪೈಕಿ ಬಹುತೇಕ ಸಂಸ್ಥೆಗಳು ಅಮೆರಿಕ, ಇಂಗ್ಲೆಂಡ್, ಜರ್ಮನಿ, ನೆದರ್‌ಲ್ಯಾಂಡ್ಸ್ ಮತ್ತು ಸ್ಕಾಂಡಿನೇವಿಯನ್ ದೇಶಗಳ ಮೂಲದಿಂದ ಹಣ ಪಡೆಯುತ್ತಿವೆ. ಸರಕಾರದ ನೀತಿಗಳ ಮೇಲೆ ಪ್ರಭಾವ ಬೀರುವುದು ಈ ಎನ್‌ಜಿಒ ಸಂಸ್ಥೆಗಳ ಕೆಲಸ. ಇವುಗಳ ಪೈಕಿ ಹಲವು ಸಂಘಟನೆಗಳು ಅಮೆರಿಕದ ಕುಖ್ಯಾತ ಗೂಢಚರ್ಯ ಸಂಸ್ಥೆ ಸಿಐಎಯೊಂದಿಗೆ ನಿಕಟವಾದ ಸಂಬಂಧಗಳನ್ನಿರಿಸಿಕೊಂಡಿದ್ದುವು. ಈ ಸಂಸ್ಥೆಗಳ ಚಟುವಟಿಕೆಗಳ ಮೇಲೆ ಸರಕಾರ ನಿಗಾ ಇರಿಸಿದ್ದರೂ ಹಣಬಲದಿಂದ ಈ ಸಂಸ್ಥೆಗಳು ಸರಕಾರದ ಮೇಲೆ ಒತ್ತಡ ಹೇರುತ್ತಿದ್ದುವು. ಈ ಸಂಘಟನೆಗಳ ವ್ಯವಹಾರಗಳನ್ನು ತನಿಖೆ ಮಾಡಲು ಇಂದಿರಾ ಗಾಂಧಿ ಪ್ರಧಾನಿಯಾಗಿದ್ದಾಗ ಒಂದು ಆಯೋಗ ರಚಿಸಲಾಗಿತ್ತು. ಪುರುಷೋತ್ತಮ ದಾಸ್ ಕುಡಾಲ್ ನೇತೃತ್ವದಲ್ಲಿ ಸ್ಥಾಪನೆಯಾದ ಈ ಆಯೋಗ ಸರಕಾರಕ್ಕೆ ಒಂದು ವರದಿ ಸಲ್ಲಿಸಿತ್ತು. ಅಂದಿನ ದಿನಗಳಲ್ಲಿ ಇಂಥ ಅನೇಕ ಸಂಸ್ಥೆಗಳು ಸಿಐಎಯಿಂದ ಹಣ ಪಡೆಯುತ್ತಿದ್ದುವು. ಎಲ್ಲ ಎನ್‌ಜಿಒ ಸಂಸ್ಥೆಗಳೂ ದೇಶದ್ರೋಹಿ ಚಟುವಟಿಕೆಗಳಲ್ಲಿ ತೊಡಗುತ್ತಿವೆ ಎಂದೇನಲ್ಲ. ಹಲವು ಎನ್‌ಜಿಒಗಳು ನಾನಾಬಗೆಯ ಸಾಂಸ್ಕೃತಿಕ, ಸಮಾಜಸೇವಾ ಕಾರ್ಯಗಳಲ್ಲಿ ತೊಡಗಿಕೊಂಡಿವೆ. ಇಂಥವುಗಳ ಬಗ್ಗೆ ಆಕ್ಷೇಪವಿಲ್ಲ. ಈ ಎನ್‌ಜಿಒ ಸಂಸ್ಥೆಗಳಲ್ಲಿ ಕೆಲವು ಪರಿಸರ ರಕ್ಷಣೆ ಮತ್ತು ಇತರ ಜನಪರ ಪ್ರಶ್ನೆಗಳನ್ನು ಕೈಗೆತ್ತಿಕೊಂಡು ಹೋರಾಟ ನಡೆಸುತ್ತಿವೆ. ಉದಾಹರಣೆಗೆ, ನರ್ಮದಾ ಬಚಾವೋ ಆಂದೋಳನ ಮತ್ತು ಪೋಸ್ಕೋ ಮಲ್ಟಿನ್ಯಾಷನಲ್ ವಿರುದ್ಧ ಪರಿಸರ ರಕ್ಷಣೆಗಾಗಿ ಹೋರಾಟ ನಡೆಸುತ್ತಿರುವ ಸಂಸ್ಥೆ.

ಈಗ ಮೋದಿ ಸರಕಾರ ಅಧಿಕಾರಕ್ಕೆ ಬಂದ ಮೇಲೆ ಇಂಟಲಿಜೆನ್ಸ್ ಬ್ಯೂರೋ (ರಹಸ್ಯ ಸಮಾಚಾರಗಳನ್ನು ಸರಕಾರಕ್ಕೆ ವರದಿ ಮಾಡುವ ಸಂಘಟನೆ) ಒಂದು ವರದಿ ತಯಾರಿಸಿದೆ. ಈ ವರದಿಯ ಆಯ್ದ ಭಾಗಗಳು ಮಾತ್ರ ಮಾಧ್ಯಮಗಳಲ್ಲಿ ಪ್ರಕಟಗೊಂಡಿವೆ. ಇದನ್ನು ಉದ್ದೇಶಪೂರ್ವಕವಾಗಿ ಮಾಡಲಾಗಿದೆ. ಕಾರ್ಪೊರೇಟ್ ವಲಯದ ಬೆಂಬಲದಿಂದ ಅಧಿಕಾರಕ್ಕೇರಿರುವ ಮೋದಿ ಸರಕಾರ ಕಾರ್ಪೊರೇಟ್ ವಲಯದ ಭೂ ಕಬಳಿಕೆ ವಿರುದ್ಧ, ಪರಿಸರ ನಾಶದ ವಿರುದ್ಧ, ಅರಣ್ಯಗಳ ರಕ್ಷಣೆಗಾಗಿ ಜನಪರವಾಗಿ ಹೋರಾಡುತ್ತಿರುವ ಎನ್‌ಜಿಒ ಸಂಸ್ಥೆಗಳನ್ನು ಮಾತ್ರ ಹೆಸರಿಸಿದೆ. ಸಂಘಪರಿವಾರದವರು ನಡೆಸುತ್ತಿರುವ ಎನ್‌ಜಿಒ ಸಂಸ್ಥೆಗಳ ಪ್ರಸ್ತಾಪ ಕಿಂಚಿತ್ತೂ ಇಲ್ಲ. ಜನಪರವಾದ ಹೋರಾಟಗಳಲ್ಲಿ ನಿರತವಾಗಿರುವ ಸಂಸ್ಥೆಗಳನ್ನು ಮಟ್ಟಹಾಕುವುದೇ ಉದ್ದೇಶವಾಗಿದೆ. ಮೋದಿ ಸರಕಾರ ಕಾರ್ಪೊರೇಟ್ ವಲಯದ ಪರ ಇರುವುದು ಹೊಸ ವಿಷಯವೇನಲ್ಲ. ಅಂತೂ ಅಧಿಕಾರ ವಹಿಸಿಕೊಂಡ ಎರಡೇ ತಿಂಗಳ ನಂತರ ಭಾಜಪ ಸರಕಾರ ಒಂದೊಂದಾಗಿ ರಹಸ್ಯ ಕಾರ್ಯಾಚರಣೆಗೆ ಕೈಹಾಕುತ್ತಿದೆ.

* * *

ಕಾಂಗ್ರೆಸ್ ಪಕ್ಷ ೨೦೧೪ರ ಚುನಾವಣೆಗಳಲ್ಲಿ ಧೂಳಿಪಟವಾಗಿ ಕೇವಲ ೪೪ ಸ್ಥಾನಗಳನ್ನು ಪಡೆದುಕೊಂಡಿದೆ. ವಿರೋಧಪಕ್ಷವೆಂದು ಪರಿಗಣಿಸುವ ಅರ್ಹತೆಯನ್ನು ಕಳೆದುಕೊಂಡಿದೆ. ಅಗತ್ಯವಾದ ಸಂಖ್ಯೆಯನ್ನು ಪಡೆಯದೇ ಇರುವುದರಿಂದ ಅದಕ್ಕೆ ವಿರೋಧ ಪಕ್ಷದ ಸ್ಥಾನ ಲಭಿಸದು. ಆದರೆ ಕಾಂಗ್ರೆಸ್ ಮಾನ-ಮರ್ಯಾದೆ ಇಲ್ಲದೆ ತಮ್ಮ ಪಕ್ಷಕ್ಕೆ ವಿರೋಧ ಪಕ್ಷದ ಸ್ಥಾನ ನೀಡಬೇಕು ಎಂದು ಅಂಗಲಾಚುತ್ತಿದೆ. ಕರ್ನಾಟಕದ ದಲಿತ ನಾಯಕ ಮಲ್ಲಿಕಾರ್ಜುನ ಖರ್ಗೆಯನ್ನು ತಮ್ಮ ಪಕ್ಷದ ಪಾರ್ಲಿಮೆಂಟರಿ ವಿಭಾಗದ ನಾಯಕನನ್ನಾಗಿ ಆಯ್ಕೆ ಮಾಡಿಕೊಂಡಿರುವ ಕಾಂಗ್ರೆಸ್ ದಲಿತ ಕಾರ್ಡನ್ನು ಬಳಸಲು ನೋಡಿದ್ದು ಹಾಸ್ಯಾಸ್ಪದ. ವಿರೋಧ ಪಕ್ಷವಾಗಿ ಕಾರ್ಯ ನಿರ್ವಹಿಸುವುದಕ್ಕೆ ಪ್ರತಿಯಾಗಿ ಕಾಂಗ್ರೆಸ್ ಅಂತಹ ಸ್ಥಾನಕ್ಕಾಗಿ ಯಾಚಿಸುತ್ತಿರುವುದು ಖಂಡನೀಯ. ಸಂವಿಧಾನರೀತ್ಯ ಅದಕ್ಕೆ ವಿರೋಧ ಪಕ್ಷದ ಸ್ಥಾನಮಾನ ಸಲ್ಲದು.

ನಮ್ಮ ದೇಶದಲ್ಲಿ ಜರುಗಿದ ಮೊದಲ ಚುನಾವಣೆಗಳಲ್ಲಿ ಕಮ್ಯುನಿಸ್ಟ್ ಪಾರ್ಟಿ ಪಾರ್ಲಿಮೆಂಟಿನಲ್ಲಿ ಅತಿದೊಡ್ಡ ವಿರೋಧ ಪಕ್ಷವಾಗಿತ್ತು. ಆದರೆ ವಿರೋಧಪಕ್ಷದ ಅಧಿಕೃತ ಮನ್ನಣೆ ಪಡೆಯುವಷ್ಟು ಸ್ಥಾನ ಗಳಿಸಿರಲಿಲ್ಲ. ಆದರೆ ಪಕ್ಷವು ಮಾನ್ಯತೆಗಾಗಿ ಕಾಂಗ್ರೆಸ್ ಪಕ್ಷವನ್ನು ಬೇಡಿಕೊಳ್ಳಲೂ ಇಲ್ಲ. ಕಾಂಗ್ರೆಸ್ ಪಕ್ಷವೂ ಕಮ್ಯುನಿಸ್ಟರ ಬಗ್ಗೆ ಅಂಥ ಔದಾರ್ಯವನ್ನೇನೂ ತೋರಲಿಲ್ಲ. ೧೯೬೦ರಲ್ಲೂ ೧೯೬೭ರಲ್ಲೂ ಅದೇ ಪರಿಸ್ಥಿತಿ ಇತ್ತು. ಕಮ್ಯುನಿಸ್ಟ್ ಪಾರ್ಟಿ ವಿರೋಧ ಪಕ್ಷವಾಗಿ ತನ್ನ ಕಾರ್ಯವನ್ನು ಯಶಸ್ವಿಯಾಗಿ ನಿರ್ವಹಿಸಿತು. ಕಾಂಗ್ರೆಸ್ ಏಕೆ ಹೀಗೆ ವರ್ತಿಸುತ್ತಿದೆಯೋ ಅರ್ಥವಾಗುತ್ತಿಲ್ಲ.

* * *

ಮೋದಿ ಸರಕಾರ ಅಧಿಕಾರ ವಹಿಸಿಕೊಂಡು ಎರಡು ತಿಂಗಳು ಕಳೆದಿವೆ. ಹೊಸ ಸರಕಾರ ರೈಲ್ವೆ ಮತ್ತು ಜನರಲ್ ಬಜೆಟ್ ಎರಡನ್ನೂ ಮಂಡಿಸಿದೆ. ಅದರಲ್ಲಿ ಹೊಸದೇನಿಲ್ಲ. ರೈಲು ಪ್ರಯಾಣದ ದರ ಹೆಚ್ಚಿಸಿಯಾಯಿತು. ರೈಲ್ವೆ ಸಚಿವರು ತಮ್ಮ ಬಜೆಟ್ಟಿನಲ್ಲಿ ಬುಲೆಟ್ ರೈಲನ್ನೇ ಬಿಟ್ಟಿದ್ದಾರೆ. ಸಾಮಾನ್ಯ ಬಜೆಟ್ ಕಾರ್ಪೊರೇಟ್ ವಲಯದ ಪರ, ಚಿದಂಬರ ರಹಸ್ಯದ ಮುಂದುವರಿಕೆ ಎಂಬ ಟೀಕೆಗಳು ಬಂದಿವೆ. ಮೋದಿ ಸರಕಾರದ ವರಸೆಗಳು ಪ್ರಕಟವಾಗಿಲ್ಲ. ಈತ ಮಾಂತ್ರಿಕನೇನಲ್ಲ, ಮಂತ್ರದಂಡವನ್ನು ಹೊಂದಿಲ್ಲ. ಹಾಗಾಗಿ ಬೆಲೆ ಏರಿಕೆಯನ್ನು ತಡೆಗಟ್ಟುವುದು ಕನಸಾಗಿಯೇ ಉಳಿದಿದೆ. ಪೇಟೆಯಲ್ಲಿ ತರಕಾರಿ, ಹಣ್ಣುಗಳು ಮತ್ತು ಧಾನ್ಯಗಳ ಬೆಲೆ ಒಂದೇ ಸಮನೆ ಏರುತ್ತಿದೆ. ಮುಂದೆ ಇಂಧನಾನಿಲದ ಬೆಲೆ ಏರುವ ಸೂಚನೆಗಳೂ ಇವೆ. ಈಗ ನೀಡುತ್ತಿರುವ ಸಬ್ಸಿಡಿಗಳನ್ನು ರದ್ದುಗೊಳಿಸುವ ವಿಚಾರ ಇದೆ. ಹಾಗಾಗಿ ಮೋದಿಯಿಂದ ಯಾವುದೇ ಪವಾಡ ನಿರೀಕ್ಷಿಸುವುದು ಸಾಧ್ಯವಿಲ್ಲ. ಅಧಿಕಾರಕ್ಕೇರಿಸಿದ ಕಾರ್ಪೊರೇಟ್ ವಲಯವನ್ನು ತೃಪ್ತಿಗೊಳಿಸುವುದೊಂದೆ ಸರಕಾರಕ್ಕೆ ಮುಖ್ಯವಾಗುತ್ತದೆ ಮುಂದಿನ ದಿನಗಳಲ್ಲಿ. ಪರಿಸ್ಥಿತಿ ಹೀಗಿರುವಾಗ ಗುಜರಾತ್ ಹತ್ಯಾಕಾಂಡದ ಹಿನ್ನೆಲೆಯಲ್ಲಿ ಮೋದಿಯನ್ನು ವಿರೋಧಿಸಿದ ಕೆಲ ಬುದ್ಧಿಜೀವಿಗಳು ಈಗ ಹೊಂದಾಣಿಕೆಯಲ್ಲಿ ತೊಡಗಿರುವುದು ಅಚ್ಚರಿ ಉಂಟುಮಾಡುತ್ತಿದೆ. ಸಾಕಷ್ಟು ಸಂಖ್ಯೆಯ ಬುದ್ಧಿಜೀವಿಗಳು, ಎಡಪಕ್ಷದ ಒಲವುಳ್ಳವರು ಮೋದಿ ಅಧಿಕಾರಕ್ಕೇರುವುದನ್ನು ವಿರೋಧಿಸಿದ್ದರು. ಅದು ಅನಿವಾರ್ಯವೂ ಆಗಿತ್ತು. ಅಗತ್ಯವೂ ಆಗಿತ್ತು. ಆದರೆ ಕೆಲ ಬುದ್ಧಿಜೀವಿಗಳು ಈಗ ಸರಕಾರದ ಕೃಪೆಗಾಗಿಯೋ, ಅನಿವಾರ್ಯತೆಯಿಂದಲೋ ಮೋದಿ ಸರಕಾರದೊಂದಿಗೆ ಹೊಂದಾಣಿಕೆ ಮಾಡಿಕೊಳ್ಳಲು ನೋಡುತ್ತಿದ್ದಾರೆ. ಮಾಧ್ಯಮಗಳಂತೂ ಬಿಡಿ, ಯಾವತ್ತೂ ಅವು ಸರಕಾರವನ್ನು ಓಲೈಸುತ್ತವೆ. ಆದರೆ ಮೋದಿಯನ್ನು ವಿರೋಧಿಸಿದ ಕೆಲವು ಪತ್ರಿಕೆಗಳೂ ಕೂಡ ಈಗ ಬಣ್ಣ ಬದಲಾಯಿಸುತ್ತಿರುವುದು ಸೋಜಿಗದ ಸಂಗತಿ. ಇದು ಅನಿವಾರ್ಯತೆಯನ್ನು ಸಹಿಸಿಕೊಂಡು, ಶಾಮೀಲಾಗುವ ಪ್ರಯತ್ನವೇ ?




ಜೂನ್ ತಿಂಗಳ 'ಹೊಸತು'ವಿನಲ್ಲಿ ಬಂದಿರುವ ಡಾ॥ ಕೆ. ಷರೀಫಾ ಅವರು ಬರೆದ 'ಲೈಂಗಿಕ ಕಿರುಕುಳಕ್ಕೆ ಕೊನೆ ಎಂದು ?' ಲೇಖನಕ್ಕೆ ಪೂರಕ.

ಬಾಂಬೆ ಕ್ರಾನಿಕಲ್, ಜೂನ್ ೨೫, ೧೯೨೧ರಲ್ಲಿ ಗಾಂಧೀಜಿಯವರು ಅಧ್ಯಾಪಕರನ್ನು ಉದ್ದೇಶಿಸಿ, ಅವರ ಜವಾಬ್ದಾರಿಗಳ ಬಗ್ಗೆ ಮಾತನಾಡುತ್ತಾ, ಶ್ರೀಮತಿ ಜಸಲಕ್ಷ್ಮಿ ಎನ್ನುವ ಅಧ್ಯಾಪಿಕೆಯ ಬಗ್ಗೆ ಬರೆಯುತ್ತಾರೆ. ಶ್ರೀಮತಿ ಜಸಲಕ್ಷ್ಮಿಯವರು ಈ ಹಿಂದೊಮ್ಮೆ ಸರ್ಕಾರಿ ಕಾಲೇಜ್ ಒಂದರಲ್ಲಿ ಕೆಲಸ ಮಾಡಿದ್ದು, ನಂತರ ಮುಂಬಯಿ ರಾಷ್ಟ್ರೀಯ ಶಾಲೆಯಲ್ಲಿ ಅಧ್ಯಾಪಿಕೆಯಾಗಿ ಕೆಲಸ ಮಾಡುತ್ತಿದ್ದರು. ಅವರು ಸರ್ಕಾರಿ ಕಾಲೇಜಿನಲ್ಲಿ ತಮಗೆ ಆದ ಅನುಭವಗಳ ಬಗ್ಗೆ ಗಾಂಧೀಜಿಯವರಿಗೆ ಬರೆದಿದ್ದರು. (ಅವರು ಬರೆದಿದ್ದ ಪತ್ರದ ಪೂರ್ಣಪಾಠವನ್ನು ಗಾಂಧೀಜಿಯವರು ಕೊಡುವುದಿಲ್ಲ; ಏಕೆಂದರೆ ಅವರು ಬರೆದಿದ್ದ ಕೆಲವು ಅನುಭವಗಳು ಓದುಗರಿಗೆ ಪಥ್ಯವಾಗದೆ ಇರಬಹುದು ಎಂದು.) ಆ ಕಾಲೇಜಿನಲ್ಲಿ ಕೆಲಸ ಮಾಡುವವರಿಗೆ ತಮ್ಮ ಆತ್ಮಗೌರವ ಮತ್ತು ಸ್ವಾತಂತ್ರ್ಯವನ್ನು ಉಳಿಸಿಕೊಳ್ಳುವುದು ಅಸಾಧ್ಯವಾಗಿತ್ತು ಎಂದು ಅವರಿಗೆ ಅನ್ನಿಸಿತ್ತು. ಪೂರ್ವಗ್ರಹಗಳು ತುಂಬಿರುವ ನಮ್ಮ ಸಮಾಜದಲ್ಲಿ ಇನ್ನೊಬ್ಬರ ಕೈಕೆಳಗೆ ಕೆಲಸ ಮಾಡುವುದು ಎಂದರೆ ತಮ್ಮ ಆತ್ಮಗೌರವ ಮತ್ತು ಸ್ವಾತಂತ್ರ್ಯವನ್ನು ಕಾಪಾಡಿಕೊಳ್ಳುವುದು ಕಷ್ಟ ಎಂದು. ಇದಕ್ಕೆ ಪರಿಹಾರವಾಗಿ ಗಾಂಧೀಜಿಯವರು ಚರಕವನ್ನು ಕೊಡುತ್ತಾರೆ. ಅವರ ಪ್ರಕಾರ ಚರಕ, ಸ್ವಾವಲಂಬನೆ ಹಾಗೂ ಸಂಪೂರ್ಣ ಸ್ವರಾಜ್ಯದ ಪ್ರತೀಕ; ಆತ್ಮಗೌರವದ ಬದುಕಿಗೆ ದಾರಿ; ದೈಹಿಕವಾಗಿ, ಬೌದ್ಧಿಕವಾಗಿ, ಭಾವನಾತ್ಮಕವಾಗಿ, ನೈತಿಕವಾಗಿ ಸ್ವತಂತ್ರರಾಗಿರಬಹುದು.

ವ್ಯಕ್ತಿಯ ನೈತಿಕತೆಯನ್ನು ರೂಪಿಸುವುದರಲ್ಲಿ ಆರ್ಥಿಕ ವ್ಯವಸ್ಥೆ ಬಹಳ ದೊಡ್ಡ ಪಾತ್ರ ವಹಿಸುತ್ತದೆ. ನಿರುದ್ಯೋಗ ಗವ್ವೆನ್ನುವ ಈ ಸಮಾಜದಲ್ಲಿ ಎಲ್ಲರಿಗೂ ಉದ್ಯೋಗ ಬೇಕೇಬೇಕು. ಆದ್ದರಿಂದ ಸಿಕ್ಕ ಕೆಲಸವನ್ನು ಉಳಿಸಿಕೊಳ್ಳುವ ಧಾವಂತ ಎಲ್ಲರಿಗೂ ಇರುತ್ತದೆ. ಮನೆಯಲ್ಲಿ ಅನುಕೂಲವಾಗಿರುವವರಿಗೂ ಈ ಧಾವಂತ ಇರುತ್ತದೆ. ಇವರಿಗೆ ಪರಿಸ್ಥಿತಿಯ ಅನಿವಾರ್ಯತೆಯ ನೆಪ ಮಾಡುವ ಅವಶ್ಯಕತೆ ಇರುವುದಿಲ್ಲವಾದ್ದರಿಂದ, ತಮ್ಮ ನೈತಿಕತೆಯ ಬಗ್ಗೆ ವಿಚಾರ ಮಾಡಬಹುದು. ತಮ್ಮ ಕಛೇರಿಯಲ್ಲಿ ಮಹಿಳೆಗೆ ಹಿಂಸೆಯಾಗುವ ರೀತಿಯಲ್ಲಿ ಆಡಳಿತವರ್ಗದವರು, ಸಹೋದ್ಯೋಗಿಗಳು ವ್ಯವಹರಿಸುತ್ತಿದ್ದರೆ, ಅಂತಹವರ ಗುಂಪಿನೊಂದಿಗೆ ಸೇರಿಕೊಂಡು ಅವಳಿಗೆ ತೊಂದರೆ ಕೊಡಬಾರದು. ಆಕೆಗಾಗಿ ಅಲ್ಲವಾದರೂ, ನ್ಯಾಯಕ್ಕಾಗಿಯಾದರೂ ಹಾಗೆ ಕಿರುಕುಳ ಕೊಡುವುದನ್ನು ತಪ್ಪು ಎಂದು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುವ ಧೈರ್ಯ ಮಾಡಬಹುದು. ಆರ್ಥಿಕ ಭದ್ರತೆ ಇದ್ದಲ್ಲಿ, ತಮ್ಮದೇ ಆದ ನೈತಿಕ ನಿಲುವು ಇರುವವರು, ತಮ್ಮ ನೈತಿಕತೆಯ ಮಟ್ಟವನ್ನು ಕಾಯ್ದುಕೊಂಡುಬರಬಹುದು. ಆದರೆ ನನ್ನ ಅನುಭವದಲ್ಲಿ ಕಂಡಿರುವಂತೆ, ಈ ತರಹದವರು ಸಿಗುವುದಿಲ್ಲ. ಮಹಿಳೆಯ ವಿಷಯಕ್ಕೆ ಬಂದಾಗ ಸಮುದಾಯವನ್ನು ಎದುರು ಹಾಕಿಕೊಳ್ಳಬೇಕಾಗುತ್ತದೆ ಎನ್ನುವ ಭಯವೋ ಅಥವಾ ವಿಕೃತ ಸುಖದ ಆಸೆಯೋ, ಎಲ್ಲರೂ ಒಟ್ಟಾಗಿ ಅನ್ಯಾಯ, ಅಸತ್ಯದ ಪರ ವಹಿಸಿ, ಮಹಿಳೆಯನ್ನು ಅಪಮಾನಿಸುತ್ತಾರೆ. ಆರ್ಥಿಕ ಭದ್ರತೆಯೆಂದರೆ ಸ್ವಾವಲಂಬನೆ ಎಂದಿರಬೇಕು, 'ತನ್ನ ಕೈ, ತನ್ನ ಬಾಯಿ' ಎನ್ನುವಂತೆ. ಮಹಿಳೆಯೂ ತನ್ನ ಅವಶ್ಯಕತೆಗಳನ್ನು ಕಡಿಮೆ ಮಾಡಿಕೊಳ್ಳಬೇಕಾಗುತ್ತದೆ. ಇನ್ನೊಬ್ಬರೆದುರು ಕೈ ಚಾಚಬಾರದು. ಸ್ವರಾಜ್ಯದ ಹಾದಿ ಮುಳ್ಳಿನದು. ಹಾಗೇನಾದರೂ ಮಹಿಳೆ ತನ್ನ ಬದುಕಿನಲ್ಲಿ




ತನ್ನ ಪಾಲನ್ನು ತಾನೇ ನಿರ್ಧರಿಸುತ್ತೇನೆ ಎಂದರೆ, ಹೆಂಡತಿಯಾಗಿ, ವೇಶ್ಯೆಯಾಗಿ ಅಥವಾ ದೇವರಿಗೆ ಬಿಟ್ಟವಳಾಗಿರದೆ, ತನ್ನ ಬದುಕು ತನ್ನದು ಎನ್ನುವಂತೆ ಇರುತ್ತೇನೆ ಎನ್ನುವಂತಿದ್ದರೆ, ಅದೇ ಅವಳ ಸ್ವರಾಜ್ಯ.

'ಯುವ ಭಾರತ'ದ ೧೭.೧೦.೧೯೨೯ರ ಸಂಚಿಕೆಯಲ್ಲಿ ಗಾಂಧೀಜಿ ಹೀಗೆ ಬರೆಯುತ್ತಾರೆ: ..."ಹೆಚ್ಚಿನ ಮಹಿಳೆಯರು ವಿವಾಹಿತೆಯರು. ಕಾನೂನು ಅವರ ವಿರುದ್ಧವಾಗಿದ್ದರೂ, ಗಂಡನ ಅಧಿಕಾರ ಮತ್ತು ಅನುಕೂಲತೆಗಳಲ್ಲಿ ಸಮಪಾಲು ಹೊಂದಿರುವವರು. ದೊಡ್ಡ ಸ್ಥಾನದಲ್ಲಿರುವ ಗಂಡಂದಿರ ಹೆಂಡತಿಯರಾಗಿ ಬರುವ ಗೌರವ, ಉನ್ನತ ಸ್ಥಾನಗಳಲ್ಲಿ ಅವರಿಗೆ ಖುಷಿ ಇದೆ. ಚರ್ಚಾಗೋಷ್ಠಿಗಳಲ್ಲಿ, ಕಮ್ಮಟಗಳಲ್ಲಿ ಅಸಮಾನತೆಯ ಬಗ್ಗೆ ಮಾತನಾಡಬಹುದು, ಸುಧಾರಣೆಗಳ ಪರ ಮತ ಚಲಾಯಿಸಬಹುದು. ಆದರೆ ಅವುಗಳನ್ನು ಅನುಷ್ಠಾನಕ್ಕೆ ತರುವ ವಿಷಯದಲ್ಲಿ, ತಮ್ಮ ಅನುಕೂಲಗಳನ್ನು ಬಿಟ್ಟುಕೊಡಲು ಅವರು ಒಪ್ಪುವುದಿಲ್ಲ."

(ಪು.ಸಂ. ೫೮, ಪತ್ರ ಸಂಖ್ಯೆ ೫೪, "ಗಾಂಧೀಜಿ, ಮಹಿಳೆಯರ ಬಗ್ಗೆ"; ಸಂ : ಪುಷ್ಪಾ ಜೋಷಿ).

ಸದ್ಯದ ಪರಿಸ್ಥಿತಿಯಲ್ಲಿ ಸ್ವಾಭಿಮಾನಿ ಮಹಿಳೆಯ ಹಾದಿಯಲ್ಲಿ ಅಡ್ಡಗಾಲು ಹಾಕುವ ಶಕ್ತಿಗಳೂ ಬಹಳ ಪ್ರಬಲವಾಗಿವೆ : ಗಂಡಸರ ಆಕ್ರಮಣಕಾರಿ ಧೋರಣೆ, ಹೇಗಾದರೂ ಸರಿ, ವ್ಯವಸ್ಥೆಯಲ್ಲಿ ಸಲ್ಲಲೇಬೇಕೆನ್ನುವ ಮಹಿಳೆಯರ ಅನುಕೂಲ ಸಿಂಧುತ್ವ, ಹಿಂದುಳಿದ ಆರ್ಥಿಕ ವ್ಯವಸ್ಥೆ, ಸ್ವಾಭಿಮಾನಿ ಮಹಿಳೆಯ ಅಭಿವೃದ್ಧಿಗೆ ಅಡ್ಡ ಬರುತ್ತವೆ. ಆದರೆ ಅವಳ ಮೌಲ್ಯಗಳು, ನೈತಿಕತೆ, ಧೋರಣೆಗಳು ಅವಳ ಕೈಯ್ಯಲ್ಲೇ ಇವೆ.

*ಬೆಂಗಳೂರು* **ಅಮೃತಾ**

ಮಾನ್ಯ ಕೋ. ಚೆನ್ನಬಸಪ್ಪ ಅವರ ಪತ್ರ ಓದಿದೆ. ನಾನು ನನ್ನ ನಾಲ್ಕು ಮಕ್ಕಳಿಗೆ ಕನ್ನಡದಲ್ಲಿಯೇ ಶಿಕ್ಷಣ ಕೊಡಿಸಿದೆ. ನನ್ನ ಮಕ್ಕಳು ನಾನು ಹೇಳಿದಂತೆ ಕೇಳದೆ ಆಂಗ್ಲ ಮಾಧ್ಯಮದಲ್ಲಿಯೇ ತಮ್ಮ ಮಕ್ಕಳನ್ನು ಓದಿಸಿದರು. ಹಾಗೆಯೇ ಇಂದಿನ ಜನಾಂಗ ಯಾವ ಹೋರಾಟಕ್ಕೂ ಮಣಿಯದೆ ತಮ್ಮ ಮಕ್ಕಳನ್ನು ಆಂಗ್ಲ ಮಾಧ್ಯಮದಲ್ಲಿಯೇ ಓದಿಸಲು ಕಾತುರರಾಗಿದ್ದಾರೆ. ಯಾವುದೇ ರಾಜಕಾರಣಿಯಾಗಲಿ, ಕನ್ನಡ ಹೋರಾಟಗಾರನಾಗಲಿ ಅಧಿಕಾರಿಯಾಗಲಿ, ಶಿಕ್ಷಕನಾಗಲಿ, ಶ್ರೀಮಂತರಾಗಲಿ, ಸಾಮಾನ್ಯ ಜನರಾಗಲಿ, ಇಂದು ತಮ್ಮ ಮಕ್ಕಳನ್ನು ಕನ್ನಡ ಕಲಿಸಲು ಸಿದ್ಧರಿಲ್ಲ. ಇದ್ದಕ್ಕಿರುವದು ಒಂದೇ ಮಾರ್ಗವೆಂದರೆ ಸಂವಿಧಾನದಲ್ಲಿ ತಿದ್ದುಪಡಿಯನ್ನು ತರುವದಾಗಿದೆ.

*ಬೆಳಗಾವಿ* **ಪುಂಡಲೀಕ ಪಾಟೀಲ**

ಜುಲೈ ೨೦೧೫ರ 'ಹೊಸತು'ನಲ್ಲಿ ಪ್ರಕಟವಾದ ಶ್ರೀ ಸಂಗಮನಾಥ ರೇವತಗಾಂವ ಇವರ ಲೇಖನ 'ಉನ್ನತ ಶಿಕ್ಷಣ : ವಿಶ್ವವಿದ್ಯಾನಿಲಯಗಳು ಹೇಗೆ... ಎತ್ತ ? – ಒಂದು ಅನ್ವೇಷಣೆ' ಕುರಿತು ಒಂದೆರಡು ಮಾತು.

ತಮ್ಮ ಲೇಖನದ ಆರಂಭದಲ್ಲಿ ಸಂಗಮನಾಥರು ಕೆಲವು ಮೌಲಿಕವಾದ ಪ್ರಶ್ನೆಗಳನ್ನು ಎತ್ತಿದ್ದಾರೆ. ಅವೆಲ್ಲವೂ ಮಹತ್ವದ ಮತ್ತು ಗಮನ ಸೆಳೆಯುವ ಪ್ರಶ್ನೆಗಳೇ ಆಗಿವೆ. ಅವುಗಳಲ್ಲಿ ಹೆಚ್ಚು ಗಂಭೀರವಾಗಿ ಚಿಂತಿಸಬೇಕಾದ ಪ್ರಶ್ನೆಗಳೆಂದರೆ ರಾಜ್ಯದಲ್ಲಿ ಹುಟ್ಟುತ್ತಿರುವ ವಿಶ್ವವಿದ್ಯಾಲಯಗಳಲ್ಲಿ ಗುಣಮಟ್ಟದ ಶಿಕ್ಷಣ ದೊರೆಯುತ್ತಿದೆಯೇ ? ಅಧ್ಯಾಪಕರು ಗುಣಮಟ್ಟದ ಶಿಕ್ಷಣ ನೀಡುತ್ತಿದ್ದಾರೆಯೇ ? ವಿಶ್ವವಿದ್ಯಾಲಯಗಳಲ್ಲಿ ವಿದ್ಯಾರ್ಜನೆಯ ನೆಪದಲ್ಲಿ ವಿದ್ಯಾರ್ಥಿಗಳನ್ನು ತುಂಬಿಕೊಳ್ಳುವ ಕಾರ್ಖಾನೆಗಳಾಗಿವೆಯೇ ? ನಿಜ ಹೇಳಬೇಕೆಂದರೆ ಇಂದಿನ ವ್ಯವಸ್ಥೆಯಲ್ಲಿ ಶಿಕ್ಷಣ ಕ್ಷೇತ್ರ ತುಂಬ ಭ್ರಷ್ಟವಾಗುತ್ತ ನಡೆದಿದೆ. ಶಿಕ್ಷಣ ಕ್ಷೇತ್ರ ಒಂದನ್ನೇ ಗುರಿಯಾಗಿಟ್ಟುಕೊಂಡು ಯಾವುದೇ ತೀರ್ಮಾನಕ್ಕೆ ಬರುವ ವಿಚಾರ ಇದಲ್ಲ. ಜ್ಞಾನ ಸಂವರ್ಧನೆ ಮತ್ತು ಬೌದ್ಧಿಕ ವಿಕಾಸ, ತನ್ನ ಕ್ಷೇತ್ರದಲ್ಲಿ ನೈಪುಣ್ಯ ಸಾಧಿಸಿ ಆ ಕ್ಷೇತ್ರದ ಮೂಲಕ ತನ್ನ ಮತ್ತು ಇತರರ ಜೀವನವನ್ನು ಸಂಪನ್ನಗೊಳಿಸುವುದು, ಜೀವನದಲ್ಲಿ ನೈತಿಕ ಮೌಲ್ಯಗಳನ್ನು ಪೋಷಿಸಿ ಬೆಳೆಸುವದು, ಚಾರಿತ್ರ್ಯ ಸಂಪನ್ನ ವ್ಯಕ್ತಿತ್ವವನ್ನು ಸದೃಢಗೊಳಿಸುವುದು – ಇಂಥ ಉದ್ದೇಶಗಳನ್ನು ಹೊಂದಿರುವ ಶಿಕ್ಷಣ ಈ ದಿನ ವ್ಯಾಪಾರಿ ಸರಕಾಗಿದೆ. ನಾಯಿಕೊಡೆಗಳಂತೆ ಬೆಳೆಯುತ್ತಿರುವ ನಾನಾ ಸ್ವರೂಪದ

ವಿಶ್ವವಿದ್ಯಾಲಯಗಳೂ ಇದಕ್ಕೆ ಕಾರಣವಾಗಿವೆ ಎಂಬ ಧ್ವನಿ ಸಂಗಮನಾಥರ ಲೇಖನದಲ್ಲಿದೆ. ಶಿಕ್ಷಣ ಮೂಲಭೂತ ಹಕ್ಕೆಂದು ಶಾಸನ ರೂಪಿಸುತ್ತಿರುವಾಗ, ಮತ್ತೊಂದೆಡೆ ಶಾಲೆಗಳು ಮಾರಾಟಕ್ಕಿವೆ ಎಂಬ ಫಲಕಗಳು ರಾರಾಜಿಸುತ್ತವೆ ಎಂಬುದು ಎಂಥ ನಗ್ನಸತ್ಯವಾಗಿದೆ. ಇದಕ್ಕೆ ಕಾರಣಗಳು ಇಲ್ಲದೆಯಿಲ್ಲ. ಯಾಕೆಂದರೆ ಈ ಶಿಕ್ಷಣ ಸಂಸ್ಥೆಗಳಿಗೆ ಒಂದು ಸ್ಥಾಯಿಯಾದ ನೀತಿ ಇಲ್ಲ, ಭವಿಷ್ಯದ ಬಗೆಗಿನ ಕಲ್ಪನೆಯಿಲ್ಲ. ಈ ಹೊತ್ತಿನ ಅಗತ್ಯ ನೀಗಿದರೆ ಸಾಕು ಎಂಬ ಧೋರಣೆ, ಶಿಕ್ಷಣ ಕೊರತೆ ಇರುವುದು ರಹಸ್ಯವಾಗೇನೂ ಇಲ್ಲ. ಅತಿಥಿ ಉಪನ್ಯಾಸಕರು ಎಂಬ ಗೌರವದ ಹೆಸರಿಟ್ಟು ದಿನಗೂಲಿಗಳಂತೆ ದುಡಿಸಿಕೊಳ್ಳುವುದು ಎಷ್ಟರಮಟ್ಟಿಗೆ ಸಾಧುವಾದುದು ? ಅದೇ ಅತಿಥಿ ಉಪನ್ಯಾಸಕರಲ್ಲಿ ಸಮರ್ಥರಾದವರನ್ನು ಖಾಯಂ ಆಗಿ ಯಾಕೆ ನೇಮಿಸಿಕೊಳ್ಳಬಾರದು ?

ಶ್ರೀ ಸಂಗಮನಾಥರು ಉನ್ನತ ಶಿಕ್ಷಣದ ಗುಣಮಟ್ಟದ ಪ್ರಜ್ಞೆ ಮತ್ತು ಸಂಸ್ಕೃತಿಯ ಸ್ಥಿತಿಗತಿ, ಸಮಸ್ಯೆಗಳು, ಪರಿಹಾರ ಮಾರ್ಗೋಪಾಯಗಳು ಇತ್ಯಾದಿ ವಿಷಯಗಳ ಬಗ್ಗೆ ವಿಶೇಷ ಉಪನ್ಯಾಸ, ಪ್ರಬಂಧ ಮಂಡನೆ, ಪ್ಯಾನೆಲ್ ನಡೆಯಬೇಕೆಂದು ಅಭಿಪ್ರಾಯಪಟ್ಟಿದ್ದಾರೆ. ನಾವು ಇಷ್ಟು ದಶಕಗಳಿಂದ ಇದನ್ನೇ ಮಾಡುತ್ತ ಬಂದಿದ್ದೇವೆ. ಅದರಿಂದ ಗುಣಾತ್ಮಕವಾದ ಲಾಭವಾದದ್ದು ಕಂಡುಬರುವುದಿಲ್ಲ. ಏನಿದ್ದರೂ ಈ ಶಿಕ್ಷಣ ಕ್ಷೇತ್ರಕ್ಕೆ ಒಂದು ನಿಯಂತ್ರಣ ಇಲ್ಲದಂತಾಗಿದೆ. ನಾವು ಕ್ವಾಂಟಿಟೇಟಿವ್ ಪ್ರಗತಿ ಸಾಧನೆಯ ಪಟ್ಟಿಯನ್ನು ಬೆಳೆಸುತ್ತಿದ್ದೇವೆ. ಇಲ್ಲಿ ಕ್ವಾಂಟಿಟೇಟಿವ್‌ಗಿಂತ ಕ್ವಾಲಿಟೇಟಿವ್ ಸಾಧನೆ ಪ್ರಮುಖವಾದುದು ಎಂಬುದನ್ನು ತಡವಾಗಿಯಾದರೂ ಅನುಷ್ಠಾನಕ್ಕೆ ತರದೇ ಹೋದರೆ ಈ ಶಿಕ್ಷಣದ ಭವಿಷ್ಯ ಅಂಧಕಾರಮಯವಾಗಿದೆ ಎಂದು ಹೇಳಬೇಕಾಗುತ್ತದೆ.

*ಗುಲಬರ್ಗಾ* **ಭಾಲಚಂದ್ರ ಜಯಶೆಟ್ಟಿ**

✉ ನಾಡಿನ ಗಣ್ಯ ವಿದ್ವಾಂಸರಾಗಿದ್ದ ಡಾ॥ ವಿ. ದೊರೆಸ್ವಾಮಿ ಅಯ್ಯಂಗಾರ್ ಅವರ ಆತ್ಮಕಥೆಯಾದ "ವೀಣೆಯ ನೆರಳಿನಲ್ಲಿ" ಎಂಬ ಪುಸ್ತಕವನ್ನು ಭಾರತೀ ಕಾಸರಗೋಡು ೧೯೯೭ರಲ್ಲಿ ಪ್ರಕಟಿಸಿದ್ದರು. ನಂತರ ೨೦೧೦ರಲ್ಲಿ ಪ್ರೊ॥ ವಿ. ಅಮೃತ ತಮ್ಮ "ವಿಪಂಚಿ ವೈಭವ" ಪುಸ್ತಕದಲ್ಲಿ "ಮಾದಿಹಳ್ಳಿ ವೆಂಕಟೇಶ ಅಯ್ಯಂಗಾರ್" ಮತ್ತು "ಮೈಸೂರು ವಿ. ದೊರೆಸ್ವಾಮಿ ಅಯ್ಯಂಗಾರ್" ಎಂಬೆರಡು ಲೇಖನಗಳನ್ನು ಪ್ರಕಟಿಸಿದರು. ಅಮೃತ ಅವರ ಈ ಎರಡು ಲೇಖನಗಳ ಪ್ರಕಟಣೆಗಳ ಹಿನ್ನೆಲೆಯಲ್ಲಿ ಉಂಟಾಗಿದ್ದ ವಿವಾದ ಇದೀಗ ಸೌಹಾರ್ದಯುತವಾಗಿ ಕೊನೆಗೊಂಡಿದೆ. ಆದರೆ ಭಾರತೀ ಕಾಸರಗೋಡು ರಚಿಸಿರುವ "ವೀಣೆಯ ನೆರಳಿನಲ್ಲಿ" ಪುಸ್ತಕದ ಬಗ್ಗೆ ಲೇಖಕಿಯ ಎಲ್ಲಾ ಹಕ್ಕುಗಳಿಗೆ ಯಾವುದೇ ಚ್ಯುತಿಯಾಗಲೀ ಮತ್ತು ಮೇಲ್ಕಂಡ ಅಮೃತ ಅವರ ಎರಡು ಲೇಖನಗಳ ಬಗ್ಗೆ ಭಾರತೀ ಕಾಸರಗೋಡು ಪ್ರಸ್ತಾಪಿಸಿದ್ದ ಅಂಶಗಳಿಗೆ ಯಾವುದೇ ಪ್ರತಿರೋಧವಾಗಲೀ ಇರುವುದಿಲ್ಲ.

**ವಿ. ಅಮೃತ** **ಭಾರತೀ ಕಾಸರಗೋಡು**

## ಸಮೇತನಹಳ್ಳಿ ರಾಮರಾವ್ ಪ್ರಶಸ್ತಿ

ಬೆಂಗಳೂರಿನ ಸಿಂಧುಭೈರವಿ ಕಲಾಕುಟೀರ ಈ ವರ್ಷದಿಂದ "ಸಮೇತನಹಳ್ಳಿ ರಾಮರಾವ್ ಪ್ರಶಸ್ತಿ" ಯನ್ನು ಸ್ಥಾಪಿಸಿದ್ದು, ಪ್ರಥಮ ಬಾರಿಯ ಪ್ರಶಸ್ತಿಗೆ ಸುಪ್ರಸಿದ್ಧ ವಿದ್ವಾಂಸರಾದ ಪ್ರೊ॥ ಟಿ. ವಿ. ವೆಂಕಟಾಚಲ ಶಾಸ್ತ್ರಿ ಅವರು ಭಾಜನರಾಗಿದ್ದಾರೆ. ಪ್ರಶಸ್ತಿ ಪ್ರದಾನ ಸಮಾರಂಭವು ಆಗಸ್ಟ್‌ನ ಮೂರನೇ ಭಾನುವಾರ (೧೭-೦೮-೧೪) ಕನ್ನಡ ಸಾಹಿತ್ಯ ಪರಿಷತ್ತಿನ ಶ್ರೀ ಕೃಷ್ಣರಾಜ ಪರಿಷನ್ಮಂದಿರದಲ್ಲಿ ಸಂಜೆ ೪.೩೦ಕ್ಕೆ ನೆರವೇರಲಿದೆ. ಸಹೃದಯರಿಗೆ ಸ್ವಾಗತ.

*ಬೆಂಗಳೂರು* ***ಭಾರತೀ ಕಾಸರಗೋಡು***

✉ ಬೆಳಿಗ್ಗೆ ಎದ್ದು ಪತ್ರಿಕೆ ಎತ್ತಿಕೊಳ್ಳಲು ಹೋದರೆ ಕೈಗಳು ಥರ ಥರ ನಡುಗುತ್ತವೆ, ಹೃದಯ ಡವ ಡವ ಬಡಿದುಕೊಳ್ಳುತ್ತದೆ.ಎಲ್ಲಿ ಯಾವ ಯುವಕ ನೌಕರಿ ಸಿಗದೆ ನೇಣು ಹಾಕಿಕೊಂಡನೋ, ಯಾವ ಹುಡುಗ-ಹುಡುಗಿಯರು 'ಲವ್ ಅಫೇರ್'ನಲ್ಲಿ ಫೇಲ್ ಆಗಿ ಹಾಳು ಬಾವಿಗೆ ಬಿದ್ದು ಸತ್ತರೋ, ಇತ್ಯಾದಿ. ಹೀಗೆ ಸುದ್ದಿಗಳು ಒಂದಾದ ನಂತರ ಒಂದರಂತೆ ಕಣ್ಣಿಗೆ ರಾಚುವಂತೆ ದೊಡ್ಡ ದೊಡ್ಡ ಅಕ್ಷರಗಳಲ್ಲಿ ಪ್ರಕಟವಾಗಿರುವುದನ್ನೇ ನೋಡುತ್ತೇವೆ. 'ಹೊಸತು' ಪತ್ರಿಕೆ ಇಂಥ ಘಟನೆಗಳ ಹಿಂದಿನ ಇಡೀ ಬೇರುಗಳನ್ನೆಲ್ಲ ಎತ್ತಿ ತೋರಿಸುವಂಥ ಲೇಖನಗಳನ್ನು ಪ್ರಕಟಿಸುತ್ತಿರುವುದು ಸ್ವಾಗತಾರ್ಹ. ಇದೀಗ ಜುಲೈ ತಿಂಗಳ ಸಂಚಿಕೆಯಲ್ಲಿ ಪ್ರಕಟವಾಗಿರುವ 'ಉನ್ನತ ಶಿಕ್ಷಣ : ವಿಶ್ವವಿದ್ಯಾಲಯಗಳು ಹೇಗೆ...ಎತ್ತ ?' ಎಂಬ ವಿಶ್ಲೇಷಣಾತ್ಮಕ ಲೇಖನವು ಸಮಾಜದಲ್ಲಿನ ಅಧೋಗತಿಗೆ ವಿಶ್ವವಿದ್ಯಾಲಯಗಳಲ್ಲಿನ ಹದಗೆಡುತ್ತಿರುವ ಪರಿಸ್ಥಿತಿಯೂ ಕಾರಣವೆಂಬ ಅಂಶವನ್ನು ಪ್ರಶ್ನಾತೀತವಾಗಿ ಬಯಲಿಗೊಡ್ಡಿದೆ. ಮೊದಮೊದಲು ಸಾಫ್ಟವೇರ್ ಎಂಜಿನಿಯರುಗಳೆಂದರೆ ಭಾರೀ ಅದೃಷ್ಟವಂತರೆಂದು ಪರಿಗಣಿಸಲಾಗುತ್ತಿತ್ತು. ಆದರೆ ಇಂದು ಬಹುರಾಷ್ಟ್ರೀಯ ಕಂಪನಿಗಳ ಕೈಯಲ್ಲಿ ಅವರು ಸಾಫ್ಟವೇರ್ ಕೂಲಿಗಳಂತಾಗಿದ್ದಾರೆಂಬ ಅಂಶವನ್ನು ಲೇಖಕ ಸಂಗಮನಾಥ ರೇವತಗಾಂವ ಅತ್ಯಂತ ವಿಷಾದದಿಂದಲೇ ಪ್ರಸ್ತಾಪಿಸಿದ್ದಾರೆ.

ವಿಶ್ವವಿದ್ಯಾಲಯಗಳಲ್ಲಿ ಇಂದು ನಡೆಯುತ್ತಿರುವ ಲೈಂಗಿಕ ಹಗರಣಗಳು, ಹೆಚ್ಚುತ್ತಲಿರುವ ಅಶಿಸ್ತು, ವಿದ್ಯಾರ್ಥಿ-ಉಪನ್ಯಾಸಕರ ನಡುವೆ ಹದಗೆಡುತ್ತಿರುವ ಸಂಬಂಧಗಳು, ಡಾಕ್ಟರೇಟ್ ಪದವಿ ಬೇಕಾದವರು ಗೈಡುಗಳ ಮನೆಯಲ್ಲಿ ಚಾಕರಿ ಮಾಡಬೇಕಾದ ಪರಿಸ್ಥಿತಿ, ಜಿಗುಪ್ಸೆಗೊಂಡವರ ಆತ್ಮಹತ್ಯೆಗಳು, ಉಪನ್ಯಾಸಕರ ಮೇಲೆ ವಿದ್ಯಾರ್ಥಿಗಳ ಹಲ್ಲೆ, ಹೀಗೆ ದಿನನಿತ್ಯ ಏನಾದರೂ ನಡೆಯುತ್ತಲೇ ಇರುತ್ತವೆ. ಇವೆಲ್ಲವುಗಳನ್ನೂ ಕಂಡು ಕೇಳಿ ನೊಂದ ಲೇಖಕರು ಸಾಮಾಜಿಕ, ನೈತಿಕ ಪ್ರಜ್ಞೆ ಬೆಳೆಸುವ ವಿಶ್ವವಿದ್ಯಾಲಯಗಳು ಬೇಕು, ಕೇವಲ ವ್ಯವಹಾರ, ಲಾಭ ಅವುಗಳ ಉದ್ದೇಶವಾಗಬಾರದು, ಮಾನವೀಯ ಮೌಲ್ಯ ಎತ್ತಿ ಹಿಡಿಯುವ ಶಿಕ್ಷಣ ಪದ್ಧತಿ ಬರಬೇಕು, ಕೇವಲ ಸಂಬಳಕ್ಕಾಗಿ ಮಾತ್ರ ಹಾತೊರೆಯುವ ಬದಲು ಚೆನ್ನಾಗಿ ಪಾಠ ಹೇಳುವ ಜವಾಬ್ದಾರಿತನ ಬೋಧಕರಲ್ಲಿ ಬೆಳೆಯಬೇಕೆಂದು ಹಂಬಲಿಸಿರುವುದು ಸಹಜವೇ. ಅವರು ನೀಡಿರುವ ಅಂಕಿ-ಅಂಶಗಳು ನಮ್ಮ ಶಿಕ್ಷಣ ಪದ್ಧತಿಗೆ ಹಿಡಿದ ಕನ್ನಡಿಯಂತಿದೆ.

*ಗುಲಬರ್ಗಾ* ***ಸೂರ್ಯಕಾಂತ ಸೊನ್ನದ***

## ಜನ್ನಾ ಸನದಿ ಸಾಹಿತ್ಯ ಪ್ರಶಸ್ತಿಗೆ ಕೃತಿ ಆಹ್ವಾನ

ಬೆಳಗಾವಿ ಇಲ್ಲಿಯ ಬಿ. ಎ. ಸನದಿ ಸಾಂಸ್ಕೃತಿಕ ಪ್ರತಿಷ್ಠಾನವು ಪ್ರತಿವರ್ಷ ನೀಡುವ ರಾಜ್ಯಮಟ್ಟದ ಜನ್ನಾ ಸನದಿ ಸಾಹಿತ್ಯ ಪ್ರಶಸ್ತಿಗೆ ೨೦೧೩ರಲ್ಲಿ ಪ್ರಥಮ ಆವೃತ್ತಿಯಾಗಿ ಪ್ರಕಟವಾದ ಸ್ವತಂತ್ರ ಕೃತಿ ಕಾದಂಬರಿಗಳನ್ನು ಆಹ್ವಾನಿಸಿದೆ. ಕನಿಷ್ಠ ೭೦ ಪುಟಗಳಿರಬೇಕು. ಈ ಪ್ರಶಸ್ತಿ ಉದಯೋನ್ಮುಖ ಲೇಖಕರನ್ನು ಪ್ರೋತ್ಸಾಹಿಸುವ ನಿಮಿತ್ತ. ೩೫ ವರ್ಷದೊಳಗಿನವರು ೩ ಪ್ರತಿ ಪುಸ್ತಕಗಳನ್ನು ಸಲ್ಲಿಸಬಹುದಾಗಿದೆ.

ಪ್ರಶಸ್ತಿಯು ರೂ. ೫೦೦೦ ನಗದು, ಗೌರವ ಸಂಮಾನ, ಹಾಗೂ ಪ್ರಶಸ್ತಿ ಪತ್ರವನ್ನು ಒಳಗೊಂಡಿದೆ. ಆಸಕ್ತರು ತಮ್ಮ ಕೃತಿಗಳೊಂದಿಗೆ ವಯಸ್ಸಿನ ದಾಖಲೆ, ವಿಳಾಸ, ದೂರವಾಣಿ ಸಂಖ್ಯೆ ಇತ್ಯಾದಿ ವಿವರಗಳೊಂದಿಗೆ **ಮೋಹನ ಕಳಸದ, 'ಶ್ರಮಶ್ರೀ', ೨೫, ಶಿಕ್ಷಕರ ಬಡಾವಣೆ, ಖಾಸಬಾಗ, ಬೆಳಗಾವಿ** (೯೮೪೫೯೨೧೯೪೭) ಈ ವಿಳಾಸಕ್ಕೆ **ದಿನಾಂಕ ೩೦-೦೮-೨೦೧೪**ರೊಳಗೆ ಕಳಿಸಿಕೊಡಲು ಕೋರಲಾಗಿದೆ.

*ಬೆಳಗಾವಿ* ***ಬಿ. ಎ. ಸನದಿ ಸಾಂಸ್ಕೃತಿಕ ಪ್ರತಿಷ್ಠಾನ***

✉ ಹೊಲ ಉಳುವ ರೈತನೇ ನೆಲದೊಡೆತನಕ್ಕೆ ಬಾಧ್ಯತೆಯುಳ್ಳವನೆಂಬ ಘನ ಉದ್ದೇಶದ ರಾಜಕೀಯ ಧೋರಣೆಯ ಸಾಧನೆಗಾಗಿ ಕಾಂಗ್ರೆಸ್ ಪಕ್ಷದ ಹಿಂದಿನ ಅದೊಂದು ಕಾಲದ ಲಾಂಛನ ಅನ್ನಿಸಿ ಜಯಭೇರಿ ಬಾರಿಸಿ ಪ್ರಸಿದ್ಧವಾದ ಜೋಡೆತ್ತುಗಳ ಮುಖವರ್ಣಿಕೆಯ ಒಂದಿಗೆ ಹೊರಬಂದ ಹೊಸತಿನ ಜುಲೈ ಸಂಚಿಕೆ ಕಣ್ಮನ ತುಂಬಿಸಿಕೊಳ್ಳುವುದರಲ್ಲಿ ಹಿಂದುಳಿಯಲಿಲ್ಲ. ಶ್ರೀಶೈಲ ಹೊಸಮನಿ ಹುನಗುಂದ ಅವರ ಬತ್ತಳಿಕೆಯಿಂದ ಬಳುವಳಿಯಾಗಿ ಬಂದು - ಕತೆ ಹೇಳುವೇ ನನ್ನ ವ್ಯಥೆ ತಿಳಿಸುವೇ ಎಂಬ ಹಾಗೆ ಅನ್ನಿಸಿದುದು ಹೌದು.

ಅಂದಿನ ಯಥಾರ್ಥ ಸ್ಥಿತಿ ಅದೂ ಮಣ್ಣಿನ ಮಕ್ಕಳ ಸ್ಥಿತಿಗತಿ - ಭೂಮಾತೆಯ ಪರಿಸ್ಥಿತಿ ಮಾಲಕರ ಬಿಗು ಹಿಡಿತದ ಹೊಡೆತದ ರಭಸದ ಎಡೆಯಲ್ಲಿ ಉಳುಮೆ ಮಾಡಿ ಗೈದು ಫಸಲು ಬರುವಂತೆ ಆಗಲು ಕಾರಣನಾದ ರೈತನ ಬವಣೆ ಬಣ್ಣಿಸಿ ಫಲವಿಲ್ಲದ ಅಂದಿನ ಕಾಲಸ್ಥಿತಿ ಪರಿಹರಿಸಲು ಕಟಿಬದ್ಧವಾಗಿ ನಿಂತ ಕಾಂಗ್ರೆಸ್ ಆಡಳಿತ ಧೋರಣೆಯಲ್ಲಿ ಬಿಗು ಹಿಡಿತ ನಡೆಸಿ ಭೂ ಮಸೂದೆಯನ್ನು ಜಾರಿಗೊಳಿಸಿದುದರ ಫಲವಾಗಿ ರೈತ ಬಾಂಧವರ ಪರಿಸ್ಥಿತಿಯಲ್ಲಿ ಅದೆಷ್ಟೋ ಏರಿಕೆ ಉಂಟಾಗಿರುವುದು ಎಂದೂ ಮರೆಯುವಂತಹದಲ್ಲ.

*ಕಾಸರಗೋಡು* ***ಕೇರಿಕ್ಕಾಡು ವನಮಾಲಾ ಕೇಶವಭಟ್ಟ***



# ಋಗ್ವೇದ ಪ್ರವೇಶಿಕೆ
# ಐತಿಹ್ಯ ಮತ್ತು ವಾಸ್ತವ

ಜಿ. ರಾಮಕೃಷ್ಣ

ಋಗ್ವೇದದ ಆರ್ಯರು ಭಾರತಕ್ಕೆ ಸ್ವಕೀಯರೋ ಅಥವಾ ಪರಕೀಯರೋ ಎಂಬ ಪ್ರಶ್ನೆ ಐತಿಹಾಸಿಕ ಪುರಾವೆಗಳ ಆಧಾರದಿಂದ ಚರ್ಚಿತವಾಗುವ ಬದಲು ಭಾವಾತಿರೇಕದ ಹಿನ್ನೆಲೆಯಲ್ಲಿ ತೀರ್ಮಾನವಾಗಿಬಿಡುವುದು ಕಳೆದ ಕೆಲವು ದಶಕಗಳಿಂದ ನಡೆದುಬಂದಿರುವ ಸಂಗತಿ. ಇದು ರಾಜಕೀಯ ಆಯಾಮಗಳನ್ನು ಹೊಂದಿದೆ ಮತ್ತು ಅದರಲ್ಲಿ ಇತಿಹಾಸದ ದೃಷ್ಟಿ ಕಮರಿಹೋಗಿದೆ. ಆರ್ಯರು ಪರಕೀಯರೆಂದು ಒಪ್ಪಿದರೆ ಕ್ರಿಸ್ತಪೂರ್ವ ಮೂರನೆಯ ಶತಮಾನದಲ್ಲಿ ಅಲೆಕ್ಸಾಂಡರ್ ಭಾರತದ ಮೇಲೆ ದಂಡೆತ್ತಿಬಂದಾಗಿನಿಂದ ಆಗಾಗ್ಗೆ ನಡೆಯುತ್ತಲೇ ಬಂದಿರುವ ಪರಕೀಯರ ಧಾಳಿಗಳನ್ನು ತೀವ್ರವಾಗಿ ಖಂಡಿಸುವುದು ಕಷ್ಟವಾಗಿಬಿಡುತ್ತದೆಂಬ ಕಾರಣಕ್ಕೆ ಆರ್ಯರು ಖಂಡಿತ ಸ್ವಕೀಯರೇ ಹೌದೆಂಬ ಮಾತನ್ನು ಗಟ್ಟಿಯಾಗಿ ಹೇಳುವುದು ಕೆಲವರ ಪದ್ಧತಿ. ಅದನ್ನು 'ರಾಷ್ಟ್ರೀಯ ಸ್ವಾಭಿಮಾನ' ಮತ್ತು 'ದೇಶಭಕ್ತಿ'ಗಳ ಹೆಸರಿನಲ್ಲಿ ಸಮರ್ಥಿಸುವುದು ಅನಗತ್ಯ; ಏಕೆಂದರೆ, ಇತಿಹಾಸವು 'ಅಭಿಮಾನ'ಕ್ಕೆ ಸೊಪ್ಪುಹಾಕುವ ಸಾಮಗ್ರಿಯಲ್ಲ. ಆರ್ಯರು ಹೊರಗಿನಿಂದ ಬಂದವರೆಂದು ಒಪ್ಪಿಯೂ ಋಗ್ವೇದದ ಮಹತ್ವ ಮತ್ತು ಶ್ರೇಷ್ಠತೆಗೆ ಕುಂದುಬಾರದಂತೆ ಅದರ ಅಧ್ಯಯನ ಸಾಧ್ಯ. ದೇಶಭಕ್ತಿಯನ್ನು ದೇಶದ ಜನತೆಯ ಐಕ್ಯತೆ ಮತ್ತು ಏಳಿಗೆಗೆ ಸಾಧನವನ್ನಾಗಿಸಿಕೊಳ್ಳುವುದು ಮುಖ್ಯವೇ ವಿನಾ ನಮ್ಮ ದೇಶದ ೩೫೦೦ ವರ್ಷಗಳ ಹಿಂದಿನ ವಿದ್ಯಮಾನವನ್ನು ವಸ್ತುನಿಷ್ಠವಾಗಿ ಅರ್ಥೈಸಿಕೊಳ್ಳಲು ಅಡ್ಡಿಯುಂಟುಮಾಡುವ ಹೆದ್ದದಂತಲ್ಲ. (ಚಕ್ರದ ಚಲನೆಯನ್ನು ತಡೆಯಲು ಒಡ್ಡುವ ಪ್ರತಿಬಂಧಕಕ್ಕೆ ಹೆದ್ದ ಎನ್ನುತ್ತಾರೆ ಮತ್ತು ರಥೋತ್ಸವ ಸಂದರ್ಭಗಳಲ್ಲಿ ಇದರ ಬಳಕೆ ಇರುವುದು ಸಾಮಾನ್ಯ). ಋಗ್ವೇದದ ಕಾಲದಲ್ಲಿ ಅಂದಿನ ಜನರಲ್ಲಿ ವಿಭಜನೆಯೊಂದಿತ್ತು, ಘರ್ಷಣೆ ಇತ್ತು. ಅದು ಕೇವಲ ಆಂತರಿಕ ಸನ್ನಿವೇಶದ ಪರಿಣಾಮ ಎನಿಸುವುದಿಲ್ಲ. ಗೋವು, ಇತ್ಯಾದಿ ಸಂಪತ್ತಿಗಾಗಿ ಮತ್ತು ಸಾಂಸ್ಕೃತಿಕ ಭಿನ್ನತೆಯಿಂದಾಗಿ ಘರ್ಷಣೆ ಜರುಗುತ್ತಿತ್ತು. ಬುದ್ಧನ ಕಾಲದ ಬುಡಕಟ್ಟುಗಳ ನಡುವಣ ಘರ್ಷಣೆಗಳಿಗೂ ಋಗ್ವೇದವು ದಾಖಲಿಸಿರುವ ಘರ್ಷಣೆಗಳಿಗೂ ವ್ಯತ್ಯಾಸವಿದೆ. ಅಂತಹ ಘರ್ಷಣೆಗಳಲ್ಲಿ ಕೆಲವನ್ನು ಪ್ರಸ್ತುತ ಹದಿನಾಲ್ಕನೆಯ ಕಂತಿನಲ್ಲಿ ಪರಿಚಯಿಸಿಕೊಳ್ಳೋಣ.

ಋಗ್ವೇದದ ಪಾಶ್ಚಾತ್ಯ ವ್ಯಾಖ್ಯಾನಕಾರರಲ್ಲಿ ಕೆಲವರು ಇಂದ್ರ ಮತ್ತು ವರುಣ ವಿರುದ್ಧ ಧ್ರುವಗಳನ್ನು ಪ್ರತಿನಿಧಿಸುವುದಲ್ಲದೆ, ಯಾವಾಗಲೂ ಪರಸ್ಪರ ಸ್ಪರ್ಧೆಯಲ್ಲಿ ತೊಡಗಿರುತ್ತಾರೆಂದು ಪ್ರತಿಪಾದಿಸಿದ್ದಾರೆ. ಕಡೆಗೆ ಇಂದ್ರನಿಗೆ ಜಯವಾಯಿತೆಂದೂ, ವರುಣನು ಕಾಣೆಯಾದನೆಂದೂ ಅವರ ಅಭಿಮತ. ನಿಜಕ್ಕೂ ಋಗ್ವೇದದಲ್ಲಿ ದೇವತೆಗಳು ಪರಸ್ಪರ ಔನ್ನತ್ಯಕ್ಕಾಗಿ ಸೆಣಸುವುದಿಲ್ಲವೆಂಬುದು ವಾಸ್ತವ. ಪ್ರಕೃತಿ ಮತ್ತು ಜೀವನದ ಬೇರೆ ಬೇರೆ ವಿಭಾಗಗಳಿಗೆ ಸಂಬಂಧಿಸಿದಂತೆ ದೇವತೆಗಳು ಮತ್ತು ಜೀವನಕ್ರಮಗಳು ಪ್ರಾಚೀನ ಭಾರತಕ್ಕೆ ಸೀಮಿತವಾದ ವಿಶೇಷವೇನೂ ಅಲ್ಲ. ಈಗಲೂ ಬೋರ್‌ವೆಲ್ ಚೆನ್ನಾಗಿರುವ ಎಷ್ಟೋ ಮನೆಗಳವರಿಗೆ ಕುಡಿಯುವ ನೀರಿಗಾಗಿ ಪರದಾಡುವವರಿದ್ದಾರೆಂಬುದು ಅರಿವಿಗೇ ಬರುವುದಿಲ್ಲ. ಮಳೆ ಬಾರದೆ ಇನ್ನೂ ಬಿತ್ತನೆಯನ್ನು ಮಾಡಲಾಗದೆ ಕಂಗಾಲಾಗಿ ಸೊರಗಿರುವ ರೈತನ ಆತಂಕ ಅಂಥವರಿಗೆ ತಿಳಿಯದಿರಬಹುದು. ಯಾರಿಗೆ ಯಾವಾಗ ಇಂದ್ರ ಬೇಕಾಗುತ್ತಾನೆ, ಎಂತಹ ಚಿಂತನೆಯ ಹಿನ್ನೆಲೆಯಲ್ಲಿ ವರುಣ ತನ್ನ ಪ್ರಭೆಯನ್ನು ಬೀರುತ್ತಾನೆ, ಎನ್ನುವುದನ್ನು ತಿಳಿಯಬೇಕು, ಅಷ್ಟೆ. ಯಾರನ್ನಾದರೂ ವಿರೋಧಿಸಿ ಬಗ್ಗು ಬಡಿಯಬೇಕಾದಾಗ ಋಗ್ವೇದದ ಕವಿಗಳಿಗೆ ಅತ್ಯಧಿಕವಾಗಿ ಪ್ರಿಯನಾಗುವವನು ಇಂದ್ರ. ಬೇರೊಂದು ಸಂದರ್ಭದಲ್ಲಿ ಅವರಿಗೆ ಅಗ್ನಿಯೋ, ಸವಿತೃವೋ, ವರುಣನೋ, ಅಥವಾ ರಾತ್ರಿ ಮತ್ತು ಉಷೋದೇವಿಯರೋ ಪ್ರಿಯವಾಗುವುದಿಲ್ಲ ಎನ್ನಲಾಗದು.

ಕೆಲವರಿಗೆ ಎಷ್ಟೇ ಅಪಥ್ಯವೆನಿಸಲಿ, ಋಗ್ವೇದದ ಕರ್ತೃಗಳು ಮತ್ತು ಅವರ ಮುಂಚಿನ ಕೆಲವು ತಲೆಮಾರುಗಳ ಪೂರ್ವಜರು ಭಾರತದ ವಾಯವ್ಯ ದಿಕ್ಕಿನಿಂದ ಇಂದಿನ ನಮ್ಮ ಭಾರತವನ್ನು ಪ್ರವೇಶಿಸಿದರೆಂಬುದನ್ನು ಅಲ್ಲಗಳೆಯಲಾಗುವುದಿಲ್ಲ. ಆಗ್ಗೆ ಇಲ್ಲಿನ ಪ್ರದೇಶಗಳಲ್ಲಿ ಜನರೇ ಇರಲಿಲ್ಲವೆಂಬ ತಪ್ಪು ತಿಳುವಳಿಕೆಯನ್ನು ಈವರೆಗೆ ಯಾವ ವಿದ್ವಾಂಸರೂ ಪ್ರಕಟಿಸಿಲ್ಲ. ಈಗ್ಗೆ ನಾಲ್ಕು ಶತಮಾನಗಳ ಹಿಂದೆ ಇಂದಿನ ಉತ್ತರ ಅಮೇರಿಕಾಕ್ಕೆ ವಲಸೆಹೋದ ಯೂರೋಪಿನ ಜನ ಅಲ್ಲಿಯ ಮೂಲನಿವಾಸಿಗಳನ್ನು





ಸಂಪೂರ್ಣವಾಗಿ ನಿರ್ನಾಮ ಮಾಡಿದ್ದು ಸಮಕಾಲೀನ ಇತಿಹಾಸ. ಹಾಗೆ ಲಕ್ಷಗಟ್ಟಲೆ ಜನರನ್ನು ಹೊಸಕಿ ಹಾಕದೆ ನಾಗರಿಕತೆ ಮತ್ತು ಪ್ರಜಾಪ್ರಭುತ್ವ ಸ್ಥಾಪಿಸುವುದು ಸಾಧ್ಯವಿಲ್ಲವೆಂಬ ಮೂರ್ಖತನ ಅವರದ್ದಾಗಿತ್ತು. ಋಗ್ವೇದದ ಕರ್ತೃಗಳ ದೊಡ್ಡ ಸಮುದಾಯಕ್ಕೆ ಅಂತಹ ವಿಕೃತ ಕಲ್ಪನೆಯಿರಲಿಲ್ಲವಾದರೂ ಮೂಲನಿವಾಸಿಗಳೊಡನೆ ವ್ಯವಹಾರಗಳಲ್ಲಿ ಸಂಪೂರ್ಣ ಸಾಮರಸ್ಯವನ್ನು ಸಾಧಿಸಲು ಆ ಸಮುದಾಯವು ಸಮರ್ಥವಾಗಲಿಲ್ಲ. ಕಳೆದ ಶತಮಾನದ ಆದಿಭಾಗದ ಭಾರತೀಯ ವಿದ್ವಾಂಸರನೇಕರು ವೈದಿಕ ಸಮಾಜದಲ್ಲಿ ವರ್ಣ ವಿಭಜನೆಯು ಆಳವಾಗಿ ಬೇರೂರಲು ಹೊರಗಿನಿಂದ ಬಂದವರ ಮತ್ತು ಮೂಲನಿವಾಸಿಗಳ ನಡುವಣ ಸಂಘರ್ಷಗಳು ಮುಖ್ಯ ಕಾರಣವೆಂದು ದಾಖಲೆಗಳ ಸಮೇತ ವಾದಗಳನ್ನು ಮಂಡಿಸಿದ್ದರು. ಅಂಥವರಲ್ಲಿ ಆರ್. ಸಿ. ದತ್, ಡಿ. ಆರ್. ಭಂಡಾರ್ಕರ್, ಜಿ. ಎಸ್. ಘುರ್ಯೆ ಮುಂತಾದವರಿದ್ದಾರೆ. ಈಚಿನ ದಶಕಗಳಲ್ಲಿ ಡಿ. ಡಿ. ಕೋಸಾಂಬಿ, ಆರ್. ಎಸ್. ಶರ್ಮ, ದೇವಿಪ್ರಸಾದ ಚಟ್ಟೋಪಾಧ್ಯಾಯ, ಮುಂತಾದವರು ಇನ್ನಷ್ಟು ಪುರಾವೆಗಳ ಆಧಾರದ ಮೇಲೆ ಆ ವಾದವನ್ನು ವಿಸ್ತರಿಸಿದ್ದಾರೆ. ವಿವರಗಳಿಗೆ ಆಸಕ್ತರು ಆರ್. ಎಸ್. ಶರ್ಮ ಅವರ "ಪ್ರಾಚೀನ ಭಾರತದಲ್ಲಿ ಶೂದ್ರರು" (ಅಧ್ಯಾಯ ೨) ಮುಂತಾದ ಗ್ರಂಥಗಳನ್ನು ನೋಡಬಹುದು. (ಬೆಂಗಳೂರಿನ ನವಕರ್ನಾಟಕ ಪ್ರಕಾಶನವು ಅಂತಹ ಅನೇಕ ಗ್ರಂಥಗಳನ್ನು ಹೊರತಂದಿದೆ). ಡಾ॥ ಬಿ. ಆರ್. ಅಂಬೇಡ್ಕರ್ ಅವರ "ಶೂದ್ರರು ಯಾರು ?" ಎಂಬ ಗ್ರಂಥ ಸಹ ಈ ನಿಟ್ಟಿನಲ್ಲಿ ಮೌಲಿಕವಾದ ಒಂದು ಗ್ರಂಥ.

ವರ್ಣ ವಿಭಜನೆಯನ್ನು ಋಗ್ವೇದದಲ್ಲಿ ಸ್ಪಷ್ಟವಾಗಿ ಉಲ್ಲೇಖಿಸಿರುವುದು ಒಂದು ಬಾರಿ ಮಾತ್ರ. ಅದು ಋಗ್ವೇದದ ಅಂತಿಮ ಘಟ್ಟದಲ್ಲಿ ರಚಿತವಾದ ಪುರುಷಸೂಕ್ತದ ಒಂದು ಮಂತ್ರದಲ್ಲಿದೆ (೧೦.೯೦.೧೨). ಅಂತಹ ವಿಭಜನೆಯು ವಿನಾಕಾರಣ ದಿಢೀರನೆ ಸಂಭವಿಸುವುದಿಲ್ಲ. ಋಗ್ವೇದದ ಮೊದಲ ಕಾಲಘಟ್ಟಗಳಲ್ಲಿ ನಿರ್ದಿಷ್ಟ ವಿಭಜನೆಯ ಪೂರ್ವದ ಹಂತಗಳ ಸನ್ನಿವೇಶದ ಚಿತ್ರಣವು ಹಲವು ಬಾರಿ ಮತ್ತು ಹಲವು ರೀತಿಗಳಲ್ಲಿ ದೊರೆಯುತ್ತದೆ. ಆ ಹಂತದಲ್ಲಿ ಋಗ್ವೇದ ಕವಿಗಳ ಸಮುದಾಯದ ಪಾಲಿಗೆ ಕೃಷಿ ಇನ್ನೂ ಆರಂಭಿಕ ಹಂತದಲ್ಲಿದೆ. ಆ ಸಮುದಾಯವು ವಾಯವ್ಯ ಭಾರತಕ್ಕೆ ಕಾಲಿರಿಸುವ ಒಂದು ಸಾವಿರ ವರ್ಷಗಳ ಮುನ್ನವೇ ಸಿಂಧೂ ನದಿ ನಾಗರಿಕತೆಯು ಉಚ್ಛ್ರಾಯ ಸ್ಥಿತಿಯನ್ನು ಮುಟ್ಟಿತ್ತು, ಮೊದಲ ನಗರೀಕರಣವೂ ನಡೆದಿತ್ತು. ಆ ನಾಗರಿಕತೆಯ ಸಮುದಾಯಗಳಿಗೆ ಕೃಷಿ ಸಾಕಷ್ಟು ಉನ್ನತಮಟ್ಟದಲ್ಲಿಯೇ ರೂಢಿಗೆ ಬಂದಿತ್ತು. ನಗರೀಕರಣಕ್ಕೆ ಕೃಷಿಯಿಂದ ಮಿಗುತಾಯ ಉತ್ಪಾದನೆಯು ಒಂದು ಕನಿಷ್ಠ ಅಗತ್ಯ. ಏಕೆಂದರೆ, ನಗರದ ಕುಶಲಕರ್ಮಿಗಳು, ಆಡಳಿತ ನಡೆಸುವವರು, ಮತಧರ್ಮದ ಪುರೋಹಿತ ವರ್ಗದವರು, ಸ್ವತಃ ಆಹಾರ ಉತ್ಪಾದಿಸಿಕೊಳ್ಳುವುದಿಲ್ಲ. ಸಿಂಧೂ ನಾಗರಿಕತೆಯ ನಿರ್ಮಾತೃಗಳು ಮತ್ತು ಋಗ್ವೇದದ ಕರ್ತೃಗಳ ಸಮುದಾಯ, ಎರಡೂ ಒಂದೇ ಎನ್ನುವವರಿದ್ದಾರೆ; ಆದರೆ ಅದು ಚಾರಿತ್ರಿಕವಾಗಿ ಅಸಂಗತವಾದ್ದು. ಅದನ್ನಿಲ್ಲಿ ಚರ್ಚೆಗೆ ಎತ್ತಿಕೊಳ್ಳುವ ಉದ್ದೇಶವಿಲ್ಲ. ಋಗ್ವೇದವು ಪಶುಸಂಗೋಪನಾ ಹಂತದಲ್ಲಿದ್ದವರ ಅದ್ಭುತ ನಿರ್ಮಿತಿ. ಅವರ ಸಂಪತ್ತು ಪಶುಗಳ ರೂಪದ್ದು, ವಿಶೇಷತಃ ಗೋ ಸಂಪತ್ತಿನಲ್ಲಿ ಕೇಂದ್ರೀಕೃತವಾದ್ದು. ಸಾಮುದಾಯಿಕ ಜೀವನದ ಘಟ್ಟದಲ್ಲಿದ್ದ ಆ ಜನರಲ್ಲಿ ಸಾಮಾಜಿಕ ಅಂತಸ್ತು ಎಂಬ ಕಲ್ಪನೆ ಸಾಂದ್ರವಾಗಿದ್ದಿರಲಾರದು. ತಮ್ಮನ್ನು ತಾವು ಹೆಸರಿಸಿಕೊಳ್ಳುವಾಗ ಋಗ್ವೇದದ ಕವಿಗಳು ಬಳಸುವ ಪದಗಳೆಂದರೆ ವಿಶ್(ಜನ), ಗಣ, ವ್ರಾತ, ಇತ್ಯಾದಿ. ಋಗ್ವೇದ ಸಮಾಜಕ್ಕೆ ನೆಂಟಸ್ತನ, ಬುಡಕಟ್ಟು ಸಂರಚನೆ ಮತ್ತು ಸಂತತಿ ಮೂಲಾಧಾರಗಳು. 'ವಿಶ್' ಎಂಬ ವರ್ಗಕ್ಕೆ ತೀರಾ ಭಿನ್ನವಾದ್ದು ದಸ್ಯು ವರ್ಗ. ಅದರ ಸಂಸ್ಕೃತಿ, ಜೀವನಕ್ರಮ, ಸಂಪತ್ತು, ಇತ್ಯಾದಿಗಳ ಬಗ್ಗೆ ಋಗ್ವೇದದಲ್ಲಿ ನೂರಾರು ಪ್ರಸ್ತಾಪಗಳಿವೆ. ದಸ್ಯುಗಳೆಂದು ಋಗ್ವೇದದಲ್ಲಿ ಹೆಸರಿಸಲಾಗಿರುವವರು ಸ್ವತಃ ತಮ್ಮನ್ನು ತಾವು ಹಾಗೆ ಕರೆದುಕೊಂಡರೋ, ಅಥವಾ ಋಗ್ವೇದದ ನಿರ್ಮಾತೃಗಳ ಸಮುದಾಯವು ಅವರಿಗೆ ಅಂತಹ ಹೆಸರು ಕೊಟ್ಟಿತೋ ಎಂಬುದನ್ನು ನಾವಿಂದು ತಿಳಿಯಲಾರೆವು. 'ದಸ್ಯು' ಎಂಬ ಪದದ ಅರ್ಥವನ್ನು ಗಮನಿಸಿದರೆ ತಮ್ಮನ್ನು ತಾವು ಹಾಗೆ ಕರೆದುಕೊಂಡಿರಲಾರರೆಂಬುದು ಸ್ವಯಂವೇದ್ಯವಾಗಿದೆ. 'ದಸ್ಯು' ಎಂದರೆ ದಾಸ, ಗುಲಾಮ. ಪ್ರಾಚೀನ ಗ್ರೀಸ್ ಮತ್ತು ರೋಂಗಳಲ್ಲಿ ಗುಲಾಮರನ್ನು 'ಗುಲಾಮರು' ಎಂದು ಕರೆದವರು ಸಾಕ್ರೆಟೀಸ್, ಪ್ಲೇಟೋ, ಅರಿಸ್ಟಾಟಲ್, ಮುಂತಾದ ಬಣದವರು. ಸ್ವತಃ ಸ್ಪಾರ್ಟಕಸ್ ತನ್ನನ್ನು ತಾನು 'ಗುಲಾಮ' ಎಂದು ಕರೆದುಕೊಳ್ಳಲಿಲ್ಲ. ಜೀಸಸ್ ಸಹ ಅವರನ್ನು ಗುಲಾಮರೆಂದು ಕರೆಯುವುದಿಲ್ಲ.

ಈ ಹಿನ್ನೆಲೆಯಲ್ಲಿ ದಸ್ಯುಗಳು ಆರ್ಯೇತರರೇ, ಅಲ್ಲವೇ, ಎಂಬ ಪ್ರಶ್ನೆ ಅನಿವಾರ್ಯ (ಅವರನ್ನು ಅನಾರ್ಯರೆಂದು ಕರೆಯದೆ ನಾವು ಆರ್ಯೇತರರು ಎಂಬ ಪದ ಬಳಸುತ್ತೇವೆಂಬುದನ್ನು ಗಮನಿಸಬೇಕು). ಇನ್ನೊಂದು ಸಂಗತಿಯೂ ಇದೆ : ಋಗ್ವೇದದಲ್ಲಿ 'ದಾಸ'ನೇ ಬೇರೆ 'ದಸ್ಯು'ವೇ ಬೇರೆ. ದಾಸನು ಆರ್ಯೇತರನೇ ಆಗಿರಬೇಕೆಂದಿಲ್ಲ. ಅವನು ಋಗ್ವೇದ ನಿರ್ಮಾಪಕರ ಸಮುದಾಯದವನೇ ಇರಬಹುದು, ಆದರೆ ಸ್ವಲ್ಪ ಕಡಿಮೆ ಸ್ಥಾನ ಉಳ್ಳವನು. ಆರ್ಯರ ಬುಡಕಟ್ಟುಗಳ ಒಳಜಗಳಗಳಲ್ಲಿ ದಾಸರು ಸ್ವಲ್ಪ ನಿಕೃಷ್ಟ; ಆದರೆ ಆರ್ಯೇತರ ದಸ್ಯುಗಳಷ್ಟು ನಿಕೃಷ್ಟರೂ ಅಲ್ಲ, ವೈರಿಗಳೂ ಅಲ್ಲ. ಇಂದ್ರನು ದಾಸರನ್ನು ಸಹ ಜಯಿಸಿ ಗುಹೆಗೆ ತಳ್ಳುತ್ತಾನೆ, ಸಂಹರಿಸುತ್ತಾನೆ. ಆದರೆ ಇನ್ನೂ ಸಮಗ್ರವಾಗಿ ಅವನು ಸದೆಬಡಿಯುವುದು ದಸ್ಯುಗಳನ್ನು. ಅವನು ದಸ್ಯುಗಳನ್ನು ಕೊಂದು "ಆರ್ಯವರ್ಣ"ವನ್ನು ರಕ್ಷಿಸುತ್ತಾನೆ. ದಾಸರನ್ನು ಕೊಂದಾಗ 'ಆರ್ಯವರ್ಣ'ದ ರಕ್ಷಣೆಯು ಅಪ್ರಾಸಂಗಿಕ ! ಇಂದ್ರನು ದಸ್ಯುಹಂತಾ, ದಸ್ಯುಹನ್, ದಸ್ಯುಘ್ನ, ಇತ್ಯಾದಿ ಗುಣವಾಚಕಗಳನ್ನು ಹೊಂದಿದ್ದಾನೆ; ಅವನು 'ದಾಸಹಂತಾ' ಅಲ್ಲ. 'ದಾಸ' ಮತ್ತು 'ದಸ್ಯು' ಒಂದೇ ಬಣವಲ್ಲವೆಂಬುದು ಇದರಿಂದ ಗ್ರಾಹ್ಯವಾಗುತ್ತದೆ. ದಾಸ ಮತ್ತು ದಸ್ಯುಗಳಿಬ್ಬರಿಗೂ ಕೋಟೆಕೊತ್ತಲಗಳಿದ್ದವು, ಇಂದ್ರನು ಆರ್ಯರಿಗಾಗಿ ಅವನ್ನು ಭಗ್ನಗೊಳಿಸುತ್ತಿದ್ದ. ಕೋಟೆಗಳನ್ನು ಕಟ್ಟಿಕೊಂಡಿದ್ದ ಹರಪ್ಪ ಸಂಸ್ಕೃತಿಯ ಜನರು ದಾಸ ಮತ್ತು ದಸ್ಯುಗಳಾಗಿ ಋಗ್ವೇದದ ಕವಿಗಳಿಗೆ ಕಂಡರೋ ಏನೋ ! ಈ ಪ್ರಶ್ನೆ ಅಪ್ರಸ್ತುತವಲ್ಲ. ಏನೇ ಇರಲಿ, ದಸ್ಯುಗಳು ಆರ್ಯೇತರರಲ್ಲದಿದ್ದರೆ, ಅವರನ್ನು ಅಷ್ಟು ಉಗ್ರವಾಗಿ ದೂಷಿಸುವುದು ಮತ್ತು ದಂಡಿಸುವುದು ಆರ್ಯರಾದ ಋಗ್ವೇದದ ಕರ್ತೃಗಳಿಗೆ ಏಕೆ ರಮ್ಯವೆನಿಸಬೇಕು ?

ಕೆಲವು ಋಗ್ವೇದ ಮಂತ್ರಗಳನ್ನು ಗಮನಿಸಿ ಅವು ಎಂತಹ ಸಂದರ್ಭಗಳನ್ನು ಸೂಚಿಸುತ್ತವೆಂಬುದನ್ನು ನೋಡೋಣ : "ತನ್ನ ಆಯುಧದಲ್ಲಿ ವಿಶ್ವಾಸವಿಟ್ಟು ಇಂದ್ರನು ಅದರಿಂದ ದಾಸರ 'ಪುರ'ವನ್ನು ವಿನಾಶ ಗೈಯ್ಯುತ್ತಾ ನಡೆದ; ಎಲೈ ವಜ್ರೋಪೇತನಾದ ಇಂದ್ರನೇ, ಅದನ್ನು ದಸ್ಯುಗಳ ಮೇಲೆ ಒಗೆದು ಆರ್ಯರ ಶಕ್ತಿ ಮತ್ತು ಯಶಸ್ಸನ್ನು ವರ್ಧಿಸು" (೧.೧೦೩.೩:ಸ ಜಾತೂಭರ್ಮಾ ಶ್ರದ್ದಧಾನಃ ಓಜಃ ಪುರಃ ವಿಭಿಂದನ್ ಅಚರತ್ ವಿ ದಾಸೀಃ। ವಿದ್ವಾನ್ ವಜ್ರಿನ್ ದಸ್ಯವೇ ಹೇತಿಂ ಅಸ್ಯ ಆರ್ಯಂ ಸಹಃ ವರ್ಧಯ ದ್ಯುಮ್ನಂ ಇಂದ್ರ॥). ಇಂದ್ರನು ಸೂರ್ಯ ಮತ್ತು ಕುದುರೆಗಳನ್ನು ಹೊಂದಿ ಸರ್ವಜನ ಪೋಷಕವಾದ ಗೋವನ್ನು ಪಡೆದುಕೊಂಡ; ಚಿನ್ನದ ಸಂಪತ್ತು ಗೆದ್ದುಕೊಂಡ. ದಸ್ಯುಗಳನ್ನು ಕೊಂದು ಹಾಕಿ ಆರ್ಯವರ್ಣದವರಿಗೆ ರಕ್ಷಣೆ ನೀಡಿದ (೩.೩೪.೯: ...ಹತ್ವೀ ದಸ್ಯೂನ್ ಪ್ರ ಆರ್ಯಂ ವರ್ಣಮಾವತ್). ಈ ಮಂತ್ರವನ್ನು ಯಥಾವತ್ತಾಗಿ ಅಥರ್ವವೇದದಲ್ಲಿಯೂ

ಸೇರಿಸಲಾಗಿದೆ (೨೦.೧೧.೯). ಇಂತಹ ಇನ್ನೂ ಅನೇಕ ಮಂತ್ರಗಳನ್ನು ಋಗ್ವೇದದಲ್ಲಿ ನಾವು ಕಾಣುತ್ತೇವೆ.

ಹೀಗೆ ದಾಸ ಮತ್ತು ದಸ್ಯುಗಳನ್ನು, ವಿಶೇಷತಃ ದಸ್ಯುಗಳನ್ನು, ಕೊಲ್ಲಬೇಕೇಕೆ ? ಇಂದ್ರನು ಪ್ರಬಲನೇನೋ ಸರಿ, ಆದರೆ ವಿನಾಕಾರಣ ಅವನು ದಸ್ಯುಗಳನ್ನು ಕೊಲ್ಲುತ್ತಾನೆಯೆ ? ಅವರನ್ನು ಕೊಲ್ಲುವುದರಿಂದ ಉಂಟಾಗುವ ಲಾಭವೇನು ? ಇಲ್ಲಿ ನೆನಪಿನಲ್ಲಿಟ್ಟು ಕೊಳ್ಳಬೇಕಾದ ಒಂದು ಸಂಗತಿ ಇದೆ : ಆರ್ಯರು ಅಲೆಮಾರಿಗಳು, ಪಶುಸಂಗೋಪನಾ ಹಂತದವರು; ಆದರೆ ದಸ್ಯುಗಳು ಇನ್ನೂ ಮುಂದುವರಿದ ಹಂತದವರು. ಅವರು ನೆಲೆ ನಿಂತು ಸಂಪತ್ತನ್ನು ಶೇಖರಿಸುವಷ್ಟು ಉತ್ಪಾದನೆ ಮಾಡಿಕೊಳ್ಳಬಲ್ಲವರು. ಆ ಸಂಪತ್ತು ಆರ್ಯರ ಪ್ರತಿನಿಧಿಯಾದ ಇಂದ್ರನ ಕಣ್ಣು ಕುಕ್ಕುತ್ತದೆಯಾದ್ದರಿಂದ ಆರ್ಯೇತರರನ್ನು ಕೊಂದಾದರೂ ಸರಿಯೆ, ಅದನ್ನು ತನ್ನ ಆರಾಧಕರಾದ ಆರ್ಯರಿಗೆ ಕೊಡಿಸುವುದು ಅವನ ಪ್ರಾಬಲ್ಯದ ಹಿರಿಮೆ. ಅವನನ್ನು ಹೊಗಳುವ ಪರಿಯೇ ಇದನ್ನು ಸೂಚಿಸುತ್ತದೆ : "ಶುಷ್ಣನು ಶೇಖರಿಸಿಟ್ಟು ಕೊಂಡಿದ್ದ ಸಂಪತ್ತನ್ನು ಸೆಳೆದುಕೊಂಡ ಎಲೈ ಇಂದ್ರನೆ, ಅವನ ಕೋಟೆಯನ್ನು ಭಗ್ನಗೊಳಿಸಿದ ಕೀರ್ತಿ ನಿನ್ನದು" (೪.೩೦.೧೩ : ಉತ ಶುಷ್ಣಸ್ಯ ಧೃಷ್ಣುಯಾ ಪ್ರ ಮೃಕ್ಷೋ ಅಭಿವೇದನಂ । ಪುರೋ ಯದಸ್ಯ ಸಂಪಿಣಕ್ ॥). ದಾಸ ಕುಲಿತರನ ಮಗ ಶಂಬರನನ್ನು ಬೆಟ್ಟದಿಂದ ತಳ್ಳಿದ ಶೂರ ಈ ಇಂದ್ರ (೪.೩೦.೧೪). ಅಲ್ಲದೆ, ವರ್ಚಿನ್ ಎಂಬ ದಾಸನ ಸಾವಿರಾರು ಅನುಯಾಯಿಗಳನ್ನು ಸಹ ಇಂದ್ರನು ನುಚ್ಚುನೂರು ಮಾಡಿದ್ದಾನೆ (೪.೩೦.೧೫). ಎಲ್ಲಾ ಅವರ ಸಂಪತ್ತನ್ನು ಸೂರೆಮಾಡುವುದಕ್ಕಾಗಿ. ದಸ್ಯುಗಳು ಧನವಂತರೆಂದು ಋಗ್ವೇದದಲ್ಲಿ ಹಲವು ಬಾರಿ ಹೇಳಲಾಗಿದೆ : "ಇಂದ್ರನೆ, ಧನವಂತನಾದ ದಸ್ಯುವನ್ನು ನೀನು ಒಬ್ಬನೇ ಹಿಮ್ಮೆಟ್ಟಿಸಿ ಕೊಂದೆ" (೧.೩೩.೪ : ವಧೀರ್ಹಿ ದಸ್ಯುಂ ಧನಿನಂ ಘನೇನ ಏಕಶ್ಚರನ್...); ದಸ್ಯುಗಳು ಅಳಲಿ, ನಗಲಿ, ಅದಕ್ಕೆ ಅಂಜದೆ ಇಂದ್ರನು ಅವರನ್ನು ಅಂತರಿಕ್ಷದಾಚೆಗೆ ತಳ್ಳಿ ಸುಟ್ಟಿದ್ದಾನೆ ಮತ್ತು ತನಗೆ ಹೊಗಳಿ ಹವಿಸ್ಸು ನೀಡುವವರನ್ನು ಶ್ಲಾಘಿಸಿದ್ದಾನೆ (೧.೩೩.೭ : ತ್ವಮೇತಾನ್ ರುದತೋ ಜಕ್ಷತಶ್ಚ ಅಯೋಧಯಃ ರಜಸಃ ಇಂದ್ರ ಪಾರೇ । ಅವ ಅದಹಃ ದಿವಃ ಆ ದಸ್ಯುಂ ಉಚ್ಚಾ ಪ್ರ ಸುನ್ವತಃ ಸ್ತುವತಃ ಶಂಸಮಾವಃ ॥). ದಸ್ಯುಗಳು ತಮ್ಮ ಚಿನ್ನ ಮತ್ತು ಆಭರಣಗಳನ್ನು ಧರಿಸಿಕೊಂಡು ಎಲ್ಲೆಲ್ಲೂ ವ್ಯಾಪಿಸಿಬಿಟ್ಟಿದ್ದರು; ಆದರೆ ಅವರಿಗೆ ಇಂದ್ರನಿಂದ ತಪ್ಪಿಸಿಕೊಳ್ಳಲು ಆಗಲಿಲ್ಲ, ಅವನಿಂದ ಅವರು ಹತರಾದರು (೧.೩೩.೮ : ಚಕ್ರಾಣಾಸಃ ಪರಿಣಹಂ ಪೃಥಿವ್ಯಾ ಹಿರಣ್ಯೇನ ಮಣಿನಾ ಶುಂಭಮಾನಾಃ). ಆರ್ಯರಿಗೆ ಮಣಿಗಳನ್ನು ತಯಾರಿಸುವ ತಂತ್ರಜ್ಞಾನವಿಲ್ಲ. ಹರಪ್ಪ ಸಂಸ್ಕೃತಿಯ ಪರಂಪರೆಯವರಾದ ದಸ್ಯುಗಳಿಗೆ ಚಿನ್ನವೂ ಗೊತ್ತು, ಆಭರಣಗಳೂ ಗೊತ್ತು. ಇಂದ್ರ ಅದನ್ನು ಕಿತ್ತುಕೊಂಡು ಆರ್ಯರಿಗೆ ಕೊಡುತ್ತಾನೆ ! ಆರ್ಯರದು ಇದೊಂದು ನಿರಂತರವಾದ ಪ್ರಾರ್ಥನೆ : "ಎಲೈ ಇಂದ್ರ, ಯಜ್ಞದಲ್ಲಿ ಯಾರು ನಿನಗೆ ಸೋಮವನ್ನು ನೀಡಿ ತುಷ್ಟೀಕರಿಸುವುದಿಲ್ಲವೋ ಅಂತಹವರು ನಿನಗೆ ಪ್ರೀತಿಪಾತ್ರರಲ್ಲ; ಅವರನ್ನು ಕೊಂದು ಅವರ ಸಂಪತ್ತನ್ನು ನಮಗೆ ಕೊಡಿಸು, ನಿನಗೆ ಪ್ರಿಯರಾದ ನಾವು ಅದನ್ನು ಅಪೇಕ್ಷಿಸುತ್ತೇವೆ" (೧.೧೭೬.೪ : ಅಸುನ್ವಂತಂ ಸಮಂ ಜಹಿ ದುಣಾಶಂ ಯೋ ನ ತೇ ಮಯಃ । ಅಸ್ಮಭ್ಯಂ ಅಸ್ಯ ವೇದನಂ ದದ್ಧಿ ಸೂರಿಃ ಚಿತ್ ಓಹತೇ ॥). ಆರ್ಯರ 'ಉದಾತ್ತ' ಮೌಲ್ಯಗಳ ಬಗ್ಗೆ ಹೆಮ್ಮೆ ಎಷ್ಟಿರಬೇಕೆಂಬುದನ್ನು ತೀರ್ಮಾನಿಸುವಾಗ ಇಂತಹ ಸಂದರ್ಭಗಳನ್ನು ಮರೆಯಬಾರದು. ದಸ್ಯುಗಳು ಆರ್ಯರಿಗೆ ಕಿರುಕುಳ ಕೊಟ್ಟರೆಂದು ಋಗ್ವೇದದಲ್ಲಿ ಎಲ್ಲೂ ಉಲ್ಲೇಖವಿಲ್ಲ; ಆದರೆ ದಸ್ಯುಗಳನ್ನು ಕೊಲ್ಲಬೇಕೆಂದು ಆರ್ಯರು ಇಂದ್ರನಲ್ಲಿ ಹೆಜ್ಜೆಹೆಜ್ಜೆಗೂ ಪ್ರಾರ್ಥಿಸುತ್ತಾರೆ. ಇದು ಯಾವ ಮಟ್ಟವನ್ನು ಮುಟ್ಟಿಬಿಡುತ್ತದೆಂದರೆ ಒಬ್ಬ ಋಗ್ವೇದದ ಕವಿ ಹೇಳುತ್ತಾನೆ, "ಇಂದ್ರ, ಧೀರನಾದ ನೀನು ಪಿಪ್ರುವಿನ ಕೋಟೆಗಳನ್ನು ನಾಶಗೈದೆ ಮತ್ತು ದಸ್ಯುಗಳನ್ನು ಕೊಂದು ಋಜಿಶ್ವಿನ್‌ನನ್ನು ಪೊರೆದೆ," ಎಂದು (೧.೫೧.೫ : ...ತ್ವಂ ಪಿಪ್ರೋಃ ನೃಮಣಃ ಪ್ರಾರುಜಃ ಪುರಃ ಪ್ರ ಋಜಿಶ್ವಾನಂ ದಸ್ಯುಹತ್ಯೇಷು ಆವಿಥ ॥); "ಇಂದ್ರ, ನೀನಿರುವುದೇ




ದಸ್ಯುಗಳ ಹತ್ಯೆಗೈಯಲು" (೧.೫೧.೬ : ...ಸನಾದೇವ ದಸ್ಯುಹತ್ಯಾಯ ಜಜ್ಞಿಷೇ ॥); "ಇಂದ್ರ, ಆರ್ಯರನ್ನು ಮತ್ತು ದಸ್ಯುಗಳನ್ನು ಸರಿಯಾಗಿ ಪ್ರತ್ಯೇಕಿಸಿ ನೋಡು; ವ್ರತಭ್ರಷ್ಟರಾದವರನ್ನು (ಅಂದರೆ, ವ್ರತಗಳನ್ನು ಮಾಡದ ದಸ್ಯುಗಳನ್ನು) ನಿನಗಾಗಿ ಆಸನ ಸಿದ್ಧಪಡಿಸುವ ನಮ್ಮಡಿಯಲ್ಲಿ ಹಾಕು. ನೀನು ಯಜ್ಞ ಮಾಡುವವರ ಚೋದಕಶಕ್ತಿಯಾಗು. ನಮ್ಮ ಆಶಯವು ಅದೇ ಆಗಿದೆ" (೧.೫೧.೮ : ವಿ ಜಾನೀಹಿ ಆರ್ಯಾನ್ ಯೇ ಚ ದಸ್ಯವೋ ಬರ್ಹಿಷ್ಮತೇ ರಂಧಯಾ ಶಾಸತ್ ಅವ್ರತಾನ್ । ಶಾಕೀ ಭವ ಯಜಮಾನಸ್ಯ ಚೋದಿತಾ ವಿಶ್ವೇತ್ತಾ ತೇ ಸಧಮಾದೇಷು ಚಾಕನ). ದಸ್ಯುಗಳನ್ನು ಅಯಾಜ್ಞಿಕರು, ಅವ್ರತಿಗಳು, ಅನಿಂದ್ರರು, ಎಂದು ಹತ್ತಾರು ಬಾರಿ ಋಗ್ವೇದದಲ್ಲಿ ದೂಷಿಸಲಾಗಿದೆ. ಉದಾಹರಣೆಗೆ ಒಂದು ಮಂತ್ರವನ್ನು ನೋಡೋಣ : "ಈ ಪಣಿಗಳಿದ್ದಾರಲ್ಲ, ಅವರು ಮೂರ್ಖರು, ಶ್ರದ್ಧೆ ಇಲ್ಲದವರು, ಕಟುವಾಗಿ ಮಾತನಾಡುವವರು, ಅಯಾಜ್ಞಿಕರು, ಪೂಜಿಸದವರು; ಆ ದಸ್ಯುಗಳನ್ನು ಅಗ್ನಿಯು ದೂರಕ್ಕೆ ಹೊಡೆದಟ್ಟಿದ್ದಾನೆ" (೭.೬.೩ : ನಿ ಅಕ್ರತೂನ್ ಗ್ರಥಿನಃ ಮೃಧ್ರವಾಚಃ ಪಣೀನ್ ಅಶ್ರದ್ಧಾನ್ ಅವೃಧಾನ್ ಅಯಜ್ಞಾನ್ । ಪ್ರ ಪ್ರ ತಾನ್ ದಸ್ಯೂನ್ ಅಗ್ನಿಃ ವಿವಾಯ ಪೂರ್ವಃ ಚಕಾರ ಅಪರಾನ್ ಅಯಜ್ಯೂನ್ ॥).

ಇದೇನು ಋಗ್ವೇದವು ದಸ್ಯುಗಳನ್ನು ದೂಷಿಸುತ್ತಿರುವುದೋ, ಅಥವಾ ಹಲವು ಶತಮಾನಗಳ ನಂತರದ ವೇದಾಂತಿಗಳು ಲೋಕಾಯತರನ್ನು ನಿಂದಿಸುತ್ತಿರುವುದೋ, ಎಂಬ ಅನುಮಾನ ಉಂಟಾಗುವಷ್ಟು ಈ ಮಂತ್ರಗಳು ಶ್ರೇಷ್ಠ–ಕನಿಷ್ಠ ಎಂಬ ಭಾವನೆಯನ್ನು ಮೂಡಿಸುತ್ತವೆ. ವರ್ಣ ವಿಭಜನೆಯ ನಂತರದ ಕಾಲದಲ್ಲಿ "ಉಚ್ಚ" ವರ್ಣದವರು "ನೀಚ" ವರ್ಣದವರನ್ನು ನಡೆಸಿಕೊಂಡುದಕ್ಕೆ ಮಾದರಿಯೋ ಎಂಬಂತೆ ಋಗ್ವೇದದಲ್ಲಿ ಆರ್ಯರ ಮತ್ತು ದಸ್ಯುಗಳ ನಡುವೆ ಅಗಾಧ ವೈಮನಸ್ಯವಿದೆ. ಎಲ್ಲವೂ ಆರ್ಯೇತರರ, ಅಂದರೆ ದಸ್ಯು ಮುಂತಾದ ಮೂಲನಿವಾಸಿಗಳ, ಸಂಪತ್ತನ್ನು ತಮ್ಮದಾಗಿಸಿಕೊಳ್ಳಬೇಕೆಂಬ ಆಸೆಯಿಂದ. ನಮ್ಮಲ್ಲಿ ಒಂದು ಸಂಪ್ರದಾಯವಿದೆ : ಅದರ ಪ್ರಕಾರ 'ಆರ್ಯರು' ಎಂದರೆ ಒಂದು ಜನಾಂಗದವರಲ್ಲ, ಅವರು ಯಾರನ್ನೂ ಕೆಟ್ಟದ್ದಾಗಿ ನಡೆಸಿಕೊಳ್ಳಲಿಲ್ಲ; ಆ ಶಬ್ದದ ಅರ್ಥ ಕೇವಲ 'ಒಳ್ಳೆಯ ನಡತೆಯವರು' ಎಂದು. ಹೀಗೆ ವ್ಯಾಖ್ಯಾನಿಸುವ ಮೊದಲು ಈ ಸಿದ್ಧಾಂತದ ಪ್ರತಿಪಾದಕರಾದ 'ಸಜ್ಜನರು' ಆರ್ಯ ಮತ್ತು ದಸ್ಯುಗಳ ನಡುವಣ ಸಂಘರ್ಷಗಳನ್ನು, ಅವುಗಳಿಗೆ ಕಾರಣಗಳನ್ನು, ನೇರವಾಗಿ ಋಗ್ವೇದದಿಂದಲೇ ತಿಳಿದುಕೊಳ್ಳುವುದು ಆರೋಗ್ಯಕರ. ದಸ್ಯುಗಳನ್ನು ಕಪಟತನಕ್ಕೆ ಹೆಸರಾದವರೆಂದು ಋಗ್ವೇದ ಹೇಳಿದೆ. ಮಾನವ ಸ್ನೇಹಿ (ನೃಮಣಃ) ಇಂದ್ರನು ಸ್ತೋತ್ರವಾದ ತನಗೆ ಬೆಳಕು ನೀಡಬೇಕೆಂದು ಕೇಳಿಕೊಂಡು, ಕಪಟಿ ಮತ್ತು ಆರ್ಯರ ಆಚರಣೆಗಳ ವಿರೋಧಿಯಾದ ದಸ್ಯುವನ್ನು ನಾಶಪಡಿಸಬೇಕೆಂದು ಒಬ್ಬ ಕವಿ ಹೇಳುತ್ತಾನೆ (೪.೧೬.೯ : ...ಮಾಯಾವಾನ್ ಅಬ್ರಹ್ಮಾ ದಸ್ಯುರರ್ತ). ಇನ್ನೊಬ್ಬ ಕವಿ ಹೇಳುತ್ತಾನೆ : "ನಮ್ಮ ಪರಿಸರದಲ್ಲಿ ದಸ್ಯುವಿದ್ದಾನೆ. ಅವನು ಅಕರ್ಮಾ (ಅಂದರೆ ಋಗ್ವೇದದ ಕವಿಯಂತೆ ಯಜ್ಞದಲ್ಲಿ ತೊಡಗುವುದಿಲ್ಲ), ಅಜ್ಞಾನಿ (ಅಮಂತುಃ), ಅಮಾನುಷ, ಕ್ಷುದ್ರ ಆಚರಣೆಗಳನ್ನು ಇಟ್ಟುಕೊಂಡಿರುವವನು; ಶತ್ರುಹಂತಕನಾದ ಇಂದ್ರನೆ, ಆ ದಾಸನ ಆಯುಧವನ್ನು ನಿಷ್ಕ್ರಿಯಗೊಳಿಸಿ ಅವನನ್ನು ಕೊಲ್ಲು" (೧೦.೨೨.೮ : ಅಕರ್ಮಾ ದಸ್ಯುರಭಿ ನಃ ಅಮಂತುಃ ಅನ್ಯವ್ರತಃ ಅಮಾನುಷಃ । ತ್ವಂ ತಸ್ಯ ಅಮಿತ್ರಹನ್ ವಧಃ ದಾಸಸ್ಯ ದಂಭಯ ॥). ದಸ್ಯುವು 'ಅನ್ಯವ್ರತ' ಹೊಂದಿರುವಂಥವನೆಂಬುದು ನಿಜ, ಏಕೆಂದರೆ ಯಜ್ಞವು ಅವನ ಆಚರಣೆಯಲ್ಲ ಮತ್ತು ಇಂದ್ರನು ಅವನ ದೇವತೆಯಲ್ಲ. ಹಾಗೆಂದ ಮಾತ್ರಕ್ಕೆ ಅವನು ಹತ್ಯೆಗೆ ಅರ್ಹನೆ ? ಅವನನ್ನು 'ಅಮಾನುಷ' ಎಂದಿದ್ದಾನೆ ಕವಿ. ಆದರೆ ಅಮಾನುಷವಾದ್ದೇನು ಮಾಡಿದ್ದಾನೆ ಆ ದಸ್ಯು ಎಂಬುದನ್ನು ಎಲ್ಲೂ ಹೇಳಿಲ್ಲ. ತನ್ನ ಸಂಪತ್ತನ್ನು ತನ್ನಲ್ಲಿರಿಸಿ ಕೊಂಡಿದ್ದಾನೆಂಬುದು ಅಮಾನುಷವೆ ? ಅಥವಾ, ಅದನ್ನು ಸೆಳೆದುಕೊಳ್ಳಲು ಅವನನ್ನು ಕೊಲ್ಲಬೇಕೆಂದು ಇಂದ್ರನನ್ನು ಕೇಳಿಕೊಳ್ಳುವುದು ಅಮಾನುಷವೆ ? ದಸ್ಯುವು ಕವಿಗೆ ಸ್ವಕೀಯನಾಗಿರಲಿ, ಪರಕೀಯನಾಗಿರಲಿ, ಅವನನ್ನು ಕೊಲ್ಲಬೇಕೆಂಬ

ಹಠವೇಕೆ ? ಋಗ್ವೇದದ ಅದ್ಭುತ ಮೌಲ್ಯಗಳನ್ನು ಎಲ್ಲೆಯಿಲ್ಲದಷ್ಟು ಶ್ಲಾಘಿಸುವ ನಮ್ಮ ಕೆಲವು ವಿದ್ವಾಂಸರು ಇದಕ್ಕೇನೆನ್ನುತ್ತಾರೆ ? ಅವರೇಕೆ ಇಂತಹ ಮಂತ್ರಗಳನ್ನು ಅಷ್ಟಾಗಿ ಪ್ರಸ್ತಾಪಿಸುವುದಿಲ್ಲ ? ಇದು ಮುಖ್ಯವಾದ ವಿಷಯ, ಏಕೆಂದರೆ ಆರ್ಯ ಮತ್ತು ಆರ್ಯೇತರರ ಭಿನ್ನತೆ ಮತ್ತು ಘರ್ಷಣೆಯು ಕ್ರಮೇಣ ವರ್ಣ ವಿಭಜನೆಗೆ, ಶ್ರೇಷ್ಠ–ಕನಿಷ್ಠ ಎಂಬ ಏರುಪೇರಿನ ಸಾಮಾಜಿಕ ವ್ಯವಸ್ಥೆಗೆ, ಮಹಾಪಾತಕವಾದ ಅಸ್ಪೃಶ್ಯತೆಗೆ ಬಾಗಿಲು ತೆರೆಯುತ್ತದೆ. ಎಲ್ಲಾ ಆರಂಭವಾದ್ದು ಹೊರಗಿನ ಮತ್ತು ಒಳಗಿನ ಜನಸಮುದಾಯಗಳ ವಿಭಿನ್ನ ರೀತಿನೀತಿಗಳಿಂದ, ಉತ್ಪಾದನಾ ಹಂತಗಳ ಭಿನ್ನತೆಯಿಂದ, ಸಂಪತ್ತಿನ ಲಾಲಸೆಯಿಂದ.

ಇಂದ್ರಾದಿ ದೇವತೆಗಳಿಂದ ಅಪಾರ ಸಹಾಯ ಮತ್ತು ಶಕ್ತಿ ಪಡೆದ ನೂರಾರು ಆರ್ಯರ ಹೆಸರುಗಳು ಋಗ್ವೇದದಲ್ಲಿ ಬರುತ್ತವೆ. ಉದಾಹರಣೆಗೆ, ಅಶ್ವಿನಿ ದೇವತೆಗಳನ್ನು ಸ್ತುತಿಸುವ ಒಂದು ಸೂಕ್ತವಿದೆ (೧.೧೧೨). ಅದರಲ್ಲಿ ಬರುವ ಹೆಸರುಗಳು ಹೀಗಿವೆ : ರೇಭ (ಬಂಧನದಿಂದ ಬಿಡಿಸಲ್ಪಟ್ಟವನು), ವಂದನ (ಬಾವಿಯಿಂದ ಎತ್ತಲ್ಪಟ್ಟವನು), ಕಣ್ವ (ಜಯ ಗಳಿಸಿದವನು), ಅಂತಕ (ಗುಂಡಿಯಿಂದ ಎತ್ತಲ್ಪಟ್ಟವನು), ಭುಜ್ಯು (ಮುಳುಗಡೆಯಿಂದ ರಕ್ಷಿಸಲ್ಪಟ್ಟವನು), ಕರ್ಕಂಧು ಮತ್ತು ವಯ್ಯ (ಕಷ್ಟದಿಂದ ಪಾರಾದವರು), ಶುಚಂತಿ (ಧನ ಮತ್ತು ಗೃಹ ಪಡೆದವನು), ಪುರುಕುತ್ಸ ಮತ್ತು ಪೃಶ್ನಿಗು (ರಕ್ಷಣೆ ಪಡೆದವರು), ಪರಾವೃಜ್ (ಕಣ್ಣು–ಕಾಲು ಪಡೆದವನು), ವಸಿಷ್ಠ–ಶ್ರುತರ್ಯ–ಕುತ್ಸ–ನರ್ಯ (ಸಹಾಯ ಪಡೆದವರು), ವಿಶ್ಪಲಾ (ಕಾದಾಟದಲ್ಲಿ ಸಂಪತ್ತು ಪಡೆದವಳು, ಗಾಯ ಮಾಗಿಸಿಕೊಂಡವಳು), ದೀರ್ಘಶ್ರವಸ್ (ಮಳೆ ಪಡೆದವನು), ಔಶಿಜ (ವ್ಯಾಪಾರಿ), ಕಕ್ಷೀವಾನ್ (ಗಾಯಕ), ತ್ರಿಶೋಕ (ಗೋವುಗಳನ್ನು ಪಡೆದವನು), ಮಂಧಾತೃ (ಭೂಮಿಯ ಒಡೆಯ), ಭರದ್ವಾಜ (ಸಹಾಯ ಪಡೆದವನು), ಅತಿಥಿಗ್ವ–ದಿವೋದಾಸ–ಕಶೋಜು (ಶಂಬರನನ್ನು ಕೊಂದಾಗ ರಕ್ಷಣೆ ಪಡೆದವರು), ತ್ರಸದಸ್ಯು (ಕೋಟೆ ಭಗ್ನವಾದಾಗ ರಕ್ಷಣೆ ಪಡೆದವನು), ವಮ್ರ (ಕುಡುಕ), ಉಪಸ್ತುತ (ಇವನೇ ವಮ್ರನೂ ಇರಬಹುದು), ಕಲಿ (ಹೆಂಡತಿಯನ್ನು ಪಡೆದವನು), ವ್ಯಶ್ವ ಮತ್ತು ಪೃಥಿ (ಕುದುರೆ ಪಡೆದವನು ವ್ಯಶ್ವ, ಪೃಥಿ ಬೇರೇನೋ ಸಹಾಯ ಪಡೆದವನು), ಶಯು–ಅತ್ರಿ–ಮನು (ಅನಿರ್ದಿಷ್ಟ ಸಹಾಯ ಪಡೆದವರು), ಸ್ಯೂಮರಶ್ಮಿ (ಬಾಣಗಳನ್ನು ಪ್ರಯೋಗಿಸಿ ರಕ್ಷಣೆ ನೀಡಲಾದವನು), ಪಠರ್ವಾ (ಕುದುರೆ ಪಡೆದವನು), ಶರ್ಯಾತ (ಯಾವುದೋ ಜಗಳದಲ್ಲಿ ರಕ್ಷಣೆ ಪಡೆದವನು), ಇತ್ಯಾದಿ ಇನ್ನೂ ಹತ್ತಾರು ಹೆಸರುಗಳಿವೆ. ಎಂಥದಾದರೂ ರಕ್ಷಣೆ ಅಥವಾ ಸಂಪತ್ತು ಪಡೆದ ಒಬ್ಬನೇ ಒಬ್ಬ ದಸ್ಯುವಿನ ಹೆಸರೂ ಋಗ್ವೇದದಲ್ಲಿಲ್ಲ, ಏಕೆಂದರೆ ದಸ್ಯುಗಳು ಹತ್ಯೆಗಷ್ಟೇ ಅರ್ಹರು. ಕೆಲವು ದಸ್ಯುಗಳು ಸೇರಿ ದಭೀತಿ ಎಂಬುವವನನ್ನು ವಶಪಡಿಸಿಕೊಂಡಾಗ ಅವರನ್ನು ಹಿಮ್ಮೆಟ್ಟಿಸಿ ಇಂದ್ರನು ಅವರ ಗೋವುಗಳನ್ನು ಮತ್ತು ಕುದುರೆಗಳನ್ನು ವಶಪಡಿಸಿಕೊಂಡ ಮತ್ತು ಅವನ್ನು ದಭೀತಿಗೆ ನೀಡಿದ (೨.೧೫.೪: ...ಸಂ ಗೋಭಿಃ ಅಶ್ವೈಃ ಅಸೃಜತ್ ರಥೇಭಿಃ ಸೋಮಸ್ಯ ತಾ ಮದೇ ಇಂದ್ರಃ ಚಕಾರ). ಇಲ್ಲಿರುವ ಸೂಚನೆಗಳು ಎರಡು : ದಸ್ಯುಗಳು ಆರ್ಯನಾದ ದಭೀತಿಯಿಂದ ರಥ, ಅಶ್ವ, ಎಲ್ಲಾ ಕಿತ್ತುಕೊಂಡಿದ್ದರು; ಸೋಮರಸವನ್ನು ಕುಡಿದು ಮತ್ತನಾಗಿದ್ದ ಇಂದ್ರ ಅವನ್ನು ಬಿಡಿಸಿಕೊಟ್ಟ , ಎಂದು.

ಹೀಗೆ ಆರ್ಯರಿಂದ ಪದೇಪದೇ ಸೋಲಿಸಲ್ಪಡುತ್ತಿದ್ದ ಆರ್ಯೇತರರು ಅಗ್ನಿಗೂ ಆಹುತಿಯಾಗಿದ್ದುದಿದೆ. ಅವರು ಕರಿಯ ಬಣ್ಣದವರು, ಛಿದ್ರಗೊಂಡ ಗುಂಪಿನವರು, ಅಗ್ನಿಗೆ ಹೆದರಿ ದಿಕ್ಕಾಪಾಲಾಗಿ ಓಡಿಹೋಗುವವರು, ತಮ್ಮ ಕೋಟೆಗಳನ್ನು ಸುಡಿಸಿಕೊಂಡವರು (೭.೫.೩ : ತ್ವದ್ಭಿಯಾ ವಿಶಃ ಆಯನ್ ಅಸಿಕ್ನೀಃ ಅಸಮನಾಃ ಜಹತೀಃ ಭೋಜನಾನಿ । ವೈಶ್ವಾನರ ಪುರವೇ ಶೋಶುಚಾನಃ ಪುರೋ ಯದಗ್ನೇ ದರಯನ್ ಅದೀದೇಃ ॥). ಕಪ್ಪು ಚರ್ಮದವರನ್ನು ಇಂದ್ರನು ದ್ವೇಷಿಸುತ್ತಾನೆ ಮತ್ತು ಅವನ ಅಸಾಮಾನ್ಯ ಶಕ್ತಿಯಿಂದ ವ್ರತರಹಿತರನ್ನು ಸುಡುತ್ತಾನೆ ಹಾಗೂ ಭೂಮಿ–ಸ್ವರ್ಗಗಳಾಚೆಗೆ ದೂಡುತ್ತಾನೆ (೯.೭೩.೫ : ... ಸಂದಹಂತೋ ಅವ್ರತಾನ್। ಇಂದ್ರದ್ವಿಷ್ಟಾಂ ಅಪ ಧಮಂತಿ ಮಾಯಯಾ ತ್ವಚಾಂ ಅಸಿಕ್ನೀಂ ಭೂಮನೋ ದಿವಸ್ಪರಿ ॥). ಋಜಿಶ್ವನ್ ಎಂಬುವನು ವಿದಥಿನ್ ಎಂಬುವವನ ಮಗ. ಅವನಿಗೆ ಇಂದ್ರನ ರಕ್ಷಣೆ ಇದೆ. ಪಿಪ್ರು ಮತ್ತು ಮೃಗಯ ಎಂಬ ಅಸುರರನ್ನು ಇಂದ್ರ ಅವರಿಗೆ ಒಪ್ಪಿಸುತ್ತಾನೆ. ಐವತ್ತು ಸಾವಿರ ಕಪ್ಪು ಬಣ್ಣದವರನ್ನು ಅವನು ಕೊಂದ; ಅವರ ಪುರಗಳನ್ನು ಧ್ವಂಸಮಾಡಿದ; ಚಿಂದಿಬಟ್ಟೆಯಂತೆ ಅವು ನಾಶವಾಗಿಹೋದವು (೪.೧೬.೧೩ : ತ್ವಂ ಪಿಪ್ರುಂ ಮೃಗಯಂ ಶೂಶುವಾಂಸಂ ಋಜಿಶ್ವನೇ ವೈದಥಿನಾಯ ರಂಧೀಃ। ಪಂಚಾಶತ್ ಕೃಷ್ಣಾ ನಿ ವಪಃ ಸಹಸ್ರಾ ಅತ್ಕಂ ನ ಪುರೋ ಜರಿಮಾ ವಿ ದರ್ದಃ ॥).

ಮರುತ್ತುಗಳೊಡನೆ ಇಂದ್ರನು ಕಪ್ಪು ಬಣ್ಣದವರ ಬೃಹತ್ ಸೇನೆಯನ್ನು (ವಿಶೋ ಅದೇವೀಃ) ಎದುರಿಸಿ ಧ್ವಂಸಮಾಡುತ್ತಾನೆ (೮.೯೬.೧೫). ಹೀಗೆ ಇಂದ್ರನಿಂದ ಘಾಸಿಗೆ ಒಳಗಾಗುವ ದಸ್ಯುಗಳು "ಮುಖವಿಲ್ಲದವರು" (ಅನಾಸಃ).

ಒಟ್ಟಿನಲ್ಲಿ, ಋಗ್ವೇದವು ಸ್ತೋತ್ರಗಳನ್ನು ಮಾತ್ರ ಹೊಂದಿಲ್ಲ; ಅದರಲ್ಲಿ ಸ್ತುತಿ ಮತ್ತು ಕವಿತ್ವಗಳಿರುವಂತೆ ಚರಿತ್ರೆಯ ದಾಖಲೆಗಳೂ ಇವೆ. ಹತ್ತು ರಾಜರ ಯುದ್ಧ (ದಾಶರಾಜ್ಞ ಯುದ್ಧ), ಪಂಚಜನರು (ಪಂಚಜನಾಃ) ಎಂಬ ಬುಡಕಟ್ಟುಗಳ ವಿರುದ್ಧದ ಯುದ್ಧ ಮುಂತಾದ ಚಾರಿತ್ರಿಕ ಘಟನೆಗಳ ಪ್ರಸ್ತಾಪಗಳಿವೆ. ಅನು, ದ್ರುಹ್ಯು, ಯದು, ತುರ್ವಶ ಮತ್ತು ಪೂರು ಎಂಬುವೇ ಐದು ಬುಡಕಟ್ಟುಗಳು. ಇಂತಹ ಅನೇಕ ವಿವರಗಳನ್ನು ಋಗ್ವೇದದಿಂದ ಹೆಕ್ಕಿ ತೆಗೆಯಬಹುದು, ಆದರೆ ಅದನ್ನಿಲ್ಲಿ ಮಾಡಹೋಗುವುದಿಲ್ಲ. ಬದಲಾಗಿ, ಆರ್ಯರ ಪಂಗಡವು ಆರ್ಯೇತರ ಪಂಗಡವಾದ ಪಣಿಗಳ ವಿರುದ್ಧ ಎಷ್ಟು ವೈರ ಸಾಧಿಸಿತೆಂಬುದನ್ನು ಮಾತ್ರ ಇಲ್ಲಿ ಸಂಕ್ಷಿಪ್ತವಾಗಿ ಪರಿಚಯಿಸಲಾಗುತ್ತದೆ. ಯಥಾಪ್ರಕಾರ ಪಣಿಗಳು ಅಯಾಜ್ಞಿಕರು (ಯಜ್ಞ ಮಾಡದಿರುವವರು) ಮತ್ತು ದಾನ–ದಕ್ಷಿಣೆ ಕೊಡದವರು; ಅವರು ಇಂದ್ರನಿಗೆ ಪರಮ ಶತ್ರುಗಳು. ಅವರ ಸರ್ವಸ್ವವನ್ನೂ ಇಂದ್ರನು ಲೂಟಿಮಾಡಿಬಿಡುತ್ತಾನೆ (೫.೩೪.೭ : ಸಂ ಈಂ ಪಣೇಃ ಭೋಜನಂ ಮುಷೇ). ಅಗ್ನಿಯ ಸಹಾಯದಿಂದ ಶತ್ರುವನ್ನು ಕೊಂದು ಪಣಿಗಳ ಅನ್ನ ಮತ್ತು ಧನವನ್ನು ಕೊಂಡೊಯ್ಯಲಾಗುತ್ತದೆ (೬.೧೩.೩ : ಸ ಸತ್ಪತಿಃ ಶವಸಾ ಹಂತಿ ವೃತ್ರಂ ಅಗ್ನೇ ವಿಪ್ರೋ ವಿ ಪಣೇಃ ಭರ್ತಿ ವಾಜಂ). ಮುಖ್ಯವಾಗಿ ಗಮನಿಸಬೇಕಾದ ಅಂಶವೆಂದರೆ ಪಣಿಗಳು ಆರ್ಯೇತರರು, ಸ್ಥಿತಿವಂತರು. ಬಹುಶಃ ಅವರು ವರ್ತಕರಿರಬೇಕೆಂದು ಸಾಯಣ ಅಭಿಪ್ರಾಯಪಡುತ್ತಾನೆ.

ಋಗ್ವೇದದ ವಿವಿಧ ಭಾಗಗಳಲ್ಲಿ ಪಣಿಗಳನ್ನು ಕುರಿತ ಮಾತುಗಳನ್ನು ಸ್ಥೂಲವಾಗಿ ಗಮನಿಸುವ ಮುನ್ನ ಪಣಿಗಳು ಮತ್ತು ಸರಮಾ ನಡುವಣ ಒಂದು ಸಂವಾದವನ್ನು ಪರಿಚಯಿಸಿಕೊಳ್ಳೋಣ. ಇಡೀ ಸೂಕ್ತವು (೧೦.೧೦೮) ಒಂದು ಅರ್ಥಾಂತರರೋಕ್ತಿ ಅಥವಾ ರೂಪಕ ಮಾದರಿಯ ಸಂವಹನ ಎನ್ನಬಹುದು. ಸಾಮಾನ್ಯವಾಗಿ ಇಂದ್ರನ ಸನಿಹದಲ್ಲಿದ್ದು ಅವನಿಗೆ ಸದಾ ಸಹಕಾರ ನೀಡುವ ಸರಮಾ ಒಂದು ದೇವಶುನಿ, ಅಂದರೆ ದೇವತೆಗಳ ನಾಯಿ. ಅದರ ಎರಡು ಕುನ್ನಿಗಳು ಸಾರಮೇಯಗಳು, ಯಮದೇವತೆಯ ಆಣತಿಯಲ್ಲಿರುವಂಥವು. ಪಣಿಗಳು ಕದ್ದುಕೊಂಡುಹೋದ ಗೋವುಗಳನ್ನು ಕಂಡುಹಿಡಿಯುವುದು ಸರಮಾ. ಕತ್ತಲೆಯ ಪ್ರತಿನಿಧಿಗಳಾದ ಪಣಿಗಳನ್ನು ಅರಸುವುದೆಂದರೆ ಉಷಸ್ಸನ್ನು ಅರಸಿತರುವುದೆಂದು ಕೆಲವರು ಇದನ್ನು ಅರ್ಥೈಸಿದ್ದಾರೆ. ಅದು ಅರಸಿತರುವುದು ಸೂರ್ಯಕಿರಣಗಳನ್ನು ಎಂದರ್ಥ. ಪಣಿಗಳು ಗವಿಯಲ್ಲಿ ಬಚ್ಚಿಟ್ಟಿರುವ ಗೋವುಗಳನ್ನು ಕಂಡುಹಿಡಿದ ನಂತರ ಇಂದ್ರನು ಪಣಿಗಳನ್ನು ಜಯಿಸಿ ಗೋವುಗಳನ್ನು ತನ್ನ ಸ್ತೋತೃಗಳಿಗೆ ನೀಡುತ್ತಾನೆ. ಅಂಗಿರಸರು ಮತ್ತು ಅವರೊಡನೆ ಸಂಬಂಧವಿರುವ ನವಗ್ವರು ಸಹ ಪಣಿಗಳ ಗೋವುಗಳ ತಾಣವನ್ನು ಅರಸುವುದರಲ್ಲಿ ಸಫಲರು. ಒಟ್ಟಿನಲ್ಲಿ, ಗೋವುಗಳು ಪಣಿಗಳ ಸಂಪತ್ತು. ಪಣಿಗಳು ತೋಳಗಳಿದ್ದಂತೆ, ಎಷ್ಟು ದೊರಕಿದರೂ ಅವರಿಗೆ ಸಾಲದು; ಸೋಮನು ಅವರನ್ನು ದಮನಿಸಬೇಕು (೬.೫೧.೧೪ : ...ಜಹಿ ನಿ ಅತ್ರಿಣಂ ಪಣಿಂ ವೃಕಃ ಹಿ ಸಃ ॥).

ಪಣಿಗಳು ಕೇಳುತ್ತಾರೆ : "ಏನಮ್ಮಾ ಸರಮಾ, ಇಷ್ಟು ದೂರ ರಸಾ (ನದಿ)ವರೆಗೆ ಬಂದುಬಿಟ್ಟಿದ್ದೀಯಲ್ಲ, ಯಾವ ಕೆಲಸ ನಿನ್ನನ್ನು ಇಲ್ಲಿಗೆ ಕರೆತಂದಿತು ? ಈ ಹಾದಿಯೋ ಬಹುದೂರದವರೆಗೆ ಹೋಗುತ್ತದೆ. ಏನು ವಿಶೇಷ ? (೧೦.೧೦೮.೧ : ಕಿಮಿಚ್ಛಂತೀ ಸರಮಾ ಪ್ರ ಇದಂ ಆನಟ್ ದೂರೇ ಹಿ ಅಧ್ವಾ ಜಗುರಿಃ ಪರಾಚೈಃ। ಕಾ ಅಸ್ಮೇಹಿತಿಃ ಕಾ ಪರಿತಕ್ಮ್ಯಾ ಆಸೀತ್ ಕಥಂ ರಸಾಯಾ ಅತರಃ ಪಯಾಂಸಿ ॥). ಸರಮಾ ಹೇಳುತ್ತಾಳೆ : "ನಾನು ಇಂದ್ರನ ದೂತಿ, ನಿಮ್ಮ ಅಪಾರ ನಿಧಿಯನ್ನು ಅರಸಿ ಬಂದಿರುವೆ, ಎಲೈ ಪಣಿಗಳೆ. ರಸಾದ ನೀರಿನವರೆಗೆ ಬರಲು ನನಗೇನೂ ಭಯವಿಲ್ಲ, ನದಿ ದಾಟಲು ನದಿಯೇ ಸಹಾಯ ಮಾಡುತ್ತದೆ (೨ : ಇಂದ್ರಸ್ಯ ದೂತೀ ಇಷಿತಾ ಚರಾಮಿ ಮಹಃ ಇಚ್ಛಂತೀ ಪಣಯೋ ನಿಧೀನ್ ವಃ। ಅತಿಷ್ಕದೋ ಭಿಯಸಾ ತತ್ ನಃ ಆವತ್ ತಥಾ ರಸಾಯಾಃ ಅತರಂ ಪಯಾಂಸಿ ॥). ಪಣಿಗಳು ಹೇಳುತ್ತಾರೆ : "ಆ ನಿನ್ನ ಇಂದ್ರ ಎಂಥವನು ? ಏನವನ ದೃಷ್ಟಿ ? ಅವನ ದೂತಿಯಾಗಿ ಇಷ್ಟು ಗಾವುದ ಬಂದಿರುವೆಯಲ್ಲ, ಸರಮಾ. ಅವನೇ ಬರಲಿ, ಮಿತ್ರನಂತೆ ಅವನನ್ನು ಬರಮಾಡಿಕೊಳ್ಳುತ್ತೇವೆ. ನಮ್ಮ ಗೋವುಗಳ ಪಾಲಕನಾಗಿ ಅವನೇ ಇರಲಿ." ಅಂದರೆ, ನಮ್ಮ ಗೋವುಗಳನ್ನು ಬಲವಂತದಿಂದ ಸೆಳೆದುಕೊಂಡೊಯ್ಯಬೇಕೇಕೆ ? ನಾವೇನೂ ಅವನ ಶತ್ರುಗಳಲ್ಲವಲ್ಲ ! (೩ : ಕೀದೃಙ್ ಇಂದ್ರಃ ಸರಮೇ ಕಾ ದೃಶೀಕಾ ಯಸ್ಯೇದಂ

ದೂತೀರಸರಃ ಪರಾಕಾತ್ । ಆ ಚ ಗಚ್ಛಾತ್ ಮಿತ್ರಮೇನಾ ದಧಾಮ ಅಥ ಗವಾಂ ಗೋಪತಿಃ ನಃ ಭವಾತಿ ॥). ಸೂರ್ಯಕಿರಣಗಳನ್ನು, ಉಷೋದೇವತೆಯನ್ನು, ಅರಸಿ ಬರುತ್ತಾಳೆ ಸರಮಾ ಎನ್ನುವ ಅರ್ಥವು ಇದಕ್ಕೆ ಹೊಂದುವುದಿಲ್ಲವೆಂಬುದನ್ನು ಗಮನಿಸಬೇಕು. ಇಂದ್ರನಿಗೆ ಬೇಕಾದ್ದು ನಿಜಕ್ಕೂ ಪಣಿಗಳ ಸಂಪತ್ತು. ಮುಂದಿನ ಮಂತ್ರವು ಅದನ್ನೇ ಸೂಚಿಸುತ್ತದೆ. ಸರಮಾ ಹೇಳುತ್ತಾಳೆ : "ಇಂದ್ರನ ಕಾಳಜಿ ನಿಮಗೆ ಬೇಡ, ಪಣಿಗಳೇ; ಹೇಗಿದ್ದರೂ ಅವನು ಕ್ಷೇಮವಾಗಿಯೇ ಇರುತ್ತಾನೆ. ಆದರೆ ನನ್ನನ್ನು ಇಲ್ಲಿಗೆ ಕಳಿಸಿರುವ ಅವನು ನಿಮ್ಮನ್ನು ಶಿಕ್ಷಿಸಬಲ್ಲ, ತಿಳಿಯಿರಿ. ಅವನಿಗೇನೂ ನೀರಿನ ಲಕ್ಷ್ಯವಿಲ್ಲ (ಅಂದರೆ, ನದಿಯು ನಿಮ್ಮನ್ನು ಕಾಪಾಡಲಾರದು, ನೀವೆಲ್ಲಿದ್ದರೂ ನಿಮ್ಮನ್ನು ಹುಡುಕಿ ಬಡಿದುಹಾಕಬಲ್ಲ ನಮ್ಮ ಇಂದ್ರ). ಎಚ್ಚರವಿರಲಿ, ಇಂದ್ರನು ನಿಮ್ಮನ್ನು ತುಳಿದುಹಾಕಿಯಾನು." (೪ : ನಾಹಂ ತಂ ವೇದ ದಭ್ಯಂ ದಭತ್ ಸಃ ಯಸ್ಯ ಇದಂ ದೂತೀಃ ಅಸರಂ ಪರಾಕಾತ್ । ನ ತಂ ಗೂಹಂತಿ ಸ್ರವತೋ ಗಭೀರಾ ಹತಾ ಇಂದ್ರೇಣ ಪಣಯಃ ಶಯಧ್ವೇ ॥). ಇಂದ್ರನ ಸಂದೇಶವನ್ನು ಮುಟ್ಟಿಸಿದ ಸರಮಾಗೆ ಪಣಿಗಳು ಹೇಳುತ್ತಾರೆ : "ಅಮ್ಮಾ ಸರಮಾ, ನೀನು ಅರಸಿ ಬಂದಿರುವುದು ನಮ್ಮ ಗೋವುಗಳನ್ನಲ್ಲವೆ ? ಅದಕ್ಕಾಗಿ ಆ ದೂರದ ಸ್ವರ್ಗದಿಂದ ಬಂದಿದ್ದೀಯಲ್ಲವೆ ? ಆದರೆ, ಸರಮಾ, ಹೋರಾಟ ಮಾಡದೆ ಯಾರು ಈ ಗೋವುಗಳನ್ನು ನಿನಗೆ ಬಿಟ್ಟು ಕೊಡುತ್ತಾರೆ ? ನೀನು ತಿಳಿ, ನಮ್ಮ ಆಯುಧಗಳೂ ಹರಿತವಾಗಿಯೇ ಇವೆ" (೫ : ಇಮಾ ಗಾವಃ ಸರಮೇ ಯಾ ಐಚ್ಛಃ ಪರಿ ದಿವೋ ಅಂತಾನ್ ಸುಭಗೇ ಪತಂತೀ । ಕಃ ತೇ ಏನಾ ಅವ ಸೃಜಾತ್ ಅಯುಧ್ವೀ ಉತ ಅಸ್ಮಾಕಂ ಆಯುಧಾ ಸಂತಿ ತಿಗ್ಮಾ ॥).

ಋಗ್ವೇದದಲ್ಲಿ ಅನೇಕ ಸಂವಾದ ಸೂಕ್ತಗಳಿವೆ. ಉರ್ವಶೀ ಪುರೂರವ ಹಾಗೂ ಯಮ-ಯಮಿಯರ ಸಂವಾದಗಳನ್ನು ಹಿಂದೆಯೇ ಪರಿಚಯಿಸಿಕೊಂಡಿದ್ದೇವೆ. ವಿಶ್ವಾಮಿತ್ರ ಮತ್ತು ನದಿಗಳ ಸಂವಾದವನ್ನು ಮುಂದೆ ನೋಡೋಣ. ಈ ಎಲ್ಲ ಸಂವಾದ ಸೂಕ್ತಗಳೂ ನಾಟಕೀಯವಾಗಿವೆ, ಬಿರುಸಿನ ಮಾತುಗಳಿಂದ ತುಂಬಿವೆ. ಸಂಸ್ಕೃತದ ನಾಟಕ ಸಾಹಿತ್ಯಕ್ಕೆ ಈ ಸಂವಾದ ಸೂಕ್ತಗಳು ಮೊದಲ ಮಾದರಿ ಎನ್ನಲಾಗುತ್ತದೆ.

ಈಗ ಸರದಿ ಸರಮೆಯದು : "ಎಲೈ ಪಣಿಗಳೇ, ನಿಮ್ಮ ನಿಕೃಷ್ಟ ಶರೀರಗಳನ್ನು ಬಾಣಗಳು ಭೇದಿಸಲಾರವು ಎಂದೇ ಭಾವಿಸೋಣ; ಆದರೆ ನೋಡಿ, ನಿಮ್ಮ ಮಾತುಗಳಿಂದ ಏನನ್ನೂ ಭೇದಿಸಲಾಗದು (ಅಂದರೆ, ನಿಮ್ಮ ಮಾತು ನಡೆಯುವುದಿಲ್ಲ. ನಿಮ್ಮ ವ್ಯವಹಾರ ಇಂದ್ರನ ಜೊತೆ ಎಂಬುದು ನೆನಪಿರಲಿ.) ನೀವಿರುವೆಡೆಗೆ ಇಂದ್ರ ಇನ್ನೂ ಬಂದಿಲ್ಲ, ನಿಜ. ಆದರೆ ಇಂದ್ರನಿಗೆ ಸಹಾಯ ನೀಡುವ ಬೃಹಸ್ಪತಿ ನಿಮಗೆ ಗೊತ್ತೋ ? ಅವನೂ ನಿಮ್ಮನ್ನು ಸುಮ್ಮನೆ ಬಿಡುವುದಿಲ್ಲ. ನೀವೆಲ್ಲಿದ್ದರೂ ನಿಮ್ಮ ಗತಿ ಆಗಲೇ ತೀರ್ಮಾನವಾಗಿ ಹೋಗಿದೆ (೬ : ಅಸೇನ್ಯಾ ವಃ ಪಣಯೋ ವಚಾಂಸಿ ಅನಿಷವ್ಯಾಃ ತನ್ವಃ ಸಂತು ಪಾಪೀಃ। ಅಧೃಷ್ಟಃ ವಃ ಏತವೈ ಅಸ್ತು ಪಂಥಾಃ ಬೃಹಸ್ಪತಿಃ ವಃ ಉಭಯಾ ನ ಮೃಳಾತ್ ॥). ಅಂದರೆ ಸೇನಾನಿಯಾಗಿ ವಿಜಯ ಸಾಧಿಸಲು ಇಂದ್ರನಿಗೆ ಒಬ್ಬ ಗೂಢಚಾರನಾಗಿ ಬೃಹಸ್ಪತಿ ಸಹಾಯ ಮಾಡಿ ಪಣಿಗಳಿಗೆ ಮಣ್ಣುಮುಕ್ಕಿಸುತ್ತಾನೆ. ಎಲ್ಲಿ ಅಡಗಿಕೊಂಡರೂ ಅವರು ಸಿಕ್ಕಿಬೀಳುವುದು ಖಂಡಿತ, ಎಂತಹ ಗಟ್ಟಿ ದೇಹಗಳಾದರೂ ಅವು ಘಾಸಿಗೊಳ್ಳುತ್ತವೆ. ಆ ದೃಷ್ಟಿಯಿಂದ ಇಂದ್ರನು ಅಜೇಯ. ಇಂತಹ ಬೆದರಿಕೆಗೆ ಮಣಿಯುವವರು ತಾವಲ್ಲವೆಂದು ಪಣಿಗಳು ಪ್ರತಿಕ್ರಿಯಿಸುತ್ತಾರೆ : "ಸರಮೆ, ಒಂದು ವಿಚಾರ ತಿಳಿ. ನಿಧಿಯನ್ನಿಟ್ಟಿರುವ ನಮ್ಮ ಈ ಜಾಗವಿದೆಯಲ್ಲ ಅದು ಕಲ್ಲಿನಿಂದ ಆವೃತಗೊಂಡಿದೆ. ಇಲ್ಲಿ ನಮ್ಮ ನಿಧಿಯಾದ ಗೋವುಗಳು, ಕುದುರೆಗಳು, ಎಲ್ಲಾ ಇವೆ. ಅವನ್ನು ರಕ್ಷಿಸಲು ಪಣಿಗಳಿದ್ದಾರೆ, ಅದರಲ್ಲಿ ಅವರು ನಿಪುಣರು. ನೀನು ಇಂತಹ ನಮ್ಮ ಜಾಗಕ್ಕೆ ವೃಥಾ ಬಂದಿದ್ದೀಯೆ" (೭ : ಅಯಂ ನಿಧಿಃ ಸರಮೇ ಅದ್ರಿಬುಧ್ನಃ ಗೋಭಿಃ ಅಶ್ವೇಭಿಃ ವಸುಭಿಃ ನಿಋಷ್ಟಃ। ರಕ್ಷಂತಿ ತಂ ಪಣಯಃ ಯೇ ಸುಗೋಪಾ ರೇಕು ಪದಂ ಅಸ್ಮಾಭಿಃ ಅಲಕಂ ಆ ಜಗಂಥ ॥). ಇಂತಹ ಮಾತುಗಳಿಗೆಲ್ಲಾ ಸರಮೆ ಜಗ್ಗುವವಳಲ್ಲ. ಅದು ಹೇಗೆ ನಿಮ್ಮ ನಿಧಿಯನ್ನು ರಕ್ಷಿಸಿಕೊಳ್ಳುತ್ತೀರೋ ನೋಡೋಣ, ಎನ್ನುತ್ತಾಳವಳು. "ಏನು ತಿಳಿದಿದ್ದೀರಿ ನೀವು, ನಿಮ್ಮನ್ನು ಬಡಿದುಹಾಕಲು ಬರುವವರು ಆಯಾಸವನ್ನು ತಿಳಿಯದವರು, ಗೊತ್ತೇ ? ಋಷಿಗಳಾದ ಅಂಗಿರಸರು ಮತ್ತು ನವಗ್ವರು ಬಂದಾಗ ಸೋಮರಸವನ್ನು ಕುಡಿದು ಬಂದಿರುತ್ತಾರೆಂಬುದನ್ನು ಮರೆಯಬೇಡಿ. ನಿಮ್ಮ ನಿಧಿಯನ್ನು ಚಿಟಿಕೆಹೊಡೆಯು ವುದರಲ್ಲೇ ತಮ್ಮತಮ್ಮಲ್ಲಿ ಹಂಚಿಕೊಂಡುಬಿಡುತ್ತಾರೆ. ಆಗ ಗೊತ್ತಾಗುತ್ತದೆ ನಿಮಗೆ ಪಣಿಗಳೆ, ಈಗ ನೀವಾಡಿದ ಮಾತು ಎಷ್ಟು ಪೊಳ್ಳು ಎಂದು." ಅಯ್ಯೋ, ಹಾಗೆ ಗರ್ವದಿಂದ ಮಾತನಾಡಬಾರದಿತ್ತು ಎಂಬುದು ಆಗ ಪಣಿಗಳಿಗೆ ತಿಳಿಯುತ್ತದೆ ಎಂಬುದು ಸರಮೆಯ ಭಾವ. (೮ : ಆ ಇಹ ಗಮನ್ ಋಷಯಃ ಸೋಮಶಿತಾಃ ಅಯಾಸ್ಯಃ ಅಂಗಿರಸಃ ನವಗ್ವಾಃ। ತೇ ಏತಂ ಊರ್ವಂ ವಿ ಭಜಂತ ಗೋನಾಂ ಅಯ ಏತತ್ ವಚಃ ಪಣಯಃ ವಮನ್ ಇತ್ ॥). ಇದರಿಂದ ಪಣಿಗಳಿಗೆ ಸ್ವಲ್ಪ ಎದೆಗುಂದಿರಬೇಕು, ಆದ್ದರಿಂದ ಸರಮಾಳನ್ನು ತಮ್ಮ ಕಡೆಗೆ ಕರೆದುಕೊಂಡುಬಿಡುವುದು ಜಾಣತನವೆಂದು ಅವರಿಗೆ ತೋರುತ್ತದೆ. ಇವರ ತಾವನ್ನು ತಿಳಿಸಲು ಸರಮಾ ಹಿಂದಿರುಗದಿರುವಂತೆ ಮಾಡಿದರಾಯಿತು, ಇವರ ಕ್ಷೇಮಕ್ಕೆ ಧಕ್ಕೆಯಿರುವುದಿಲ್ಲ. ಆದ್ದರಿಂದ ಪಣಿಗಳು 'ದಂಡ'ವನ್ನು ಎದುರಿಸುವ ಕಷ್ಟ ಬರದಿರಲೆಂದು 'ಭೇದ'ದ ಉಪಾಯವನ್ನು ಹೂಡುತ್ತಿದ್ದಾರೆ. (ತ್ಯಾಗರಾಜರ ಪ್ರಕಾರ ಶ್ರೀರಾಮಚಂದ್ರನು "ಸರಸ ಸಾಮ ದಾನ ಭೇದ ದಂಡ" ಚತುರನಾಗಿದ್ದನೆಂಬುದನ್ನು ರಾವಣನು ತಿಳಿಯದೆ ಹೋದ, ಆದ್ದರಿಂದ 'ದಂಡ'ಕ್ಕೆ ಅವನ ತಲೆಯೊಡ್ಡಿಕೊಂಡ. ಪಣಿಗಳು ತಮ್ಮನ್ನು ರಕ್ಷಿಸಿಕೊಳ್ಳಲು ಭೇದೋಪಾಯದ ಮಾರ್ಗ ಹಿಡಿಯುತ್ತಿದ್ದಾರೆ). ಅವರು ಹೇಳುತ್ತಾರೆ : "ಸರಮೆ, ನಿನಗೇಕೆ ಅವರ ಗೊಡವೆ ? ನೀನಿಲ್ಲಿಗೆ ಬಂದಿದ್ದೇ ಅವರು ಬಲವಂತವಾಗಿ ನಿನ್ನನ್ನು ಅಟ್ಟಿದ್ದರಿಂದ; ಇಲ್ಲದಿದ್ದರೆ ಈ ದುರ್ಗಮವಾದ ಜಾಗಕ್ಕೆ ನೀನೇಕೆ ಬರುತ್ತಿದ್ದೆ ! ಹೇಗೂ ಇರಲಿ, ಒಂದು ಕೆಲಸ ಮಾಡು, ಸರಮೆ. ನೀನು ಹಿಂದಕ್ಕೆ ಹೋಗುವುದೇ ಬೇಡ. ಬಾ, ನಿನ್ನನ್ನು ಸೋದರಿಯಂತೆ ಸ್ವೀಕರಿಸುತ್ತೇವೆ. ನಿನಗೆ ಅದೆಷ್ಟು ಗೋವುಗಳು ಬೇಕೋ ಅಷ್ಟನ್ನು ಪಡೆದು ಸುಮ್ಮನೆ ನಮ್ಮೊಂದಿಗಿರು, ಸುಭಗೆ" (೯ : ಏವಾ ಚ ತ್ವಂ ಸರಮೇ ಆಜಗಂಥ ಪ್ರಬಾಧಿತಾ ಸಹಸಾ ದೈವ್ಯೇನ। ಸ್ವಸಾರಂ ತ್ವಾ ಕೃಣವೈ ಮಾ ಪುನಃ ಗಾಃ ಅಪ ತೇ ಗವಾಂ ಸುಭಗೇ ಭಜಾಮ ॥). ನಾಟಕೀಯವಾದ ಇಂತಹ ಒಂದು ಸಂದರ್ಭವನ್ನು ಋಗ್ವೇದದ ಕವಿಯು ಆರ್ಯರ ಮತ್ತು ಪಣಿಗಳ ನಡುವಣ ಸಂಘರ್ಷದ ಹಿನ್ನೆಲೆಯಲ್ಲಿ ಕಲ್ಪಿಸಿಕೊಂಡಿದ್ದಾನೆಂಬುದೇ ಅದ್ಭುತವಾಗಿದೆ. ಆ ಭಾಷೆ, ಆ ಭಾವಗಳು, ಭಾವಗಳ ಬದಲಾವಣೆ, ಸಂದೇಶ ಸಂವಾಹಕಳಾಗಿ ಮತ್ತು ಗೂಢಚಾರಳಾಗಿ ಸರಮೆಯ ಸಂದಿಗ್ಧತೆ, ಪಣಿಗಳ ಬಗೆಗಿನ ಅವಳ ಸಹಾನುಭೂತಿ, ಅವಳ ಯಜಮಾನರನ್ನು ಅವಗಣಿಸಿ ಪಣಿಗಳಿಗೆ ಎಚ್ಚರಿಕೆಯ ಅಗತ್ಯವನ್ನು ತಿಳಿಯಪಡಿಸುವುದು, ಇವೆಲ್ಲಾ ಈ ಋಗ್ವೇದ ಸೂಕ್ತವನ್ನು ಭಾವತುಮುಲಗಳ ಸಂಗಮವನ್ನಾಗಿಸಿದೆ. ಚರಿತ್ರೆ ಮತ್ತು ಕಾವ್ಯ ಈ ಸೂಕ್ತದಲ್ಲಿ ಅಚ್ಚುಕಟ್ಟಾಗಿ ಮೇಳೈಸಿವೆ. ಆರ್ಯೇತರರಾದ ದಸ್ಯುಗಳು ಆರ್ಯರ ಹೊಡೆತಕ್ಕೆ ಸಿಕ್ಕಿಬೀಳುತ್ತಿರುವಾಗ ಆರ್ಯರ ಪ್ರತಿನಿಧಿಯಾದ ಸರಮೆ ಆರ್ಯೇತರರ ಬಗ್ಗೆ ಅನುಕಂಪದ ಬುಗ್ಗೆಯನ್ನು ನಿರ್ಮಿಸಿಬಿಟ್ಟಿದ್ದಾಳೆ. ಈ ಸೂಕ್ತದ ಕವಿಯು ಆರ್ಯರವನೇ, ಆದರೆ ಆರ್ಯೇತರರು ಎದುರಿಸ ಬೇಕಾಗಿರುವ ಪಿಡುಗಿನ ಬಗ್ಗೆ ಅವನಿಗೆ ತಿಳಿವಿದೆ, ಅವರಿಗೆ ಸಾಂತ್ವನ ವ್ಯಕ್ತಪಡಿಸುವ ಮನಸ್ಸಿನವನಾಗಿದ್ದಾನೆ. ಆರ್ಯ- ಆರ್ಯೇತರರ ಸಂಘರ್ಷದಲ್ಲಿ ತನ್ನ ಸ್ಥಾನವೆಲ್ಲಿ ಎಂಬುದರ ಬಗ್ಗೆ ಅವನ ಮನಸ್ಸು ಡೋಲಾಯಮಾನ ವಾಗಿದೆ. ಕಾವ್ಯದ ಆಯಾಮವು ಎಷ್ಟು ವಿಸ್ತೃತ ವಾದುದೆಂದು ಇದರಿಂದ ತಿಳಿಯುತ್ತದೆ : ಆರ್ಯರ ವಿರೋಧಿಗಳಿಗೆ ಎಚ್ಚರಿಕೆಯ ಮಾತು ಹೇಳುವಾಗ ತಾನು ತನ್ನವರಿಗೆ ದ್ರೋಹ ಬಗೆಯುತ್ತಿದ್ದೇನೆಂಬ ಅಳುಕು ಸರಮಾಗೆ ಉಂಟಾಗಿರಬಹುದೆ ? ಪಣಿಗಳ ದುರಂತವನ್ನು ನೀಗಿಸುವ ಇಚ್ಛೆಯು ಆಳವಾಗಿ ಅವಳ ಮನಸ್ಸನ್ನು ಆವರಿಸಿದಾಗ ತಾನು-ತನ್ನವರು-ಇತರರು ಎಂಬ ಭೇದ ಅಳಿದುಹೋಗಿದೆ. ಋಗ್ವೇದದ ಕವಿಯ ಆಂತರ್ಯದ ಭಾವನೆ ಎಷ್ಟು ನವಿರಾಗಿದೆ! ಅದೇ ಕವಿಹೃದಯ. ದುರಂತವೆಂದರೆ ಆ ಹೃದಯ ಎಲ್ಲ



ಕವಿಗಳಿಗೂ ಇಲ್ಲವೆಂಬುದು. ದೀನಳಂತೆ ಸರಮೆ ತನ್ನ ಮಾನಸಿಕ ತುಮುಲವನ್ನು ವ್ಯಕ್ತಪಡಿಸುತ್ತಾಳೆ : "ಅಯ್ಯಾ ಪಣಿಗಳೆ, ನನ್ನನ್ನು ಸೋದರಿಯನ್ನಾಗಿ ಸ್ವೀಕರಿಸುವುದಾಗಿ ಹೇಳಿದಿರಿ, ನಿಮ್ಮ ಹೃದಯ ದೊಡ್ಡದು. ಆದರೆ ನನ್ನ ಸ್ಥಿತಿಯಲ್ಲಿ ಸೋದರಿತ್ವ, ಭ್ರಾತೃತ್ವ, ಯಾವುದಕ್ಕೂ ಸ್ಥಾನ ಇಲ್ಲ. ಅವನ್ನು ನಾನರಿಯೆ. ಬಹುಶಃ ಆ ಘೋರ ಇಂದ್ರ ಮತ್ತು ಅಂಗಿರಸರು ಅವನ್ನು ತಿಳಿದಿದ್ದಾರೇನೋ !" (ಆ 'ಘೋರ' ಎಂಬ ವಿಶೇಷಣವನ್ನು ಸರಮೆ ಬಳಸಿದ್ದಾಳಲ್ಲ, ಅದು ಇಡೀ ಮಂತ್ರದ ಛಾಯೆಯನ್ನು ವ್ಯಂಗ್ಯಾರ್ಥದತ್ತ ನಮ್ಮನ್ನು ಕೊಂಡೊಯ್ಯುತ್ತದೆ. "ಕಾವ್ಯಪ್ರಕಾಶ" ಗ್ರಂಥವನ್ನು ಬಲ್ಲವರು ಒಬ್ಬ ಪ್ರಿಯೆಯು ತನ್ನ ದೂತಿಗೆ ಪ್ರಿಯಕರನನ್ನು ಕುರಿತು 'ಅಧಮ' ಎಂಬ ಪದವನ್ನು ಬಳಸಿದ್ದು ಇಡೀ ಕವನಕ್ಕೆ ವ್ಯಂಗ್ಯಾರ್ಥ ನೀಡುತ್ತದೆಯೆನ್ನುವ ಮಾತನ್ನು ನೆನಪಿಸಿಕೊಂಡಾರು.) "ನನಗೆ ತಿಳಿದಿರುವುದಿಷ್ಟೆ: ನಾನವರನ್ನು ಬೀಳ್ಕೊಟ್ಟು ಹೊರಟಾಗ ನಿಮ್ಮ ನಿಧಿಯನ್ನು ಪಡೆಯಲೇಬೇಕೆಂಬ ಇಚ್ಛೆ ಅವರಲ್ಲಿ ಉಗ್ರವಾಗಿತ್ತು. ಆದ್ದರಿಂದ, ಪಣಿಗಳೇ, ಎಚ್ಚರ; ಎಲ್ಲಾದರೂ ದೂರಕ್ಕೆ ಹೋಗಿಬಿಡಿ." ಇಲ್ಲಿಯ ವ್ಯಂಗ್ಯವನ್ನು ಗಮನಿಸಿ : ಭ್ರಾತೃತ್ವ ಎಂಬುದು ಕನಸಿನ ಗಂಟಾಗಿದೆ. "ಸೋದರಿಯ ಭಾವನೆ ನನಗೆ ತಿಳಿಯದು; ಆ 'ಘೋರ' ಇಂದ್ರ ಮತ್ತು ಅಂಗಿರಸರು ಭ್ರಾತೃತ್ವವನ್ನೇನಾದರೂ ತಿಳಿದಿದ್ದಾರೇನೋ !" ಎನ್ನುವಾಗ ಎಂತಹ ಕಟಕಿಯನ್ನು ಕವಿ ಸೇರಿಸಿಬಿಟ್ಟಿದ್ದಾನೆಂದು ತಿಳಿದರೆ ಕವಿತ್ವದ ಘನತೆ ಮೆಚ್ಚಿಗೆಯಾಗುತ್ತದೆ. ಇದನ್ನೆಲ್ಲಾ ನಗಣ್ಯ ಎನಿಸಿ ಋಗ್ವೇದವನ್ನು ವ್ಯಾಖ್ಯಾನಿಸುವ ಸಂಪ್ರದಾಯಕ್ಕೆ ಏನೆನ್ನೋಣ ! (೧೦ : ನಾಹಂ ವೇದ ಭ್ರಾತೃತ್ವಂ ನೋ ಸ್ವಸೃತ್ವಂ ಇಂದ್ರಃ ವಿದುಃ ಅಂಗಿರಸಶ್ಚ ಘೋರಾಃ। ಗೋಕಾಮಾ ಮೇ ಅಚ್ಛದಯನ್ ಯತ್ ಆಯಂ ಅಪ ಅತಃ ಇತ ಪಣಯಃ ವರೀಯಃ॥). ಕಡೆಗೆ ಸರಮಾ ಭಾರವಾದ ಹೃದಯದಿಂದ ಹೇಳುತ್ತಾಳೆ : "ಆದ್ದರಿಂದ, ಪಣಿಗಳೇ, ನಿಮ್ಮ ಹಿತಕ್ಕಾಗಿ ಹೇಳುತ್ತಿದ್ದೇನೆ, ನೀವು ಎಲ್ಲಾದರೂ ದೂರಕ್ಕೆ ಹೋಗಿಬಿಡಿ, (ನಿಮ್ಮನ್ನು ರಕ್ಷಿಸಿಕೊಳ್ಳಿ); ಗೋವುಗಳು ಕಡಿಮೆ ಶಬ್ದ ಮಾಡಲಿ. ಅದು ಜನರ ಸಾಮುದಾಯಿತ್ವದ ಗುಣವಾದ ಸೌಹಾರ್ದತೆಗೆ ಅನುವು ಮಾಡಿಕೊಡುತ್ತದೆ (ಅಂದರೆ, 'ಋತ'ವನ್ನು ಕಾಯ್ದುಕೊಳ್ಳಬಹುದು; ಪರಸ್ಪರ ಬಡಿದಾಟವನ್ನು ತಪ್ಪಿಸಬಹುದು). ಬೃಹಸ್ಪತಿ, ಸೋಮ, ಅಂಗಿರಸಾದಿ ಋಷಿಗಳು, ಎಲ್ಲರೂ ಸೋಮರಸವನ್ನು ಹರಿಸುತ್ತಾ ಈ ಗೋವುಗಳನ್ನು ಅರಸುತ್ತಿದ್ದಾರೆ. (ಶಬ್ದ ಮಾಡಿ, ಅವೆಲ್ಲಿವೆಯೆಂಬುದರ ಸೂಚನೆಯನ್ನು ಅವು ನೀಡದಿರಲಿ)". (೧೧ : ದೂರಂ ಇತಃ ಪಣಯಃ ವರೀಯಃ ಉತ್ ಗಾವಃ ಯಂತು ಮಿನತೀಃ ಋತೇನ। ಬೃಹಸ್ಪತಿಃ ಯಾಃ ಅವಿಂದತ್ ನಿಗೂಳ್ಹಾಃ ಸೋಮಃ ಗ್ರಾವಾಣಃ ಋಷಯಃ ಚ ವಿಪ್ರಾಃ॥).

ಸರಮಾಗೆ 'ಋತ'ದ ಪ್ರಜ್ಞೆ ಇನ್ನೂ ಗಾಢವಾಗಿಯೇ ಉಳಿದಿದೆ. ಆದರೆ ಪಣಿಗಳ ಸಂಪತ್ತನ್ನು ಸೂರೆಗೊಳ್ಳಬೇಕೆನ್ನುವ ಆರ್ಯಸಮುದಾಯಕ್ಕೆ ಅದು ಗೌಣವಾಗಿದೆ. ಈ ಸೂಕ್ತವು ಋಗ್ವೇದದ ಕಡೆಯ ಕಾಲಮಾನಕ್ಕೆ ಸೇರಿದೆಯೆಂಬುದನ್ನು ಆರಂಭದಲ್ಲೇ ಗಮನಿಸಿದ್ದೇವೆ. ಆದಾಗ್ಯೂ ಒಂದೆರಡು ಪ್ರಶ್ನೆಗಳು ಸಹಜವಾಗಿಯೇ ನಮ್ಮ ಮುಂದೆ ಬರುತ್ತವೆ. ಋಗ್ವೇದದ ಸಂಕಲನದಲ್ಲಿ ಕಡೆಯ ಸೂಕ್ತವು (೧೦.೧೯೧) ಇಡೀ ಋಗ್ವೇದದ 'ಭರತವಾಕ್ಯ'ದಂತಿದೆ. ಸಮಾನತೆ, ಸೌಹಾರ್ದತೆ, ಸಮಾನ ಮನಸ್ಕತೆ, ಸಮಾನ ಸಂಘಟನೆ, ಸಮಾನ ಹೃದಯ, ಸಮಾನ ಮನಸ್ಸು, ಹೀಗೆ ಎಲ್ಲವೂ ಸಮಾನತೆಯ ಆಶಯಗಳೇ ಇಲ್ಲಿ ವ್ಯಕ್ತವಾಗಿವೆ. ಅಂತಹ ಮಹದಾಶಯವನ್ನುಳ್ಳ ಆರ್ಯರು ಪಣಿಗಳನ್ನೇಕೆ ವೈರಿಗಳನ್ನಾಗಿ ನೋಡುತ್ತಾರೆ, ಅವರ ನಿಧಿಗಾಗಿ ಅವರನ್ನು ಕೊಲ್ಲಲು ಸಹ ಏಕೆ ಮುಂದಾಗುತ್ತಾರೆ ? ಇದಕ್ಕೆ ಎರಡು ಉತ್ತರಗಳನ್ನು ಸೂಚಿಸಬಹುದು : (ಅ) ಆರ್ಯ ಮತ್ತು ಆರ್ಯೇತರರ ನಡುವಣ ಘರ್ಷಣೆಯು ನಾಗರಿಕತೆಯ ಎರಡು ಬೇರೆ ಬೇರೆ ಹಂತಗಳ ನಡುವಣ ಘರ್ಷಣೆ. ಪಶು ಸಂಗೋಪನೆಯಿಂದ ಕೃಷಿಯತ್ತ ಹೆಜ್ಜೆ ಹಾಕುತ್ತಿರುವವರು ಆರ್ಯರು. ಪಣಿಗಳು ಕೃಷಿಯಲ್ಲಿ ಪಳಗಿದ ಹಂತದವರು, ಸಾಕಷ್ಟು ಸಂಪತ್ತಿರುವವರು. ಚಿನ್ನದ ಆಭರಣಗಳು ಸಹ ಅವರಿಗೆ ಪರಿಚಿತವಾಗಿವೆ. ಆರ್ಯರಿಂದ ಅವರು ಪಡೆದಿರಬಹುದಾದ್ದು ಬಹುಶಃ ಕುದುರೆಗಳು ಮಾತ್ರ. ಅವರ ನಿಧಿಯ ಆಕರ್ಷಣೆಯು ಆರ್ಯರನ್ನು ಹಿಂಸೆಗೆ ಪ್ರಚೋದಿಸುತ್ತದೆ. (ಆ) ಆರ್ಯರ ಬುಡಕಟ್ಟು ಮತ್ತು ಪಣಿಗಳ ಬುಡಕಟ್ಟು ಬೇರೆ ಬೇರೆ. ಆ ಎರಡು ಬುಡಕಟ್ಟುಗಳು ನಾಗರಿಕತೆಯ ವಿಷಯದಲ್ಲಿ ಬೇರೆ ಬೇರೆ ಹಂತಗಳಿಗೆ ಸೇರಿದ್ದರೂ ಇಬ್ಬರದೂ ಬುಡಕಟ್ಟುಗಳೇ. ಬುಡಕಟ್ಟುಗಳಿನ್ನೂ ಸಂಪೂರ್ಣವಾಗಿ ವ್ಯತ್ಯಸ್ತಗೊಂಡಿಲ್ಲ. ಬುಡಕಟ್ಟುಗಳ ನೀತಿಯೇನು ? ಋಗ್ವೇದದ ಆರ್ಯರ ನೀತಿಯು 'ಋತ'ದ ಪರಿಕಲ್ಪನೆಯಲ್ಲಿದೆ, ನಿಜ; ಆದರೆ ಅದು ಅವರ ಆಂತರಿಕ ನಡತೆಗೆ ಸೀಮಿತವಾದ ವಿಷಯ. ಬುಡಕಟ್ಟುಗಳು ಆಂತರಿಕವಾಗಿ ಒಂದು ಸಮಾನ, ಸಂಘಟಿತ ಸಮುದಾಯಗಳು; ಆದರೆ ಬೇರೆ ಬುಡಕಟ್ಟುಗಳ ಬಗ್ಗೆ ಅವೇ ಭಾವನೆಗಳು ಇರಬೇಕೆಂದಿಲ್ಲ. ಹಲ್ಲೆ, ಆಕ್ರಮಣ, ಎಲ್ಲವೂ ಅಲ್ಲಿ ಸಮರ್ಥನೀಯ. ಅದು ಅನೀತಿ ಎನಿಸುವುದಿಲ್ಲ. ಆದ್ದರಿಂದ ಪಣಿಗಳ ವಿರುದ್ಧದ ಕುತ್ಸಿತ ಭಾವನೆಗಳು ಆರ್ಯರಿಗೆ ಮುಜುಗರ ತರುವುದಿಲ್ಲ. ಸರಮಾ ಮಾತ್ರ ಇಂತಹ ಅಂತರವನ್ನು ಒಪ್ಪಲು ತಯಾರಿಲ್ಲ. ಅವಳಿಗೆ ಆರ್ಯರು–ಆರ್ಯೇತರರು ಎಂಬ ಭೇದ ಗಣನೀಯವಾದ ಪ್ರಮಾಣದಲ್ಲಿಲ್ಲ; ಅವಳೇನಿದ್ದರೂ ಸಂದೇಶವಾಹಕಳು, ಅಷ್ಟೆ.

ಸಮಕಾಲೀನ ಸಂದರ್ಭದಲ್ಲಿ ನೈತಿಕತೆಯು ಪ್ರಕಟವಾಗುವ ಮಾದರಿಯೊಡನೆ ಇದನ್ನು ಹೋಲಿಸಿ ನೋಡಬಹುದು. ಸ್ವಾತಂತ್ರ್ಯ, ಮಾನವ ಹಕ್ಕು, ಮುಂತಾದುವು ಪ್ರಸಿದ್ಧವಾಗಿವೆ. ಅದು ಎಲ್ಲರಿಗೂ ದಕ್ಕಬೇಕಾದ್ದೆಂದು ಹೇಳುವುದರಲ್ಲಿ ಯಾರೂ ಹಿಂದೆ ಬೀಳುವುದಿಲ್ಲ. ಆದರೆ ಆಚರಣೆಯ ಪ್ರಶ್ನೆ ಬಂದಾಗ ಆ ಆಶಯಗಳು ಕೆಲವರ ಬಗೆಗೆ ಅಷ್ಟೇನೂ ಮಹತ್ವವನ್ನು ಉಳಿಸಿಕೊಳ್ಳುವುದಿಲ್ಲ. ಮಾನವ ಹಕ್ಕುಗಳನ್ನು ಎತ್ತಿ ಹಿಡಿಯುತ್ತೇವೆಂದು ಹೇಳಿಕೊಳ್ಳುತ್ತಲೇ ಬೇರೆಯವರ ಹಕ್ಕುಗಳನ್ನು ದಮನಿಸಬಹುದು. ಅದು ಅಸಂಗತವೆಂಬ ಅಳುಕು ಬರುವುದೇ ಇಲ್ಲ. ಇನ್ನೂ ಮುಂದೆ ಹೋಗಿ, ಮಾನವ ಹಕ್ಕುಗಳ ರಕ್ಷಣೆಗಾಗಿಯೇ ಬೇರೆ ದೇಶಗಳ ಮೇಲೆ ಆಕ್ರಮಣ ನಡೆಸಿ ಲಕ್ಷಗಟ್ಟಲೆ ಜನರನ್ನು ಕೊಲ್ಲಬಹುದು ಕೂಡ ! ಈಚಿನ ದಶಕಗಳಲ್ಲಿ ಇದು ನಡೆದಿದೆ, ಅವನ್ನೆಲ್ಲಾ ಇಲ್ಲಿ ಹೆಸರಿಸುವ ಅಗತ್ಯವಿಲ್ಲ. ಅಥವಾ ಇಪ್ಪತ್ತನೆಯ ಶತಮಾನದ ಮೊದಲ ಮೂರು ದಶಕಗಳ ಚರಿತ್ರೆಯನ್ನು ನೋಡಿ. ಬರ್ಟ್ರಂಡ್ ರಸೆಲ್ ನಂತಹ ತತ್ತ್ವಜ್ಞಾನಿ ಸಹ ಸ್ವಾತಂತ್ರ್ಯವನ್ನು "ಕೆಲವರ" ಸ್ವಾತಂತ್ರ್ಯವೆಂದು ನೋಡಿದ ವಿಪರ್ಯಾಸ ಕಣ್ಣಿಗೆ ರಾಚುವಷ್ಟಿದೆ. ೧೯೧೭ರ ಅಕ್ಟೋಬರ್ ಕ್ರಾಂತಿಯ ಮೂರು ವರ್ಷದ ತರುವಾಯದಲ್ಲಿ ಅವನು ರಷ್ಯಾಕ್ಕೆ ಹೋದ, ಲೆನಿನ್ನನ ಆಡಳಿತ ಗಮನಿಸಿದ, ಅಲ್ಲಿಯ ಜನರಿಗೆ ಸ್ವಾತಂತ್ರ್ಯ ಕಡಿದುಹೋಗಿದೆಯೆಂದು ಬಹು ತೀವ್ರವಾಗಿ ಟೀಕಿಸಿದ. ೧೯೧೭ಕ್ಕೆ ಮುಂಚೆ ಅಲ್ಲಿಯ ಜನರಿಗೆ ಸ್ವಾತಂತ್ರ್ಯ ಎಷ್ಟಿತ್ತೆಂಬುದು ರಸೆಲ್‌ಗೆ ತಿಳಿದಿರಲಿಲ್ಲವೆ ? ತನ್ನ ದೇಶದ ವಸಾಹತು ರಾಷ್ಟ್ರಗಳಲ್ಲಿ ಸ್ವಾತಂತ್ರ್ಯ ಯಾರಿಗೆ ಎಷ್ಟು ಪ್ರಮಾಣದಲ್ಲಿತ್ತು ಎಂಬುದು ಅವನಿಗೆ ತಿಳಿದಿತ್ತು. ಭಾರತದ ಬಗ್ಗೆ ಆತನಿಗೆ ಸದ್ಭಾವನೆ ಇತ್ತು, ಆದರೆ ಲೆನಿನ್‌ನ ದೇಶದಲ್ಲಿ ಜನರಿಗೆ ಸ್ವಾತಂತ್ರ್ಯ ಹೋಯಿತೆಂದು ಪರಿತಪಿಸುವ ರಸೆಲ್ ಭಾರತದಲ್ಲಿ ಸ್ವಾತಂತ್ರ್ಯ ಗತಿಸಿತ್ತೆಂದು ಪರಿತಪಿಸಿದ್ದು ಕಡಿಮೆ. ಅಂದರೆ, ಅವನ ಸ್ವಂತದ "ಬುಡಕಟ್ಟಿನ" ದುರ್ನಡತೆ ಗೌಣವಾಗಿಹೋಯಿತು.

ಆರ್ಯ ಮತ್ತು ಆರ್ಯೇತರರ ನಡುವಣ ಸಂಘರ್ಷಕ್ಕೆ ಹಲವು ಆಯಾಮಗಳಿವೆ ಮತ್ತು ಸಂಘರ್ಷದ ಪರಿಣಾಮ ಘಾತುಕವಾಗಿದೆ. ವರ್ಣ ವಿಭಜನೆ, ಮೇಲು–ಕೀಳು ಎಂಬ ಭಾವನೆ, ಅಸ್ಪೃಶ್ಯತೆ, ಅಸಮಾನ ಸಾಮಾಜಿಕ ಸ್ಥಾನಗಳು, ಎಲ್ಲವೂ ಆರ್ಯರು ದಸ್ಯುಗಳನ್ನು ನಡೆಸಿಕೊಂಡ ರೀತಿಯ ಉತ್ಪನ್ನಗಳು. ಒಂದು ನಿಟ್ಟಿನಲ್ಲಿ ಅತಿ ಶ್ರೇಷ್ಠವಾದ 'ಋತ'ದ ಬಗ್ಗೆ ಅಷ್ಟೊಂದು ನಿಷ್ಠೆಯುಳ್ಳವರು ಇನ್ನೊಂದು ನಿಟ್ಟಿನಲ್ಲಿ ಪಣಿಗಳೂ ಸೇರಿದಂತೆ ಇತರ ಬುಡಕಟ್ಟುಗಳನ್ನು ಹಿಂಸಿಸಲು ಮತ್ತು ಅವುಗಳ ನಿಧಿಯನ್ನು ಅಪಹರಿಸುವುದಕ್ಕಾಗಿ ಅವರನ್ನು ಕೊಲ್ಲಲು ಅಂಜುವುದಿಲ್ಲ. ಅವರ ದೇವತೆಗಳು ಅದಕ್ಕೆ ಸಹಾಯಹಸ್ತ ನೀಡುತ್ತಾರೆ ಕೂಡ. ಮಾನವ ಚರಿತ್ರೆಯ ಮಜಲುಗಳ ನೋಟ ಇದರಲ್ಲಿ ಸ್ಪಷ್ಟವಾಗಿ ಪ್ರತಿಫಲಿತವಾಗಿದೆ. ಸಾಹಿತ್ಯದಲ್ಲಿ ಇದೆಲ್ಲಾ ಕಾಣಬರುವುದು ಸರ್ವೇಸಾಮಾನ್ಯ. ಋಗ್ವೇದವು ಅದಕ್ಕೆ ಅಪವಾದವಲ್ಲ.

**ಜಿ. ರಾಮಕೃಷ್ಣ**
೨–ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್
೨೨/೧, ೪ನೇ ಕ್ರಾಸ್, ಕಾವೇರಿನಗರ
ಬನಶಂಕರಿ ೩ನೇ ಹಂತ, ಬೆಂಗಳೂರು – ೫೬೦ ೦೮೫

## ಕ್ರೌರ್ಯ

ಹಸಿರು ಗಿಡದ ಮೇಲೆ
ಸ್ವಚ್ಛಂದ ನಗುವ ಹೂವಿನ
ನಗುವನು ಚಿವುಟಿ
ಆತ್ಮನ ಕಿತ್ತು
ನರಳಿಸುವ ಈ ಪೂಜೆ
ಅಲಂಕರಣ
ಯಾವ ದೇವರಿಗೆ ಪ್ರೀತಿ ?

**ವೈ. ಕೆ. ಸಂಧ್ಯಾ ಶರ್ಮ**, ಬೆಂಗಳೂರು



**ಪಿ. ಸಾಯಿನಾಥ್**

ನಿರೂಪಣೆ : **ಡಿ. ಎ. ವಿಜಯ ಭಾಸ್ಕರ**

# ಗ್ರಾಮೀಣ ಭಾರತ ಕುರಿತ ವರದಿ

*(ಕಳೆದ ಸಂಚಿಕೆಯಿಂದ ಮುಂದುವರಿದುದು)*

ಇನ್ನು ಕೆಲವು ತಿಂಗಳುಗಳಲ್ಲಿ ನಾನು ಮತ್ತು ನನ್ನ ಸ್ನೇಹಿತರು ಕೆಲವರು ಒಂದು ಜಾಲತಾಣವನ್ನು ಆರಂಭಿಸಲಿದ್ದೇವೆ. ಅದರ ಹೆಸರು 'ಗ್ರಾಮೀಣ ಭಾರತದ ಜನತೆಯ ಸಂಗ್ರಹಾಲಯ (ಪೀಪಲ್ಸ್ ಆರ್ಕೈವ್ಸ್ ಆಫ್ ರೂರಲ್ ಇಂಡಿಯ)'. ಅದರಲ್ಲಿ ಸಾರ್ವಜನಿಕರಿಗೆ ಉಚಿತವಾಗಿ ಪ್ರವೇಶಾವಕಾಶವಿದೆ. ಅದರಲ್ಲಿ ಗ್ರಾಮೀಣ ಭಾರತದ ಜನರೇ ಗ್ರಾಮೀಣ ಬದುಕಿನ ಕಥಾನಕಗಳನ್ನು ಹೇಳುತ್ತಾರೆ. ನೀವು ಕೆಂಪು ಜೇಡಿಮಣ್ಣಿನ ಕುದುರೆಗಳನ್ನು ನೋಡಿರಬಹುದು. ಪಶ್ಚಿಮ ಬಂಗಾಳದ ಒಬ್ಬ ಕುಂಬಾರ ಅದರ ಬಗ್ಗೆ ಹೇಳುತ್ತಾನೆ. ಅವನು ಕುಂಬಾರಿಕೆ ವೃತ್ತಿಯಲ್ಲಿ ಐದನೆಯ ತಲೆಮಾರಿನ ಕೆಲಸಗಾರ. ನಮ್ಮ ವಿಡಿಯೋದಲ್ಲಿ ಇಡೀ ಡಾಕ್ಯುಮೆಂಟರಿಯನ್ನು ಅವನೇ ನಿಯಂತ್ರಿಸಿ ನಡೆಸಿಕೊಡುತ್ತಾನೆ. ತಾನು ಹೇಗೆ ಬದುಕು ಸಾಗಿಸುತ್ತೇನೆ, ಎಷ್ಟು ಸಂಪಾದಿಸುತ್ತೇನೆ ಇತ್ಯಾದಿ ವಿವರಗಳನ್ನು ಸ್ವತಃ ನೀಡುತ್ತಾನೆ. ಡಾಕ್ಯುಮೆಂಟರಿಯ ಇಡೀ ಶ್ರೇಯಸ್ಸು ಆತನಿಗೆ ಸಲ್ಲುತ್ತದೆ. ನಮ್ಮ ಈ ಎಲ್ಲಾ ಚಟುವಟಿಕೆಗಳಿಗೆ ಸರ್ಕಾರದ ಅಥವಾ ಕಾರ್ಪೊರೇಟ್ ವಲಯದ ನೆರವು ಪಡೆಯುತ್ತಿಲ್ಲ. ನನ್ನೊಂದಿಗೆ ಈ ಕಾರ್ಯದಲ್ಲಿ ೧೪ ಮಂದಿ ವೃತ್ತಿಪರ ಪೂರ್ಣಾವಧಿ ಪತ್ರಕರ್ತರು, ನನ್ನ ವಿದ್ಯಾರ್ಥಿಗಳಾಗಿದ್ದ ೧೪೦ ಮಂದಿ ಅರೆಕಾಲಿಕ ಪತ್ರಕರ್ತರ ಬೆಂಬಲದ ಗುಂಪು ಮಾತ್ರವಲ್ಲದೆ ನಮ್ಮ ಕಾರ್ಯದ ಪರಿಕಲ್ಪನೆಯನ್ನು ಮೆಚ್ಚಿಕೊಂಡು ಉಚಿತ ತಾಂತ್ರಿಕ ನೆರವು, ಕಾನೂನು ನೆರವು ನೀಡುವ ತಜ್ಞರ ತಂಡವೇ ಚೆನ್ನೈನಲ್ಲಿ ಕೆಲಸ ಮಾಡುತ್ತಿದೆ. ೨೭ ವರ್ಷಗಳಿಂದ ಏಷಿಯನ್ ಕಾಲೇಜ್ ಆಫ್ ಜರ್ನಲಿಸಂ ಮತ್ತಿತರ ಸಂಸ್ಥೆಗಳಲ್ಲಿ ನಾನು ಪತ್ರಿಕೋದ್ಯಮದ ಬೋಧಕನಾಗಿ ಕೆಲಸ ಮಾಡುತ್ತಿದ್ದು, ಸದ್ಯಕ್ಕೆ ಪ್ರಶಸ್ತಿ ಪುರಸ್ಕಾರಗಳಿಂದ ಲಭ್ಯವಾದ ಮತ್ತು ಸಂಪೂರ್ಣವಾಗಿ ನನ್ನದೇ ಸಂಪನ್ಮೂಲಗಳಿಂದ ಹಣಕಾಸು ಒದಗಿಸುತ್ತಿದ್ದೇವೆ. ಈ ಹಂತದಲ್ಲಿ ನಾವು ಸಾರ್ವಜನಿಕರ ನೆರವನ್ನು ಯಾಚಿಸುವುದು ಬೇಡ ಎಂದು ತೀರ್ಮಾನಿಸಿದ್ದೇವೆ. ಮುಂದೆ ನಾವು ಇವೆಲ್ಲವನ್ನು ಸಾರ್ವಜನಿಕರಿಗೆ ತೆರೆದು ತೋರಿಸುವ ಸಂದರ್ಭದಲ್ಲಿ ನೆರವು ಬೇಕಾಗಬಹುದು. ನಮ್ಮ ಸಂಸ್ಥೆಯು ಪ್ರಮುಖವಾಗಿ ಭಾಷೆಯ ವಿಷಯಕ್ಕೆ ಗಮನ ನೀಡಿದ್ದು, ನಾವು ಹೊರತರುವ ಡಾಕ್ಯುಮೆಂಟರಿಗಳು ಆಂಗ್ಲಭಾಷೆಯ ಟೈಟಲ್‌ಅನ್ನು ಹೊಂದಿದ್ದು ಪ್ರತ್ಯೇಕ ಟೆಕ್ಸ್ಟ್ ಫೈಲಿನಲ್ಲಿ ಯಾರು ಬೇಕಾದರೂ ತಮ್ಮ ಭಾಷೆಯ ಉಪಶೀರ್ಷಿಕೆಗಳನ್ನು (ಸಬ್ ಟೈಟಲ್) ಅಳವಡಿಸಲು ಶಕ್ಯ ಉದಾಹರಣೆ, ಇದರಿಂದ ಬೆಂಗಾಲಿ ಚಿತ್ರವನ್ನು ತುಳು ಉಪಶೀರ್ಷಿಕೆಗಳ ಜೊತೆ ವೀಕ್ಷಿಸಲು ಸಾಧ್ಯವಿದೆ. ನಾವು ಪ್ರತಿ ಭಾಷೆಯ ಭಾಷಾಂತರಕಾರರನ್ನು ಹುಡುಕುತ್ತಿದ್ದೇವೆ. ಈಗಾಗಲೇ ನಮಗೆ ನಾಲ್ಕೈದು ಭಾಷೆಗಳ ಭಾಷಾಂತರಕಾರರು ಸಿಕ್ಕಿದ್ದಾರೆ, ಇನ್ನೂ ಕೆಲವು ಭಾಷೆಗಳವರು ಸಿಗುತ್ತಾರೆಂಬ ಭರವಸೆ ಇದೆ. ನಮ್ಮ ಸಂಸ್ಥೆಯ ಇನ್ನೊಂದು ಪ್ರಮುಖ ದೃಷ್ಟಿಕೇಂದ್ರ ಶ್ರಮಶಕ್ತಿ. ಸಮಾಜಕ್ಕೆ ಪ್ರತಿನಿತ್ಯ, ಪ್ರತಿ ವ್ಯಕ್ತಿಯ ಶ್ರಮವನ್ನು, ಅವರ ಕೊಡುಗೆಯನ್ನು ಗುರುತಿಸದಿದ್ದರೆ, ಹೆಚ್ಚಿನ ಉತ್ತಮ ಕೂಲಿಗಾಗಿ ಅವರು ಬೇಡಿಕೆಗಳನ್ನು ಇಟ್ಟಾಗ ಅದನ್ನು ಗೌರವಿಸದಿದ್ದರೆ ಅವರನ್ನು ನಾವು ನಾಗರಿಕರೆಂದು ಪರಿಗಣಿಸಿಲ್ಲವೆಂದೇ ಅರ್ಥ. ನಮ್ಮ ಸಂಸ್ಥೆಯು ಶ್ರಮ, ಭಾಷೆಗಳ ನಂತರ ಕೇಂದ್ರೀಕರಿಸುವ ಇತರ ವಿಷಯಗಳೆಂದರೆ, ಜಾನಪದ, ಸಂಗೀತ, ಕಲೆ, ಇತ್ಯಾದಿ.

ಇಂದಿನ ಪೀಳಿಗೆಯ ವಿಷಯದಲ್ಲಿ ಹೇಳುವುದಾದರೆ, ನಮ್ಮ ಕಾಲದ ವಾತಾವರಣಕ್ಕೆ ತೀರಾ ಭಿನ್ನವಾದ ವಾತಾವರಣದಲ್ಲಿ, ಸಾಮಾಜೀಕರಣದ ಪ್ರಕ್ರಿಯೆಯಲ್ಲಿ ಇಂದಿನ ಪೀಳಿಗೆ ಬೆಳೆಯುತ್ತಿದೆ. ನಾವು ಬದಲಾಗಿದ್ದೇವೆ, ನಮ್ಮ ಅಭಿಲಾಷೆ, ಆಕಾಂಕ್ಷೆಗಳು ಬದಲಾಗಿವೆ. ಇಂದಿನ ಸಂದರ್ಭದಲ್ಲಿ ಹಿಂದೆ ಇದ್ದಂತೆ ಸ್ವಾತಂತ್ರ್ಯ ಹೋರಾಟಗಾರರನ್ನು ಆದರ್ಶಗಳಾಗಿಸಿಕೊಳ್ಳುವ ಪರಿಸ್ಥಿತಿ ಇಲ್ಲ. ಇಂದು



ಮಾಧ್ಯಮಗಳು ಯುವಪೀಳಿಗೆಯ ಮುಂದೆ ಹೊಸ ಹೊಸ ಅನುಕರಣೀಯ ಮಾದರಿ (ರೋಲ್ ಮಾಡೆಲ್)ಗಳನ್ನು ಪ್ರಸ್ತುತಪಡಿಸುತ್ತಿವೆ. ೧೯೯೩–೯೪ರಲ್ಲಿ ಟಿ.ವಿ. ಚಾನಲ್‌ಗಳಲ್ಲಿ ಬಿಸಿ ಬಿಸಿ ಚರ್ಚೆಯಾಗುತ್ತಿದ್ದ ವಿಷಯ ವಿಶ್ವಸುಂದರಿ ಹಾಗೂ ಭುವನ ಸುಂದರಿಯರ ಸ್ಪರ್ಧೆ, ಕಲೆ, ಕ್ರೀಡೆ, ವಾಣಿಜ್ಯ ಎಲ್ಲ ರಂಗಗಳ ನಿಯತಕಾಲಿಕೆಗಳ ತುಂಬ ಅವರದ್ದೆ ಪ್ರಚಾರ ಹಾಗೂ ಕಾರುಬಾರು. ಸಂದರ್ಶನಗಳಲ್ಲಿ ಆ ಮಹಿಳೆಯರು ಮದರ್ ತೆರೆಸಾರಂತೆ ಸೇವೆ ಮಾಡ ಬಯಸುವುದಾಗಿಯೂ ಹೇಳಿದ್ದರು. ಷೇರುಪೇಟೆ ಹಗರಣದ ಒಂದು ವಾರದ ಮೊದಲು 'ಬಿಸಿನೆಸ್ ಇಂಡಿಯಾ' ನಿಯತಕಾಲಿಕದ ಮುಖಪುಟದಲ್ಲಿ ಹರ್ಷದ್ ಮೆಹ್ತಾ ಮತ್ತು ಕೇತನ್ ಪಾರೇಖ್ ರಾರಾಜಿಸಿದ್ದರು. ಜೊತೆಗೆ 'ಶ್ರಮವಹಿಸಿ ದುಡಿಯುವ ಇಬ್ಬರು ಗುಜ್ಜುಗಳು (ಗುಜರಾತಿಗಳು) ಇಡೀ ದೇಶಕ್ಕೆ ಮಾದರಿ' ಎನ್ನುವ ಶಿರೋನಾಮೆ ಬೇರೆ. ಎಂತಹ ಮಾದರಿ ? ಷೇರುಪೇಟೆಯನ್ನು ಬುಡಮೇಲು ಮಾಡಿದವರು, ಇಡೀ ಅರ್ಥವ್ಯವಸ್ಥೆಯನ್ನು ಕುಸಿತಕ್ಕೆ ದೂಡಿದವರು ದೇಶಕ್ಕೆ ಮಾದರಿಯಂತೆ. ನಂತರದ 'ಬಿಸಿನೆಸ್ ಇಂಡಿಯಾ'ದ ಮುಖಪುಟದಲ್ಲಿ ಕೈಗೆ ಕೋಳ ತೊಟ್ಟ ಹರ್ಷದ್ ಮೆಹ್ತಾನ ಚಿತ್ರವಿತ್ತು. ಇಂತಹ ಮಾದರಿಗಳ ನಡುವೆ ಯುವಜನತೆ ತಮ್ಮ ಆದರ್ಶಗಳನ್ನು ಹುಡುಕಿಕೊಳ್ಳಬೇಕಿದೆ. ನನ್ನ ಅಭಿಪ್ರಾಯದಲ್ಲಿ, ಅನುಭವದ ಹಿನ್ನೆಲೆಯಲ್ಲಿ ಹೇಳುವುದಾದರೆ ನಿಮ್ಮಂಥವರಲ್ಲಿ ಅವರ ಅಂತರಂಗವನ್ನು ತಟ್ಟಬಲ್ಲ ಶಕ್ತಿ ಇದ್ದರೆ ಅವರಲ್ಲೊಬ್ಬ ಆದರ್ಶವಾದಿ ಖಂಡಿತ ಸಿಗುತ್ತಾನೆ. ೨೭ ವರ್ಷಗಳ ಹಿಂದೆ ನನ್ನ ವಿದ್ಯಾರ್ಥಿಯಾಗಿ ಬಂದವರು ಇಂದಿಗೂ ನನ್ನ ಸಂಪರ್ಕದಲ್ಲಿ ಇದ್ದಾರೆ. ನಮ್ಮ ಆರ್ಕೈವ್‌ಗೆ ಬರೆಯುತ್ತಾರೆ. ದೇಶದ ಬಗ್ಗೆ, ವೃತ್ತಿಯ ಬಗ್ಗೆ ಅವರಲ್ಲಿ ನಿಜವಾದ ಕಾಳಜಿ ಇದೆ. ಅವರಿಗೆ ತಮ್ಮ ಪತ್ರಿಕೆಯಲ್ಲಿ, ಚಾನೆಲ್‌ನಲ್ಲಿ ಒಂದು ಒಳ್ಳೆಯ ಕಥೆಯನ್ನು ಬರೆಯಲು ಅವಕಾಶವಿಲ್ಲ.

ಭೂಮಿ ಸ್ವಾಧೀನ ಕಾಯಿದೆಯು ಭೂಸುಧಾರಣೆ ಪ್ರಕ್ರಿಯೆಯ ತದ್ವಿರುದ್ಧದ ಕ್ರಿಯೆ ಎನ್ನುವ ವಿಷಯಕ್ಕೆ ಸಂಬಂಧಿಸಿದಂತೆ ಹೇಳುವುದಾದರೆ, ವಸಾಹತುಶಾಹಿಯ ಕಾಲದ ೧೮೮೧ರ ಕೋಲ್ ಬೇರಿಂಗ್ ಆ್ಯಕ್ಟ್ ಹಾಗೂ ಭೂಸ್ವಾಧೀನ ಕಾಯಿದೆಗಳಿಗೆ ಹೋಲಿಸಿದರೆ ಇಂದಿನ ಭೂಸ್ವಾಧೀನ ಮಸೂದೆಯು ಉತ್ತಮವಾದುದು. ಏಕೆಂದರೆ ಮಾರುಕಟ್ಟೆ ದರದ ಪರಿಹಾರ ಇತ್ಯಾದಿಗಳ ಬಗ್ಗೆ ಉಲ್ಲೇಖಿಸಲಾಗಿದೆ. ಆದರೆ ಅದರಲ್ಲಿ ಭೂ ಹಂಚಿಕೆಯ ಮಾತೇ ಇಲ್ಲ. ಅದರಲ್ಲಿ ರೈತರ ಬಗ್ಗೆ ಚಕಾರವಿಲ್ಲ. ಅಷ್ಟೇ ಏಕೆ, ಆಹಾರ ಭದ್ರತಾ ಕಾಯಿದೆಯಲ್ಲಿಯೂ ರೈತನ ಬಗ್ಗೆ ಪ್ರಸ್ತಾಪವೇ ಇಲ್ಲ. ಆಹಾರ ಎಲ್ಲಿಂದ ಬರುತ್ತದೆ ? ಎಂದರೆ ಸೂಪರ್ ಮಾರ್ಕೆಟ್‌ಗಳಿಂದ ಎಂದು ಭಾವಿಸಿದಂತಿದೆ. ಆಹಾರವನ್ನು ಚೀಲಗಳಲ್ಲಿ ಬೆಳೆಯುತ್ತಾರೆಯೇ ? ಭೂ ಸ್ವಾಧೀನ ಕಾಯಿದೆಯಲ್ಲಿ ಎರಡು ಚಟುವಟಿಕೆಗಳ ಕಾರಣಕ್ಕೆ ಭೂಸ್ವಾಧೀನವನ್ನು ಒಪ್ಪಲಾಗಿದೆ. ಒಂದು : ನೀರಾವರಿ ಯೋಜನೆ, ಎರಡು : ಗಣಿಗಾರಿಕೆ. ಈ ಎರಡೂ ಚಟುವಟಿಕೆಗಳು ಅತಿ ದೊಡ್ಡ ಪ್ರಮಾಣದಲ್ಲಿ ಜನರನ್ನು ಒಕ್ಕಲೆಬ್ಬಿಸುವ ಪ್ರಕ್ರಿಯೆಗಳಾಗಿವೆ. ಯೂರೋಪಿಯನ್ ಯೂನಿಯನ್ನಿನ ಯಾವುದೇ ಸದಸ್ಯ ರಾಷ್ಟ್ರವಿರಲಿ, ಅಮೆರಿಕ ಇರಲಿ, ಜಗತ್ತಿನಲ್ಲೆಲ್ಲಿಯೂ ಸರ್ಕಾರಗಳು ಕಾರ್ಪೊರೇಟ್ ಸಂಸ್ಥೆಗಳ ಸಲುವಾಗಿ ಭೂಸ್ವಾಧೀನ ಮಾಡಿಕೊಳ್ಳುವ ಉದಾಹರಣೆಯೆ ಇಲ್ಲ. ನಮ್ಮ ಸರ್ಕಾರಗಳು ಕಾರ್ಪೊರೇಟ್ ಸಂಸ್ಥೆಗಳ ದಲ್ಲಾಳಿಯಂತೆ ವರ್ತಿಸುತ್ತವೆ. ಅವು ಅಂಪೈರ್‌ನಂತೆ ನಿಯಂತ್ರಕನಾಗಿ ಕೆಲಸ ಮಾಡಬೇಕೆಂಬುದು ನನ್ನ ಅನಿಸಿಕೆ. ಇದು ಇಲ್ಲದಿರುವುದರಿಂದಲೇ ಕಳೆದ ಕೆಲವು ವರ್ಷಗಳಲ್ಲಿ ನಿಯಮಗಿರಿ, ಪೋಸ್ಕೊ ಮುಂತಾದ ಭೂಸ್ವಾಧೀನ ವಿರೋಧಿ ಹೋರಾಟಗಳು ನಡೆಯುತ್ತಿರುವುದು. ಕಳೆದ ಇಪ್ಪತ್ತು ವರ್ಷಗಳಲ್ಲಿ ನಿಯಮಗಿರಿಯ ಆದಿವಾಸಿಗಳ ಹೋರಾಟಕ್ಕೆ ಸಿಕ್ಕ ಗೆಲುವು ಮಹತ್ತರವಾದುದು. ಅಲ್ಲಿನ ಗ್ರಾಮ ಸಭಾ ಕಾರ್ಪೊರೇಟ್ ಪರ ಭೂಸ್ವಾಧೀನವನ್ನು ತಿರಸ್ಕರಿಸಿದ್ದನ್ನು ಸುಪ್ರೀಂಕೋರ್ಟ್ ಎತ್ತಿ ಹಿಡಿಯಿತು. ಇದು ಪ್ರಜಾಪ್ರಭುತ್ವಕ್ಕೆ ಸಂದ ಗೆಲುವು. ಆದರೆ ಇದರಲ್ಲೊಂದು ಸಮಸ್ಯೆ ಇದೆ. ಆ ಪ್ರಕರಣದಲ್ಲಿ ಸುಪ್ರೀಂ ಕೋರ್ಟ್ ತಪ್ಪು ಕಾರಣಕ್ಕೆ ಸರಿಯಾದ ತೀರ್ಪು ನೀಡಿದೆ. ಗ್ರಾಮ ಸಭಾದ ತೀರ್ಮಾನವನ್ನು ಜೀವನಾಧಾರದ ಕಾರಣಕ್ಕೆ ಎತ್ತಿ ಹಿಡಿಯಲಿಲ್ಲ. ಬದಲಾಗಿ ಧರ್ಮ ಮತ್ತು ಸಂಸ್ಕೃತಿಯ ಕಾರಣಕ್ಕೆ ಎತ್ತಿ ಹಿಡಿದಿದೆ. ಈ ಸಂದರ್ಭದಲ್ಲಿ ಇದು ಸರಿಯಾಗಿ ಕಂಡರೂ ಮುಂದೆ ಇದು ದುರುಪಯೋಗಕ್ಕೆ ಈಡಾಗುವ ಅಪಾಯವಿದೆ.

ಪೋಸ್ಕೊ ವಿರೋಧಿ ಹೋರಾಟಕ್ಕೆ ಸಂಬಂಧಿಸಿದಂತೆ ಗೋವಿಂದಪುರ ಮಾಗೂ, ದಿಗ್ಯ ಎಂಬೆರಡು ಹಳ್ಳಿಗಳು ನನಗೆ ಸ್ಫೂರ್ತಿ ನೀಡುತ್ತವೆ. ರೋಮನ್ ಸಾಮ್ರಾಜ್ಯದ ವಿರುದ್ಧ ನಡೆದ ಆಸ್ಟೆರಿಕ್ಸ್ ಹೋರಾಟವನ್ನು ನೆನಪಿಗೆ ತರುವ ಈ ಹೋರಾಟದಲ್ಲಿ ಎರಡು ಹಳ್ಳಿಗಳು ಜಗತ್ತಿನ ಅತಿ ದೊಡ್ಡ ಉಕ್ಕಿನ ಕಂಪನಿಯ ವಿರುದ್ಧ, ಒರಿಸ್ಸಾ ಪೊಲೀಸರ ವಿರುದ್ಧ, ಸ್ಥಳೀಯ ಆಡಳಿತದ ವಿರುದ್ಧ, ರಾಜ್ಯ ಹಾಗೂ ಕೇಂದ್ರ ಸರ್ಕಾರದ ವಿರುದ್ಧ, ಸಿ.ಆರ್.ಪಿ.ಎಫ್. ವಿರುದ್ಧ ದಿಟ್ಟವಾಗಿ ಹೋರಾಡುತ್ತಿವೆ. ಅವರ ಧರ್ಮ, ಸಂಸ್ಕೃತಿಗೆ ಚ್ಯುತಿ ಬಂದಿದೆ ಎನ್ನುವ ಕಾರಣಕ್ಕೆ ಅಲ್ಲ. ಆದರೂ ತಮ್ಮ ಅಸ್ತಿತ್ವವನ್ನು ಸರ್ವನಾಶ ಮಾಡಲು ಹೊರಟಿರುವ ನೀತಿಗಳ ವಿರುದ್ಧ ಹೋರಾಟ ಮುಂದುವರಿದಿದೆ. ಭೂಮಿ ಪ್ರಶ್ನೆಯನ್ನು ಪ್ರಸ್ತುತ ಮಸೂದೆ ಬಗೆಹರಿಸುವುದು ಸಾಧ್ಯವಿಲ್ಲ. ಕಾರಣ ವೇನೆಂದರೆ, ಇಂದಿಗೂ ಸಹ ಸಾಮಾನ್ಯ ಜನರ ಪ್ರಥಮ ಆದ್ಯತೆಯ ಸ್ವತ್ತು ಎಂದರೆ ಭೂಮಿ. ಸರ್ಕಾರಗಳು ಏಕೆ ಮಲಬಾರ್ ಹಿಲ್ಸ್‌ನಲ್ಲಿ ಭೂಸ್ವಾಧೀನ ಮಾಡುವುದಿಲ್ಲ ?!! ಕರ್ನಾಟಕ ಸರ್ಕಾರ ಒಂದು ವೇಳೆ ಬೆಂಗಳೂರಿನ ಜಯನಗರವು ಪ್ರಾಜೆಕ್ಟ್‌ನಲ್ಲಿ ಮುಳುಗಡೆಯಾಗಲಿದೆ ಎಂದು ಭೂಸ್ವಾಧೀನಕ್ಕೆ ಮುಂದಾದರೆ ಎರಡೇ ದಿನದಲ್ಲಿ ಕರ್ನಾಟಕ ಸರ್ಕಾರ ಬಿದ್ದುಹೋಗುತ್ತದೆ. ಬಡಜನರ ವಿಷಯದಲ್ಲಿ ಏನು ಬೇಕಾದರೂ ಮಾಡಬಹುದು.

ಭಾರತ ದೇಶವು ಹೆಚ್ಚಿನ ಪ್ರಗತಿ ಸಾಧಿಸಲು ಎರಡಂಕಿ ಜಿ.ಡಿ.ಪಿ. ಅವಶ್ಯಕತೆ ಇದೆ ಎನ್ನುವ ವಾದವಿದೆ, ಸ್ವಾತಂತ್ರ್ಯ ಬಂದಾಗಿನಿಂದಲೂ ಮೊದಲ ಬಾರಿಗೆ ಇತ್ತೀಚಿನ ವರ್ಷಗಳಲ್ಲಿ ಜಿ.ಡಿ.ಪಿ.ಯ ರಚನಾಂಶಗಳಲ್ಲಿ ನಾಟಕೀಯ ತಿರುವು ಪಡೆದು ಕೃಷಿಕ್ಷೇತ್ರಕ್ಕಿಂತಲೂ ಸೇವಾ ವಲಯದ ಕೊಡುಗೆ ಹೆಚ್ಚುತ್ತಿದೆ ಎನ್ನುವ ವಾದವೂ ಇದೆ. ಇದು ಸತ್ಯ. ಜಿ.ಡಿ.ಪಿ.ಯಲ್ಲಿ ಕೃಷಿಕ್ಷೇತ್ರದ ಕೊಡುಗೆ ಶೇ. ೧೪ಕ್ಕೆ ಇಳಿದಿದೆ. ಸೇವಾ ವಲಯದ ಕೊಡುಗೆ ಹೆಚ್ಚುತ್ತಿದೆ ಎನ್ನುವುದು ಸಹ ಸತ್ಯ. ಆದರೆ ಈ 'ಸೇವೆ' ಎನ್ನುವ ಶಬ್ದವೇ ಭ್ರಮಾತ್ಮಕವಾದುದು. ಸಾಮಾನ್ಯ ಮಧ್ಯಮ ವರ್ಗದ ಜನರು ಸೇವೆ ಎಂದ ಕೂಡಲೆ ಮಾಹಿತಿ ತಂತ್ರಜ್ಞಾನ ಸೇವೆಗಳು, ಆತಿಥ್ಯ ಸೇವೆಗಳು, ಬ್ಯಾಂಕಿಂಗ್, ವಿಮಾ ಸೇವೆಗಳು ಎಂದೇ ಭಾವಿಸುತ್ತಾರೆ. ವಾಸ್ತವದಲ್ಲಿ ಕೃಷಿ ಬಿಕ್ಕಟ್ಟಿನಿಂದ ಪಲ್ಲಟಗೊಂಡ ಗ್ರಾಮೀಣ ಪ್ರದೇಶದ ಜನರು ಸೇವಾ ವಲಯದ ಅತಿ ಕೆಳಗಿನ ಹಂತದ ಉದ್ಯೋಗಗಳಿಗೆ ಮೊರೆಹೋಗುತ್ತಿದ್ದಾರೆ. ಯೋಜನಾ ಆಯೋಗದ ವರದಿಯ ಪ್ರಕಾರ ೨೦೦೭ರಿಂದ ೨೦೧೧ರ ಅವಧಿಯಲ್ಲಿ ಕೃಷಿಕ್ಷೇತ್ರದಲ್ಲಿ ೧೪ ಮಿಲಿಯನ್ ಉದ್ಯೋಗಗಳು ನಷ್ಟವಾಗಿವೆ. ಮಾಹಿತಿ ತಂತ್ರಜ್ಞಾನದ ದಿಗ್ಗಜ ಇನ್ಫೋಸಿಸ್ ಸಂಸ್ಥೆಯಲ್ಲಿ ಕಾಫಿ/ಟೀ ಸರಬರಾಜು ಮಾಡುವ ವ್ಯಕ್ತಿ ರೈತನೋ, ರೈತನ ಮಗನೋ ಅಥವಾ ಕೃಷಿ ಕಾರ್ಮಿಕನೋ ಆಗಿರುತ್ತಾನೆ. ಸೇವಾವಲಯದ ಕೆಳಸ್ತರಗಳಲ್ಲಿ ವ್ಯತಿರಿಕ್ತ ಷರತ್ತುಗಳಿಗೆ ಒಳಪಟ್ಟು ದುಡಿಯುತ್ತಿರುವ ಬಡವರೇ ಅಧಿಕ ಸಂಖ್ಯೆಯಲ್ಲಿದ್ದಾರೆ. ಒಂದು ಸಣ್ಣ ಪ್ರಮಾಣದ ಜನರು ಮಾತ್ರ ಉನ್ನತಮಟ್ಟದ ವರಮಾನವನ್ನು ಪಡೆಯುತ್ತಿದ್ದಾರೆ. ಐ.ಟಿ. ಉದ್ಯಮದ ಬೃಹತ್ ಯಶಸ್ಸಿಗೆ ಕಾರಣ ೨೦ ವರ್ಷಗಳ ದೀರ್ಘಾವಧಿಯ ತೆರಿಗೆ ರಜೆಯೂ ಒಂದು ಕಾರಣ ಎಂದು ಹೇಳಲಾಗುತ್ತಿದೆ. ಆ ಸಂಸ್ಥೆಗಳಿಗೆ ಕೊನೆ ಇಲ್ಲದ ರಿಯಲ್ ಎಸ್ಟೇಟ್‌ಅನ್ನು ಸಹ ಸರ್ಕಾರಗಳು ನೀಡಿವೆ. ಇದರ ಪರಿಣಾಮವಾಗಿ ಈ ಸಂಸ್ಥೆಗಳ ಬ್ಯಾಲನ್ಸ್ ಶೀಟ್ ಉಬ್ಬಿದ್ದು, ಐ.ಟಿ. ಕ್ಷೇತ್ರ ಚೆನ್ನಾಗಿಯೇ ಕಾಣಿಸುತ್ತದೆ. ಜಪಾನ್ ದೇಶದಲ್ಲಿ ಒಂದು ಬೃಹತ್ ಕಾರ್ಪೊರೇಟ್ ಸಂಸ್ಥೆ ಒಂದೇ ಕಟ್ಟಡದಲ್ಲಿ ತನ್ನ ವ್ಯವಹಾರ ನಡೆಸುತ್ತದೆ. ನಮ್ಮ ಐ.ಟಿ. ಕ್ಷೇತ್ರದಲ್ಲಿರುವಂತೆ ಅವುಗಳಿಗೆ ೨೦೦ ಎಕರೆಗಳ ಬೃಹತ್ ಕ್ಯಾಂಪಸ್‌ನ ಅಗತ್ಯವಿಲ್ಲ. ಸೋನಿ ಅಥವಾ ಮಿಟ್ಸುಬಿಷಿ ಕಂಪನಿಗಳು ಸಣ್ಣ ಕಂಪನಿಗಳೇನಲ್ಲ. ಅವುಗಳಿಗೆ ಜಪಾನ್ ದೇಶದಲ್ಲಿ ಬೃಹತ್ ಕ್ಯಾಂಪಸ್‌ಗಳಿಲ್ಲ. ಇದು ಎಲ್ಲರಿಗೂ ತಿಳಿದ ವಿಷಯವೇ. ಆದರೆ ಬೆಂಗಳೂರಿನಲ್ಲಿ ಒಂದು ಎಕರೆಗೆ ಐದು ಕೋಟಿ ಬೆಲೆಬಾಳುವ ಭೂಮಿಯನ್ನು ಎಕರೆಗೆ ಐವತ್ತು ಸಾವಿರ ರೂಪಾಯಿಯಂತೆ ರೈತರಿಂದ ಕಿತ್ತು ಐ.ಟಿ. ಕಂಪನಿಗಳಿಗೆ ಕೊಡಲಾಯಿತು. ೧೦೦೦ ಕೋಟಿ ಬೆಲೆಯ ಭೂಮಿಯನ್ನು ಐ.ಟಿ. ಕಂಪನಿಗಳು ಬಿಡಿಗಾಸಿಗೆ ಪಡೆದು ಬೀಗಿದವು. ಇಂದು ಅದೇ ಕಂಪನಿಗಳು ಸಾವಿರಾರು ಉದ್ಯೋಗಿಗಳನ್ನು ಹೊರ ದೂಡಿದೆ. ಆ ಕಂಪನಿಗಳೇನೂ ಲಕ್ಷಾಂತರ ಸಂಖ್ಯೆಯಲ್ಲಿ ಉದ್ಯೋಗಗಳನ್ನು ಸೃಷ್ಟಿಸಲಿಲ್ಲ.

ಇನ್ನು ಜಿ.ಡಿ.ಪಿ.ಯ ರಚನಾಂಶದ ವಿಷಯದಲ್ಲಿ ಹೇಳುವುದಾದರೆ ಪರಂಪರಾಗತ ಕೃಷಿಕ್ಷೇತ್ರಕ್ಕೆ ಬದಲಾಗಿ ಸೇವಾವಲಯ ಪ್ರಧಾನವಾಗಿದೆ ಎನ್ನುವುದು ವಾಸ್ತವ ಸಂಗತಿ. ಆದರೆ ಜಿ.ಡಿ.ಪಿ.ಯ ಎರಡಂಕಿ ಹೆಚ್ಚಳವೇ ಎಲ್ಲವೂ ಅಲ್ಲ. ನ್ಯಾಯಬದ್ಧ ಕೌಟುಂಬಿಕ ಜೀವನಾಧಾರ ಕೂಲಿಯ ಪಾವತಿ ಇಲ್ಲದೆ ಕೇವಲ ಜಿ.ಡಿ.ಪಿ. ಹೆಚ್ಚಳ ಅರ್ಥಹೀನ. ಜಿ.ಡಿ.ಪಿ. ಬೆಳವಣಿಗೆ ಯಾವುದರಿಂದ

ಆಗಿದೆ ಎಂಬುದನ್ನು ಪರಿಶೀಲಿಸುವ ಅಗತ್ಯವೂ ಇದೆ. ಬೆಳವಣಿಗೆ ಜೊತೆ ಜೊತೆಯಲ್ಲಿಯೇ ನ್ಯಾಯ ಸಂದಾಯವೂ ಆಗಿದೆಯೇ ಎಂಬುದು ಅಷ್ಟೇ ಮುಖ್ಯ. ೧೯೮೦ರಷ್ಟು ಹಿಂದೆಯೇ ಅಮೇರಿಕಾದ ಖ್ಯಾತ ಪರಿಸರ ತಜ್ಞ ಎಡ್ವರ್ಡ್ ಅಬ್ಬೆ, "ಬೆಳವಣಿಗೆಗಾಗಿಯೇ ಬೆಳವಣಿಗೆ ಎನ್ನುವುದು ಕ್ಯಾನ್ಸರ್ ಕೋಶದ ಸಿದ್ಧಾಂತ" ಎಂದು ಹೇಳಿದ್ದಾರೆ. ಕ್ಯಾನ್ಸರ್ ಕೋಶದ ಬೆಳವಣಿಗೆಯಿಂದಾಗಿ ರೋಗಪೀಡಿತ ವ್ಯಕ್ತಿಯ ಸಾವು ಸಮೀಪವಾಗುತ್ತದೆ. ಆದ್ದರಿಂದ ಬರೀ ಬೆಳವಣಿಗೆ ಮಾತ್ರವೇ ಎಲ್ಲವೂ ಅಲ್ಲ. ಬೆಳವಣಿಗೆಗೆ ಅರ್ಥವಿರಬೇಕು. ಅದಕ್ಕೊಂದು ಸಾಮಾಜಿಕ ಉದ್ದೇಶವಿರಬೇಕು. ಈ ವಿಷಯದಲ್ಲಿ ಪ್ರೊ॥ ಅಮರ್ತ್ಯ ಸೇನ್‌ರನ್ನೂ ನಾನು ಸಂಪೂರ್ಣವಾಗಿ ಒಪ್ಪುವುದಿಲ್ಲ. ಅವರು 'ನ್ಯಾಯದೊಂದಿಗೆ ಬೆಳವಣಿಗೆ' ಎನ್ನುತ್ತಾರೆ. ನಾನು ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ, ನ್ಯಾಯದ ಮೂಲಕ ಬೆಳವಣಿಗೆ ಇದ್ದರೆ ಮಾತ್ರ ಸ್ಥಿರವಾದ ಅಭಿವೃದ್ಧಿ ಸಾಧ್ಯ ಎನ್ನುತ್ತೇನೆ.

ರೈತರ ಸ್ಥಿತಿ ಚಿಂತಾಜನಕವಾಗಿದೆ, ಅವರ ಪರಿಸ್ಥಿತಿ ಸುಧಾರಿಸಲು ಯಾರೂ ಏನೂ ಮಾಡಲಿಲ್ಲ ಎನ್ನುವ ಅಭಿಪ್ರಾಯವಿದೆ. ರೈತರ ಪರಿಸ್ಥಿತಿ ಹದಗೆಡಲು ಮುಖ್ಯ ಕಾರಣ ಫಸಲಿನ ಬೆಲೆಯ ಏರಿಳಿತ. ಸರ್ಕಾರಗಳು ಕಳೆದ ಇಪ್ಪತ್ತು ವರ್ಷಗಳಲ್ಲಿ ಅದನ್ನು ಸುಧಾರಿಸಲು ಏನೂ ಮಾಡಿಲ್ಲ ಎನ್ನುವುದೂ ನಿಜ. ಹಲವಾರು ಸಂದರ್ಭಗಳಲ್ಲಿ ರೈತರ ಪರಿಸ್ಥಿತಿ ಸುಧಾರಿಸಲು ಕನಿಷ್ಠ ಬೆಂಬಲ ಬೆಲೆ ಘೋಷಿಸುವ ನೀತಿ, ಕೃಷಿ ಕ್ಷೇತ್ರಕ್ಕೆ ಸಹಕಾರ ಸಂಘಟನೆಯನ್ನು ಅಳವಡಿಕೆ, ಕೇರಳ, ಬಂಗಾಲ, ತ್ರಿಪುರ ಮತ್ತು ಸ್ವಲ್ಪಮಟ್ಟಿಗೆ ಕರ್ನಾಟಕ ರಾಜ್ಯಗಳಲ್ಲಿ ಭೂ ಸುಧಾರಣೆ, ಸಂವಿಧಾನದ ೭೩ನೇ ತಿದ್ದುಪಡಿಯ ಮೂಲಕ ಪಂಚಾಯತ್ ರಾಜ್ ಅನುಷ್ಠಾನ, ಇತ್ಯಾದಿ ಹಲವು ಪ್ರಗತಿಪರ ಕೆಲಸಗಳಾಗಿವೆ. ಕಳೆದ ಇಪ್ಪತ್ತು ವರ್ಷಗಳಲ್ಲಿ ಇವೆಲ್ಲವನ್ನೂ ತಿರುಗುಮುರುಗಾಗಿಸುವ ನೀತಿಗಳು ಜಾರಿಯಾಗಿವೆ. ಬ್ಯಾಂಕ್ ರಾಷ್ಟ್ರೀಕರಣದಿಂದ ರೈತರಿಗೆ ಹಾಗೂ ಗ್ರಾಮೀಣ ಪ್ರದೇಶದ ಜನರಿಗೆ ಅನುಕೂಲವಾಯಿತು. ಖಾಸಗಿ ಬ್ಯಾಂಕುಗಳು ರೈತರಿಗೆ ಐದು ಪೈಸೆ ಸಾಲವನ್ನೂ ಕೊಡುತ್ತಿರಲಿಲ್ಲ. ರಾಷ್ಟ್ರೀಕರಣದಿಂದ ಅತಿ ಸಣ್ಣ ರೈತರಿಗೆ ಅಲ್ಲದಿದ್ದರೂ ಮಧ್ಯಮ ಹಾಗೂ ಸಣ್ಣ ಪ್ರಮಾಣದ ರೈತರಿಗೆ ಅನುಕೂಲವಾಗಿದೆ. ೧೯೬೯ರಲ್ಲಿ ಬ್ಯಾಂಕುಗಳ ಗ್ರಾಮೀಣ ಶಾಖೆಗಳ ಸಂಖ್ಯೆ ಶೇ. ೧೬ರಷ್ಟಿದ್ದದ್ದು, ೧೯೯೩ರ ಹೊತ್ತಿಗೆ ಶೇ. ೬೦ರಷ್ಟಾಯಿತು. ಆದರೆ ಈಗ ಅದು ಶೇ. ೪೮ಕ್ಕೆ ಇಳಿದಿದೆ. ಇಲ್ಲಿಯವರೆಗೂ ನೀಡಲಾಗಿದ್ದ ಅನುಕೂಲತೆಗಳನ್ನು ಹಿಂಪಡೆಯಲಾಗುತ್ತಿದೆ. ಹಿಂದಿನ ಕಾಲದಲ್ಲಿದ್ದ ಲೇವಾದೇವಿಗಾರರನ್ನು ಬ್ಯಾಂಕಿಂಗ್ ಬಾತ್ಮೀದಾರರ ಹೆಸರಿನಲ್ಲಿ ಮತ್ತೆ ಪುನರುಜ್ಜೀವಗೊಳಿಸಲಾಗುತ್ತಿದೆ. ಕೃಷಿಕ್ಷೇತ್ರದ ವಿಷಯದಲ್ಲಿ ಕಳೆದ ಎರಡು ದಶಕಗಳಿಂದ ಪ್ರತಿಕೂಲ ನೀತಿಗಳನ್ನು ಅನುಸರಿಸಿದ ಕಾರಣ ೧೯೯೫ರಿಂದ ೨೦೧೧ರವರೆಗೆ ೨,೮೫,೦೦೦ ರೈತರು ಆತ್ಮಹತ್ಯೆಗೆ ಶರಣಾಗಿದ್ದಾರೆ. ೨೦೦೧ರಿಂದ ರೈತರ ಆತ್ಮಹತ್ಯೆಯನ್ನು ಲೆಕ್ಕ ಹಾಕಿದರೆ ಪ್ರತಿ ೩೦ ನಿಮಿಷಕ್ಕೆ ಒಬ್ಬ ರೈತ ತನ್ನನ್ನು ತಾನೆ ಕೊಂದುಕೊಂಡಿದ್ದಾನೆ.




ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಲ್ಲಿ ಸತ್ತವರಿಗೂ ಕೂಲಿ ಪಾವತಿಯಾಗಿದೆ ಎಂದು, ಕರ್ನಾಟಕ ರಾಜ್ಯದಲ್ಲಿ ಚಾಲ್ತಿಯಲ್ಲಿರುವ ಅನ್ನಭಾಗ್ಯ ಯೋಜನೆಯ ಅಕ್ಕಿಯನ್ನು ಕಾಳಸಂತೆಯಲ್ಲಿ ಮಾರಾಟವಾಗುತ್ತಿರುವ ವಿಷಯಗಳು, ಅವುಗಳ ಪರಿಣಾಮಗಳೇನು ಎಂಬ ಪ್ರಶ್ನೆಯೂ ನಮ್ಮ ಮುಂದಿದೆ. ಸಾಮಾನ್ಯವಾಗಿ ಇಂತಹ ಕಾರ್ಯಕ್ರಮಗಳನ್ನು ಮಾಧ್ಯಮಗಳು ಬೆಂಬಲಿಸುವುದಿಲ್ಲ. ಏಕೆಂದರೆ ಮಾಧ್ಯಮಗಳು ಪ್ರತಿನಿಧಿಸುವ ವರ್ಗ ಹಿತಾಸಕ್ತಿಗೆ ಇಂತಹ ಕಾರ್ಯಕ್ರಮಗಳ ಫಲಾನುಭವಿಗಳ ಹಿತಾಸಕ್ತಿಯು ಪೂರಕವಾಗಿರುವುದಿಲ್ಲ. ಉದಾಹರಣೆಗೆ, 'ಆಧಾರ್' ಕಾರ್ಯಕ್ರಮವನ್ನು ಮಾಧ್ಯಮಗಳು ಬೆಂಬಲಿಸಿದವು. ನನ್ನ ಗೆಳೆಯ ನೀಲೇಕಣಿ ಸೇರಿದಂತೆ ಅದರಲ್ಲಿ ತೊಡಗಿದ್ದ ವ್ಯಕ್ತಿಗಳು ಕಾರ್ಪೊರೇಟ್ ಮಾಧ್ಯಮಗಳು ಬೆಂಬಲಿಸುವ ಬೇರೆಯೆ ಜಗತ್ತಿಗೆ – ವರ್ಗಕ್ಕೆ ಸೇರಿದವರು. ಭ್ರಷ್ಟಾಚಾರವು ಯಾವ ಕಾರ್ಯಕ್ರಮಗಳಲ್ಲಿ ಕಡಿಮೆ ಇದೆ ? ೨-ಜಿ ಹಗರಣದಲ್ಲಿ ಕಡಿಮೆ ಇದೆಯೇ ? ಟಾಟಾಗಳು, ಅಂಬಾನಿಗಳು, ಮಿತ್ತಲ್‌ಗಳು ಅದರಲ್ಲಿ ಭಾಗಿಗಳಾಗಿದ್ದರೂ ೨,೭೬,೦೦೦ ಕೋಟಿ ರೂಪಾಯಿಗಳ ಹಗರಣದಲ್ಲಿ ಒಬ್ಬ ಕಾರ್ಪೊರೇಟ್ ಉದ್ಯಮಪತಿಯೂ ಜೈಲಿಗೆ ಹೋಗಲಿಲ್ಲ. ನಾನು ನನ್ನ ಭಾಷಣದ ಪ್ರಾರಂಭದಲ್ಲಿ ಪ್ರಸ್ತಾಪಿಸಿದ ಕಾರ್ಪೊರೇಟ್ ರಿಯಾಯಿತಿಗಳು ೨-ಜಿ ಹಗರಣದ ಮೊತ್ತದ ಎರಡರಷ್ಟು ಇದೆ. ಈ ಎಲ್ಲಾ ಭ್ರಷ್ಟಾಚಾರಗಳ ಬಗ್ಗೆ ಕಾರ್ಪೊರೇಟ್ ಮಾಧ್ಯಮಗಳಿಗೆ ಏನೂ ಆಕ್ಷೇಪಗಳಿಲ್ಲ. ಆದರೆ ಯಾರಾದರೂ ೨ ಕೆ.ಜಿ. ಅಕ್ಕಿ ಕದ್ದರೆ ಅದು ಸಹಿಸಲಾಗದ ಭ್ರಷ್ಟಾಚಾರ. ನಿಜ, ಭ್ರಷ್ಟಾಚಾರವಿದೆ. ಅದಕ್ಕೆ ಪರಿಹಾರ ಆಹಾರ ವಿತರಣೆಯನ್ನು ಸಾರ್ವತ್ರೀಕರಣಗೊಳಿಸುವುದು. ಕೇರಳದಂತಹ ರಾಜ್ಯದಲ್ಲಿ; ಸಾರ್ವಜನಿಕ ವಿತರಣಾ ವ್ಯವಸ್ಥೆ ಬಲಿಷ್ಠವಾಗಿರುವ ಕಡೆ ಭ್ರಷ್ಟಾಚಾರವು ಕನಿಷ್ಠ ಪ್ರಮಾಣದಲ್ಲಿದೆ. ಅಲ್ಲದೆ, ಅಲ್ಲಿ ತಮ್ಮ ಹಕ್ಕುಗಳನ್ನು ಬಲವಾಗಿ ಪ್ರತಿಪಾದಿಸುವ ವಿದ್ಯಾವಂತರ ಸಮುದಾಯವೂ ಇದೆ. ಅಲ್ಲಿ ಜನರು ಅನ್ಯಾಯದ ವಿರುದ್ಧ ತೀವ್ರ ಆಕ್ರೋಶದಿಂದ ಪ್ರತಿಭಟಿಸುವುದೂ ಇದೆ. ಕೊಲೆ ಅತ್ಯಾಚಾರಗಳು ನಿಂತಿಲ್ಲವೆಂದ ಮಾತ್ರಕ್ಕೆ ಅವುಗಳಿಗೆ ಶಿಕ್ಷೆ ವಿಧಿಸುವ ಕಾನೂನನ್ನು ತೆಗೆದುಹಾಕುವುದು ಸಮಂಜಸವಾದೀತೆ ? ಸಾರ್ವಜನಿಕ ವಿತರಣಾ ವ್ಯವಸ್ಥೆಯಲ್ಲಿ ಭ್ರಷ್ಟಾಚಾರ ಹುಟ್ಟುವುದೇ ತಾರತಮ್ಯದ ಗುರಿ ಹಲಗೆ (ಟಾರ್ಗೆಟಿಂಗ್) ನೀತಿಯಿಂದ. ಹತ್ತು ಜನರ ಪೈಕಿ ಮೂವರಿಗೆ ಮಾತ್ರ ರಿಯಾಯಿತಿ ದರದಲ್ಲಿ ಧಾನ್ಯ ನೀಡುತ್ತೇವೆಂದರೆ ಉಳಿದವರಲ್ಲಿ ಅದು ಎಂತಹ ಭಾವನೆಗೆ ಕಾರಣವಾಗಬಹುದು ? ಅದರ ಜೊತೆ ಬಿ.ಪಿ.ಎಲ್. ಕಾರ್ಡ್ ಪಡೆಯಬೇಕೆಂಬ ಸಮಸ್ಯೆ ಬೇರೆ ! ಲಂಚ ಕೊಡಿ ಎನ್ನುವ ಮಧ್ಯವರ್ತಿ ವ್ಯವಸ್ಥೆ ಬೇರೆ !! ಇದೇನೆ ಇರಲಿ, ಬಹುತೇಕ ಹಳ್ಳಿಗಳಲ್ಲಿ ಎಲ್ಲಾ ಬಿ.ಪಿ.ಎಲ್. ಕಾರ್ಡುಗಳು ಆ ಹಳ್ಳಿಯ ಲೇವಾದೇವಿಗಾರನ ಬಳಿ ಅಡಮಾನವಾಗಿರುತ್ತವೆ. ಏಕೆಂದರೆ ಒಂದು ಸಣ್ಣ ಪ್ರಮಾಣದ ಸಾಲ ಪಡೆಯಲೂ ಸಹ ಅದು ಅಡಮಾನವಿಡಬಹುದಾದ ವಸ್ತುವಾಗಿ ಬಳಕೆಯಾಗುತ್ತಿದೆ. ಸಾರ್ವತ್ರಿಕ ಸಾರ್ವಜನಿಕ ವಿತರಣಾ ವ್ಯವಸ್ಥೆ ಇದ್ದರೆ ಅವ್ಯವಹಾರಗಳಿಗೆ ಆಸ್ಪದ ಕಡಿಮೆ. ಅದು ಜಾರಿಯಾದ ಮಾತ್ರಕ್ಕೆ ಮುಖೇಶ್ ಅಂಬಾನಿಯಂತಹವರು ಧಾನ್ಯಕ್ಕಾಗಿ ಕ್ಯೂ ನಿಲ್ಲುವುದಿಲ್ಲ ಎನ್ನುವುದೂ ನಿಜ. ಆದರೆ ಎಲ್ಲರಿಗೂ ಆಹಾರ ನೀಡುವಂತಹ ಮಾನವೀಯ ದಕ್ಷ ವ್ಯವಸ್ಥೆ ಅದಾಗುತ್ತದೆ.

ಇಂದು ನಮ್ಮ ಸಾರ್ವಜನಿಕ ವಿತರಣಾ ವ್ಯವಸ್ಥೆ, ಗ್ರಾಮೀಣ ಉದ್ಯೋಗ ಖಾತ್ರಿ ಯೋಜನೆಗಳು ಸಮಾಧಾನಕರವಾಗಿವೆಯೇ ? ಖಂಡಿತಾ ಇಲ್ಲ. ಆದರೆ ಆ ಯೋಜನೆಗಳು ಉಳಿಯಬೇಕಾಗಿದೆಯೇ ? ಖಂಡಿತಾ ಹೌದು. ೨೦೦೪ರಲ್ಲಿ ಗ್ರಾಮೀಣ ಉದ್ಯೋಗ ಯೋಜನೆ ಜಾರಿಯಾದಾಗ ಹಳ್ಳಿಯ ಬಡಜನರಿಗೆ ಅದೊಂದು ದೈವದತ್ತ ವರವಾಗಿ ಪರಿಣಮಿಸಿತ್ತು. ಅದರ ಎಲ್ಲಾ ಇತಿಮಿತಿಗಳ ನಡುವೆಯೂ ಅದು ಜನರಲ್ಲಿ ಕೊಳ್ಳುವ ಶಕ್ತಿಯನ್ನು ಹೆಚ್ಚಿಸಿದ ಯೋಜನೆ. ಅದರ ಪರಿಣಾಮವಾಗಿ ೬೩ ಮಿಲಿಯನ್ ಟನ್ ಹೆಚ್ಚುವರಿ ಆಹಾರ ಧಾನ್ಯಕ್ಕೆ ಬೇಡಿಕೆ ಹೆಚ್ಚಿ ಬಿಕರಿಯಾಯಿತು. ಈಗ ಬೆಲೆ ಏರಿಕೆಯ ಪರಿಣಾಮವಾಗಿ ಜನರ ಕೊಳ್ಳುವ ಶಕ್ತಿ ಕುಸಿದು ೭೦ ಮಿಲಿಯನ್ ಟನ್ ಆಹಾರಧಾನ್ಯ ಕೊಳ್ಳುವವರಿಲ್ಲದೆ ಕೊಳೆಯುತ್ತಿದೆ. ಸರ್ಕಾರಕ್ಕೆ ಇದನ್ನು ಕೊಳ್ಳಲು ಮನಸ್ಸಿಲ್ಲ. ಸುಪ್ರೀಂ ಕೋರ್ಟ್ ಸಹ ಕೊಳೆಯುವ ಮೊದಲು ಆಹಾರ ಧಾನ್ಯವನ್ನು ಹಂಚಿ ಎಂದು ಸೂಚಿಸಿದರೆ, ಒಂದು ಕೋಳಿಯನ್ನೂ ಸಹ ಎಂದೂ ಗದರದ ಪ್ರಧಾನ ಮಂತ್ರಿಯವರು ಸುಪ್ರೀಂ ಕೋರ್ಟಿಗೆ ನೀತಿಯ ವಿಷಯದಲ್ಲಿ ಮೂಗು ತೂರಿಸಬಾರದೆಂದು ಗುಟುರು ಹಾಕಿದರು. ಗ್ರಾಮೀಣ ಉದ್ಯೋಗ ಖಾತ್ರಿ ಯೋಜನೆಯಂತಹ ಅವಕಾಶಗಳಿರುವುದರಿಂದಲೇ ೭೪ ವರ್ಷ ವಯಸ್ಸಿನ ಗಡಸು ರಾಮುದುರಂತಹವರೂ, ದಿಕ್ಕಿಲ್ಲದ ವೃದ್ಧ ವಿಧವೆಯರೂ ಎಲ್ಲಿಗಾದರೂ ಹೋಗುವುದು ಸಾಧ್ಯವಿದೆ. ಸಾರ್ವಜನಿಕ ವಿತರಣಾ ವ್ಯವಸ್ಥೆಯೇ ಆಗಲಿ, ಗ್ರಾಮೀಣ ಉದ್ಯೋಗ ಖಾತ್ರಿ ಯೋಜನೆಯೇ ಆಗಲಿ, ಅದನ್ನು ಸುಧಾರಿಸಬೇಕಾದ ಅಗತ್ಯವಿದೆ. ಅವುಗಳು ಊರುಗೋಲುಗಳೇ ವಿನಾ ಸಮಸ್ಯೆಗಳಿಗೆ ಪರಿಹಾರವಲ್ಲ.

ನಿರೂಪಣೆ : **ಡಿ. ಎ. ವಿಜಯ ಭಾಸ್ಕರ**
೧೦೪೦, ೧೩ನೇ ಅಡ್ಡರಸ್ತೆ, ಜೆ. ಪಿ. ನಗರ ೧ನೇ ಹಂತ
೧ನೇ ಘಟ್ಟ, ಬೆಂಗಳೂರು – ೫೬೦ ೦೭೮


ಕ್ಷ - ಕಿರಣ
- ಪ್ರಕಾಶ್ ಎಸ್.
ರೈಲು ದರ ಏರಿಕೆ
ಬುಲೆಟ್ ರೈಲು
ಹಲೋ ಒಬಾಮಾಜಿ... ನಿಮ್ಮೂರಲ್ಲಿ ಯಾವುದಾದರೂ ಮೇಷ್ಟ್ರ ಕೆಲಸ ಖಾಲಿ ಇದೆಯಾ
ಶಾಂತಿ ಶಾಂತಿ ಶಾಂತಿಃ
ಗುಜರಾತ್ ಹತ್ಯಾಕಾಂಡ

# ಇಂದಿರಾ ಕಾಂಗ್ರೆಸ್ ಜಯಭೇರಿ ಬಂಗ್ಲಾದೇಶದ ಉದಯ




ಸಿ. ಆರ್. ಕೃಷ್ಣರಾವ್

**ಕಾಂ**ಗ್ರೆಸ್ ಇಬ್ಭಾಗವಾದ ನಂತರ ಇಂದಿರಾ ಗಾಂಧಿ ನೇತೃತ್ವದ ಸರಕಾರ ಬಹುಮತ ಕಳೆದು ಕೊಂಡಿತು. ಅದು ಎರಡು ಕಮ್ಯುನಿಸ್ಟ್ ಪಾರ್ಟಿಗಳು, ಕೆಲವು ಸೋಷಿಯಲಿಸ್ಟ್ ಸಂಸದರು, ದ್ರಾವಿಡ ಮುನ್ನೇತ್ರ ಕಳಗಂ, ಅಕಾಲಿ ದಳ ಹಾಗೂ ಕೆಲವು ಸ್ವತಂತ್ರರ ಬೆಂಬಲವನ್ನು ಆಶ್ರಯಿಸಬೇಕಾಗಿ ಬಂದಿತು. ಕಾಂಗ್ರೆಸ್ ಒಡೆದಾಗ ಆಕೆ ಕೈಗೊಂಡಿದ್ದ ಬ್ಯಾಂಕ್ ರಾಷ್ಟ್ರೀಕರಣ ಮತ್ತು ರಾಜಮಹಾರಾಜರುಗಳ ಸವಲತ್ತುಗಳ ರದ್ದತಿಯ ನಿರ್ಧಾರಗಳು ಜನಪ್ರಿಯತೆ ತಂದರೂ ಅವು ಕಾನೂನುಬಾಹಿರ ಎನಿಸಿ ಕೊಂಡಿದ್ದುವು. ಸರ್ವೋಚ್ಚ ನ್ಯಾಯಾಲಯ ಬ್ಯಾಂಕ್ ರಾಷ್ಟ್ರೀಕರಣವನ್ನು ತಾರತಮ್ಯ ಹಾಗೂ ನೀಡಿದ ಪರಿಹಾರ ಅಸಮರ್ಪಕ ಎಂದು ರದ್ದುಗೊಳಿಸಿತು. ಹಾಗೆಯೇ ಪ್ರೀವಿ ಪರ್ಸ್‌ಅನ್ನು ರದ್ದುಗೊಳಿಸಿದ್ದು ಸಂವಿಧಾನ ಬದ್ಧವಲ್ಲ ಎಂದು ತಿರಸ್ಕೃತವಾಗಿತ್ತು. ಬ್ಯಾಂಕ್ ರಾಷ್ಟ್ರೀಕರಣಕ್ಕೆ ಇದ್ದ ಅಡ್ಡಿಯನ್ನು ಕಾನೂನಿನ ನ್ಯೂನತೆಗಳನ್ನು ಸರಿಪಡಿಸಿ ರಾಷ್ಟ್ರಪತಿಯವರ ಸುಗ್ರೀವಾಜ್ಞೆಯ ಮೂಲಕ ನಿವಾರಿಸಲಾಯಿತು. ರಾಷ್ಟ್ರೀಕೃತ ಬ್ಯಾಂಕ್‌ಗಳಲ್ಲಿ ಸಾಮಾನ್ಯ ಜನರಿಗೆ ಅಂದರೆ ಸಣ್ಣ ಕೈಗಾರಿಕೆಗಳಿಗೆ, ರೈತರಿಗೆ ರಿಕ್ಷ ಮತ್ತು ಟ್ಯಾಕ್ಸಿ ಚಾಲಕರಿಗೂ ವಾಹನ ಕೊಳ್ಳಲು ಸುಲಭವಾಗಿ ಸಾಲ ದೊರಕುವಂತೆ ಕ್ರಮ ಕೈಗೊಳ್ಳಲಾಯಿತು. ಈ ಬೆಳವಣಿಗೆಗಳಾದದ್ದು ೧೯೭೦ರ ಫೆಬ್ರವರಿಯಲ್ಲಿ. ಇಂದಿರಾ ಗಾಂಧಿ ಎಡಪಂಥೀಯ ವಿಚಾರಧಾರೆಯವರೇನಾಗಿರಲಿಲ್ಲ. ಆದರೆ ಹಲವು ಜನಪರ ಕಾರ್ಯಕ್ರಮಗಳನ್ನು ಜಾರಿಗೆ ತಂದವರು ಪ್ರೀವಿ ಪರ್ಸ್ ರದ್ದತಿಯನ್ನು ಸಕ್ರಮಗೊಳಿಸಲು ಸಂವಿಧಾನಕ್ಕೆ ತಿದ್ದುಪಡಿ ತರುವುದು ಅಗತ್ಯವಾಗಿತ್ತು. ೧೯೭೦ರ ಆಗಸ್ಟ್ ತಿಂಗಳಲ್ಲಿ ಸರಕಾರ ಸಂವಿಧಾನಕ್ಕೆ ತಿದ್ದುಪಡಿಯನ್ನು ಮಂಡಿಸಿತು. ಲೋಕಸಭೆಯಲ್ಲಿ ಅಂಗೀಕೃತವಾದಾಗ್ಯೂ, ರಾಜ್ಯಸಭೆಯಲ್ಲಿ ಕೇವಲ ಒಂದು ಮತದ ಅಂತರದಿಂದ ಅದು ಬಿದ್ದುಹೋಯಿತು. ಸರಕಾರ ಮತ್ತೆ ಸುಗ್ರೀವಾಜ್ಞೆಯ ಮೊರೆಹೊಕ್ಕಿತು. ಆದರೆ ಸರ್ವೋಚ್ಚ ನ್ಯಾಯಾಲಯ ಅದು ಸಂವಿಧಾನಬಾಹಿರ ಎಂದು ತಳ್ಳಿಹಾಕಿತು.

> ಈ ಯುದ್ಧ ಮುಗಿದ ಮೇಲೆ ಪಾಕಿಸ್ತಾನದ ಪ್ರಧಾನಿ ಭುಟ್ಟೋ ಮತ್ತು ಭಾರತದ ಪ್ರಧಾನಿ ಶ್ರೀಮತಿ ಇಂದಿರಾ ಗಾಂಧಿ ಸಿಮ್ಲಾದಲ್ಲಿ ಭೇಟಿಯಾಗಿ ಮಾತುಕತೆ ನಡೆಸಿದರು. ಕಾಶ್ಮೀರ ಸಮಸ್ಯೆಯನ್ನು ಒಳಗೊಂಡಂತೆ ಎಲ್ಲ ವಿವಾದಾತ್ಮಕ ಸಮಸ್ಯೆಗಳನ್ನೂ ಮೂರನೆಯವರ ಮಧ್ಯ ಪ್ರವೇಶವಿಲ್ಲದೆ ನೇರವಾದ ಪರಸ್ಪರ ಮಾತುಕತೆಗಳಿಂದ ಬಗೆಹರಿಸಿಕೊಳ್ಳಬೇಕೆಂದು ಒಪ್ಪಂದವಾಯಿತು. ಇದೇ ಸಿಮ್ಲಾ ಒಪ್ಪಂದವೆಂದು ಹೆಸರುವಾಸಿಯಾಯಿತು.

ಈ ಹಿನ್ನಡೆಯಿಂದ ಧೃತಿಗೆಡದೆ ಜನಪರ ಕಾರ್ಯಕ್ರಮಗಳನ್ನು ಜಾರಿಗೆ ತರಲು ಪ್ರಧಾನಿ ಮುಂದಾದರೂ ಅಲ್ಪಮತೀಯ ಸರಕಾರವಾಗಿದ್ದುದರಿಂದ ಸರಕಾರಕ್ಕೆ ಇರಿಸುಮುರುಸಾಗಿತ್ತು. ಇತರ ಪಕ್ಷಗಳ ಮೇಲೆ ಅವಲಂಬಿತವಾಗಿರುವುದು ಕಷ್ಟವಾಗಿತ್ತು. ಹಾಗಾಗಿ ಇಂದಿರಾ ಗಾಂಧಿ ಹೊಸದಾಗಿ ಜನಾದೇಶ ಪಡೆಯಲು ನಿರ್ಧರಿಸಿದರು. ಅವಧಿ ಪೂರ್ಣವಾಗುವುದಕ್ಕೆ ಒಂದು ವರ್ಷ ಮುಂಚೆಯೇ ಚುನಾವಣೆ ನಡೆಸಲು ನಿರ್ಧರಿಸಿದರು. ೧೯೭೦ರ ಡಿಸೆಂಬರ್ ತಿಂಗಳಲ್ಲಿ ಲೋಕಸಭೆಯನ್ನು ವಿಸರ್ಜಿಸಿ ೧೯೭೧ರ ಫೆಬ್ರವರಿಯಲ್ಲಿ ಚುನಾವಣೆಗಳು ನಡೆದುವು. ಚುನಾವಣೆಗಳಲ್ಲಿ ಇಂದಿರಾ ಗಾಂಧಿ ನೇತೃತ್ವದಲ್ಲಿದ್ದ ಕಾಂಗ್ರೆಸ್ಸಿಗೆ ಪ್ರಚಂಡ ಬಹುಮತ ದೊರೆಯಿತು. ಬಲಪಂಥೀಯ ಪಕ್ಷಗಳಾದ ಸಂಸ್ಥಾ ಕಾಂಗ್ರೆಸ್, ಜನಸಂಘ, ಸ್ವತಂತ್ರ ಪಾರ್ಟಿ ಮತ್ತು ಸಂಯುಕ್ತ ಸೋಷಲಿಸ್ಟ್ ಪಾರ್ಟಿ ಕೂಟವನ್ನು ರಚಿಸಿಕೊಂಡು ಸ್ಪರ್ಧಿಸಿದ್ದಾಗ್ಯೂ ಚುನಾವಣೆಯಲ್ಲಿ ಮಣ್ಣುಮುಕ್ಕಿದುವು. ಇಂದಿರಾ ಗಾಂಧಿಯನ್ನು ಅಧಿಕಾರದಿಂದ ಇಳಿಸುವುದೊಂದೇ ಅವುಗಳ ಗುರಿಯಾಗಿತ್ತು. ಇದಕ್ಕೆ ಪ್ರತಿಯಾಗಿ 'ಗರೀಬಿ ಹಟಾವೊ' (ಬಡತನ ನಿರ್ಮೂಲನ) ಘೋಷಣೆಯ ಆಧಾರದ ಮೇಲೆ ಕಣಕ್ಕಿಳಿದ ಇಂದಿರಾ ಗಾಂಧಿ ಹಲವು ಜನಪ್ರಿಯ ಕ್ರಮಗಳ ಆಶ್ವಾಸನೆ ಹಾಗೂ ಸಾಮಾಜಿಕ ಬದಲಾವಣೆಯ ಆಮಿಷ ತೋರಿ ಪ್ರಚಾರ ನಡೆಸಿದರು. ಚುನಾವಣೆಗಳಲ್ಲಿ ಇಂದಿರಾ ಕಾಂಗ್ರೆಸ್ ೫೧೮ ಲೋಕಸಭಾ ಸ್ಥಾನಗಳ ಪೈಕಿ ೩೫೨ ಸ್ಥಾನಗಳನ್ನು ಗಳಿಸಿ ಮೂರನೇ ಎರಡರಷ್ಟು



ಪಾಕಿಸ್ತಾನದ ಅಧ್ಯಕ್ಷ ಯಾಹ್ಯಾ ಖಾನ್

ಬಹುಮತ ಪಡೆಯಿತು. ಬಲಪಂಥೀಯ ಪಕ್ಷಗಳ ಕೂಟ ನಿರ್ನಾಮಗೊಂಡಿತು. ಕಮ್ಯುನಿಸ್ಟ್ ಪಕ್ಷಗಳು ಹಾಗೂ ಡಿಎಂಕೆ ತಮ್ಮ ಸ್ಥಾನಗಳನ್ನು ಉಳಿಸಿಕೊಂಡಿದ್ದುವು. ಈ ಪಕ್ಷಗಳು ಜನಪರ ಯೋಜನೆಗಳಿಗೆ ಬೆಂಬಲ ನೀಡುತ್ತಿದ್ದುವು. ಹಾಗಾಗಿ, ಒಂದು ಬಗೆಯಲ್ಲಿ ವಿರೋಧವೇ ಇಲ್ಲದೆ ಸರಕಾರ ಸ್ಥಾಪನೆಗೊಂಡಿತು. ಇಂದಿರಾ ಗಾಂಧಿಯವರ ಜನಪ್ರಿಯತೆ ಮುಗಿಲು ಮುಟ್ಟಿತ್ತು. ಪ್ರಿವಿ ಪರ್ಸ್ ರದ್ದತಿಗೆ ಅಗತ್ಯವಾದ ತಿದ್ದುಪಡಿಯನ್ನು ಸಂವಿಧಾನದಲ್ಲಿ ಅಳವಡಿಸಲಾಯಿತು. ಕಾಂಗ್ರೆಸ್ ಸಂಘಟನೆಯಲ್ಲೂ ಇಂದಿರಾ ಗಾಂಧಿ ಅಪ್ರತಿಮ ನಾಯಕಿಯಾಗಿ ಹೊರಹೊಮ್ಮಿದರು. ಈ ಚುನಾವಣೆಗಳ ನಂತರ ಚುನಾವಣೆಗಳ ಸಮಯದಲ್ಲಿ ಜನತೆಗೆ ನೀಡಿದ್ದ ಆಶ್ವಾಸನೆಗಳೂ ಈಡೇರಲಿಲ್ಲ. 'ಗರೀಬಿ ಹಟಾವೊ' ಕೇವಲ ಒಂದು ಘೋಷಣೆಯಾಗಿ ಉಳಿಯಿತಲ್ಲದೆ ಮತ್ತೇನಾಗಲಿಲ್ಲ. ಇಂದಿರಾ ಗಾಂಧಿಯ ಜನಪ್ರಿಯತೆ ಮಾತ್ರ ಕುಂದಲಿಲ್ಲ. ಚುನಾವಣೆಗಳು ಮುಗಿಯುತ್ತಿದ್ದ ಹಾಗೆಯೇ ಪೂರ್ವ ಪಾಕಿಸ್ತಾನ (ಈಗಿನ ಬಂಗ್ಲಾದೇಶ)ದ ಘಟನೆಗಳು ದೇಶದ ಜನತೆಯ ಗಮನವನ್ನು ಸೆಳೆದುವು. ಈ ಸಂದರ್ಭದಲ್ಲಿ ಪ್ರಧಾನಿ ಇಂದಿರಾ ಗಾಂಧಿ ತೋರಿದ ತಾಳ್ಮೆ, ಜಾಣ್ಮೆ, ದೃಢನಿರ್ಧಾರಗಳು ಅವರ ಜನಪ್ರಿಯತೆಗೆ ಶ್ರೀರಕ್ಷೆಯಾದುವು.



ಶೇಖ್ ಮುಜಿಬುರ್ ರೆಹಮಾನ್

ಪೂರ್ವ ಪಾಕಿಸ್ತಾನದಲ್ಲಿ ಉದ್ಭವಿಸಿದ ಪರಿಸ್ಥಿತಿ ಪೂರ್ಣವಾಗಿ ಪಾಕಿಸ್ತಾನದ ಆಂತರಿಕ ವಿಷಯ. ಆದರೆ ಅದರ ಪರಿಣಾಮ ಭಾರತಕ್ಕೆ ದೊಡ್ಡ ಸಮಸ್ಯೆಯಾಯಿತು. ಬ್ರಿಟಿಷ್ ಸಾಮ್ರಾಜ್ಯಶಾಹಿಗಳ ವಿಭಜಿಸಿ ಆಳುವ ನೀತಿಯ ಪರಿಣಾಮವಾಗಿ ಭಾರತವನ್ನು ತುಂಡರಿಸಿದಾಗ ಹುಟ್ಟಿಕೊಂಡಿದ್ದು ಪಾಕಿಸ್ತಾನ. ಭಾರತದ ಮೇಲೆ ಒತ್ತಡ ತರಲು ಈ ಕೃತಕ ಸೃಷ್ಟಿಯನ್ನು ಬ್ರಿಟನ್, ಅಮೆರಿಕ ಉಪಯೋಗಿಸಿಕೊಂಡಿವೆ. ಎರಡೂ ದೇಶಗಳು ಪಾಕಿಸ್ತಾನಕ್ಕೆ ಸಾಕಷ್ಟು ನೆರವು ಹಾಗೂ ಆಧುನಿಕ ಶಸ್ತ್ರಾಸ್ತ್ರಗಳನ್ನು ಒದಗಿಸಿವೆ. ಭಾರತದ ಮಟ್ಟಿಗೆ ಪಾಕಿಸ್ತಾನದೊಂದಿಗಿನ ಸಂಬಂಧ ಇದುವರೆಗೆ ಸಮಸ್ಯೆಯಾಗಿಯೇ ಉಳಿದಿದೆ. ಪಾಕಿಸ್ತಾನದ ಕೇಂದ್ರ ಆಡಳಿತೆ ಪಶ್ಚಿಮದಲ್ಲಿದ್ದರೆ ಪೂರ್ವ ಪಾಕಿಸ್ತಾನ (ಪೂರ್ವ ಬಂಗಾಳ) ಇದ್ದುದು ಸಾವಿರಾರು ಕಿಲೋ ಮೀಟರುಗಳ ಅಂತರದಲ್ಲಿ. ದೇಶದ ಒಟ್ಟು ಜನಸಂಖ್ಯೆಯಲ್ಲಿ ಶೇಕಡ ೫೫ರಷ್ಟು ಪೂರ್ವ ಪಾಕಿಸ್ತಾನದಲ್ಲಿದ್ದರೂ ಆಡಳಿತ ಸೂತ್ರವೆಲ್ಲ ಪಶ್ಚಿಮದ ಬಿಗಿಹಿಡಿತದಲ್ಲಿ, ಸಿಂಧ್ ಮತ್ತು ಪಂಜಾಬ್‌ಗಳದ್ದೇ ಪಾರುಪತ್ಯ. ಪೂರ್ವ ಬಂಗಾಳ ಸೆಣಬು ತಯಾರಿಕೆಗೆ ಕೇಂದ್ರವಾಗಿದ್ದು ಪಾಕಿಸ್ತಾನದ ವಿದೇಶೀ ವಿನಿಮಯಕ್ಕೆ ಆಕರವಾಗಿದ್ದರೂ ಯಾವ ಅಭಿವೃದ್ಧಿಯನ್ನು ಕಂಡಿರಲಿಲ್ಲ. ಎಲ್ಲ ರೀತಿಯಲ್ಲೂ ಭಿನ್ನವಾಗಿದ್ದ ಈ ಭೂಭಾಗ ಪಾಕಿಸ್ತಾನದಲ್ಲಿ ವಸಾಹತಿನಂತೆ ತೀವ್ರವಾದ ಶೋಷಣೆಗೆ ಗುರಿಯಾಗಿತ್ತು. ಅತೃಪ್ತಿ ಹೊಗೆಯಾಡುತ್ತಿತ್ತು. ಸುದೀರ್ಘ ಮಿಲಿಟರಿ ಸರ್ವಾಧಿಕಾರಿ ಆಡಳಿತದಿಂದಾಗಿ ಜನಾಂದೋಲನ ಸಾಧ್ಯವಿರಲಿಲ್ಲ. ಜನರಲ್ ಅಯೂಬ್ ಖಾನ್‌ನ ನಂತರ ಅಧಿಕಾರ ವಹಿಸಿಕೊಂಡ ಜನರಲ್ ಯಾಹ್ಯಾ ಖಾನ್ ಪಾಕಿಸ್ತಾನದಲ್ಲಿ ನಾಗರಿಕ ಸರ್ಕಾರ ಸ್ಥಾಪನೆಗಾಗಿ ಚುನಾವಣೆಗಳನ್ನು ನಡೆಸಲು ತೀರ್ಮಾನಿಸಿದ. ಪೂರ್ವ ಪಾಕಿಸ್ತಾನದಲ್ಲಿ ಶೇಖ್ ಮುಜಿಬುರ್ ರೆಹಮಾನ್ ನೇತೃತ್ವದಲ್ಲಿದ್ದ ಅವಾಮಿ ಲೀಗ್ ಪಕ್ಷ ಸ್ವಾಯತ್ತತೆಯ ಬೇಡಿಕೆಯನ್ನು ಮುಂದಿಟ್ಟು ಚುನಾವಣೆಗಳಲ್ಲಿ ಪ್ರಚಂಡ ಜಯ ಗಳಿಸಿ ಸರಕಾರ ರಚಿಸಲು ಅಗತ್ಯವಾದ ಬಹುಮತ ಗಳಿಸಿತು. ಪಶ್ಚಿಮ ಪಾಕಿಸ್ತಾನದಲ್ಲಿ ಜುಲ್ಫಿಕರ್ ಅಲಿ ಭುಟ್ಟೋ ನೇತೃತ್ವದಲ್ಲಿ ಸ್ಥಾಪನೆಯಾಗಿದ್ದ ಪಾಕಿಸ್ತಾನ್ ಪೀಪಲ್ಸ್ ಪಾರ್ಟಿ ಸಾಕಷ್ಟು ಸ್ಥಾನ ಗಳಿಸಿತ್ತು. ಕೇಂದ್ರದಲ್ಲಿ ಸರಕಾರ ರಚಿಸಲು ಬಹುಮತ ಹೊಂದಿದ್ದರೂ ಅವಾಮಿ ಲೀಗ್ ಪಕ್ಷಕ್ಕೆ ಅವಕಾಶ ನೀಡಲಿಲ್ಲ. ಭುಟ್ಟೋ ಮತ್ತು ಯಾಹ್ಯಾ ಖಾನ್ ಸೇರಿಕೊಂಡು ಸಂಚು ನಡೆಸಿ ಮುಜಿಬುರ್ ರೆಹಮಾನ್ ಬದಲಿಗೆ ಭುಟ್ಟೋನನ್ನು ಪ್ರಧಾನಿ ಪಟ್ಟಕ್ಕೇರಿಸಿದ ನಂತರ ಪೂರ್ವ ಪಾಕಿಸ್ತಾನದ ಮೇಲೆ ದಬ್ಬಾಳಿಕೆ ಪ್ರಾರಂಭವಾಯಿತು. ಪ್ರಜಾಪ್ರಭುತ್ವ ಹೋರಾಟವನ್ನು ಸೇನೆಯ ನೆರವಿನಿಂದ ದಮನ ಮಾಡಲು ಕ್ರಮ ಕೈಗೊಳ್ಳಲಾಯಿತು.

ಇದೊಂದು ಪ್ರಜಾಪ್ರಭುತ್ವದ ಕೊಲೆಯಾಗಿತ್ತು. ೧೯೭೧ರಲ್ಲಿ ಚುನಾವಣೆಗಳ ನಂತರ ಪಾಕಿಸ್ತಾನದ ಅಧ್ಯಕ್ಷ ಜನರಲ್ ಯಾಹ್ಯಾ ಖಾನ್ ಪ್ರಾರಂಭಿಸಿದ ಹಿಂಸಾಚಾರದಲ್ಲಿ ಸುಮಾರು ೩ ಮಿಲಿಯ ಜನ ಸಾವಿಗೀಡಾದರು, ೩,೦೦,೦೦೦ ಸ್ತ್ರೀಯರ ಮಾನಭಂಗವಾಯಿತು. ಹೆಚ್ಚುಕಡಿಮೆ ೧೦ ಮಿಲಿಯ ಜನ ನಿರಾಶ್ರಿತರಾಗಿ ಗಡಿ ದಾಟಿ ಭಾರತಕ್ಕೆ ಬಂದರು. ಇದು ಭಾರತಕ್ಕೆ ಆರ್ಥಿಕವಾಗಿ ಬಹುದೊಡ್ಡ ಹೊರೆಯಾಯಿತು. ದಬ್ಬಾಳಿಕೆಯನ್ನು ನಿಲ್ಲಿಸಿ ಸಮಸ್ಯೆಯನ್ನು ಸಂಧಾನದ ಮೂಲಕ ಇತ್ಯರ್ಥಗೊಳಿಸಬೇಕೆಂದು ಭಾರತ ಕರೆ



ರಿಚರ್ಡ್ ನಿಕ್ಸನ್

ನೀಡಿತು. ಚುನಾವಣೆಯಲ್ಲಿ ಜಯ ಗಳಿಸಿದ್ದ ಶೇಖ್ ಮುಜಿಬುರ್ ರೆಹಮಾನರ ಅವಾಮಿ ಲೀಗಿಗೆ ಅಧಿಕಾರ ವಹಿಸಿಕೊಡಬೇಕೆಂದು ಒತ್ತಾಯಪಡಿಸಿತು. ಭಾರತಕ್ಕೆ ನಿರಾಶ್ರಿತರ ಸಮಸ್ಯೆ ಆರ್ಥಿಕವಾಗಿ ಬಹುದೊಡ್ಡ ಹೊರೆಯಾಯಿತು. ಪಾಕಿಸ್ತಾನದ ಮೇಲೆ ಒತ್ತಡ ತರುವಂತೆ ಭಾರತ ಅಂತರರಾಷ್ಟ್ರೀಯ ಸಮುದಾಯವನ್ನು, ವಿಶ್ವಸಂಸ್ಥೆಯನ್ನು ಕೋರಿತು. ಪಾಕಿಸ್ತಾನದೊಂದಿಗೆ ಅತ್ಯಂತ ನಿಕಟವಾದ ಮೈತ್ರಿ ಹಾಗೂ ಮಿಲಿಟರಿ ಸಂಬಂಧಗಳನ್ನು ಹೊಂದಿದ್ದ ಅಮೆರಿಕ ಪಾಕಿಸ್ತಾನಿ ಸರ್ವಾಧಿಕಾರದ ಪರ ಧೋರಣೆ ತಳೆಯಿತು. ಪ್ರಜಾಪ್ರಭುತ್ವವನ್ನು ಎತ್ತಿ ಹಿಡಿಯುವುದರಲ್ಲಿ ಅಗ್ರಗಣ್ಯ ಎನಿಸಿಕೊಂಡಿದ್ದ ಅಮೆರಿಕ ಅದರ ಕೊಲೆಗೆ ಬೆಂಬಲ ನೀಡಿತು. ಆಗ ಅಮೆರಿಕದ ಅಧ್ಯಕ್ಷರಾಗಿದ್ದ ರಿಚರ್ಡ್ ನಿಕ್ಸನ್ ಬಹಿರಂಗವಾಗಿಯೇ ಪಾಕಿಸ್ತಾನದ ಪಕ್ಷ ವಹಿಸಿ, ಪೂರ್ವ ಪಾಕಿಸ್ತಾನದ ಜನತೆಯ ಹೋರಾಟವನ್ನು ಪ್ರತ್ಯೇಕವಾದಿ ಚಳವಳಿ ಎಂದು ಕರೆದರು. ಯಾಹ್ಯಾ ಖಾನ್‌ನ ದಬ್ಬಾಳಿಕೆಯನ್ನು



ಸಮರ್ಥಿಸಿದರು. ಪಾಕಿಸ್ತಾನದೊಂದಿಗಿನ ನಿಕಟ ಸಂಬಂಧದ ಜೊತೆಗೆ ಯಾಹ್ಯಾ ಖಾನ್ ಅಮೆರಿಕಕ್ಕೆ ಚೀಣಾದೊಂದಿಗೆ ಸಂಬಂಧಗಳನ್ನು ಸ್ಥಾಪಿಸಲು ನೆರವಾಗಿದ್ದ. ರಹಸ್ಯವಾದ ಮುತ್ಸದ್ದಿತನಕ್ಕೆ ಅನುವು ಮಾಡಿಕೊಟ್ಟಿದ್ದ. ಅಮೆರಿಕ ಯಾಹ್ಯಾ ಖಾನ್‌ಗೆ ದೃಢವಾದ ಬೆಂಬಲ ನೀಡಲು ಅದೂ ಒಂದು ಕಾರಣವಾಗಿತ್ತು.

ಭಾರತ ಉಪಖಂಡದಲ್ಲಿ ಯುದ್ಧದ ಕಾರ್ಮೋಡ ಕವಿದಿತ್ತು. ಮೂರನೆಯ ಭಾರತ – ಪಾಕಿಸ್ತಾನ ಯುದ್ಧದ ಸೂಚನೆ ಎದ್ದು ಕಾಣುತ್ತಿತ್ತು. ಭಾರತದ ಪ್ರಧಾನಿ ಇಂದಿರಾ ಗಾಂಧಿ ಸ್ವತಃ ಅಮೆರಿಕಕ್ಕೆ ಭೇಟಿ ನೀಡಿ ಪರಿಸ್ಥಿತಿಯನ್ನು ವಿವರಿಸಿದರೂ ಪ್ರಯೋಜನ ವಾಗಲಿಲ್ಲ. ಪಶ್ಚಿಮ ರಾಷ್ಟ್ರಗಳು ಅಮೆರಿಕದ ಮರ್ಜಿಯನ್ನು ಅನುಸರಿಸಿ ಭಾರತದ ಮೊರೆಯನ್ನು ಕಿವಿಯ ಮೇಲೆ ಹಾಕಿಕೊಳ್ಳಲೇ ಇಲ್ಲ. ದಿನೇದಿನೇ ಪರಿಸ್ಥಿತಿ ಉಲ್ಬಣಗೊಳ್ಳುತ್ತಿತ್ತು. ಭಾರತ ಅಗತ್ಯವಾದ ಸೈನಿಕ ಕಾರ್ಯಾಚರಣೆಯನ್ನು ಕೈಗೊಳ್ಳುವುದು ಅನಿವಾರ್ಯವಾಗಿತ್ತು. ಭಾರತ ಏಕಾಂಗಿಯಾಗಿರಲಿಲ್ಲ. ಭಾರತದ ನಿಲುವಿಗೆ ಸೋವಿಯತ್ ಒಕ್ಕೂಟ ಮತ್ತು ಸಮಾಜವಾದಿ ದೇಶಗಳ, ಅಲಿಪ್ತ ರಾಷ್ಟ್ರಗಳ ಬೆಂಬಲ ಇತ್ತು. ಈ ಸನ್ನಿವೇಶದಲ್ಲಿ ಭಾರತ ಸೋವಿಯತ್ ಒಕ್ಕೂಟದೊಂದಿಗೆ ಇಪ್ಪತ್ತು ವರ್ಷಗಳ ಅವಧಿಗೆ ೧೯೭೧ರ ಆಗಸ್ಟ್ ೯ರಂದು ಶಾಂತಿ, ಮೈತ್ರಿ ಮತ್ತು ಸಹಕಾರ ಒಪ್ಪಂದಕ್ಕೆ ಸಹಿ ಹಾಕಿತು. ಇದು ಯಾವ ಕಾರಣಕ್ಕೂ ಮಿಲಿಟರಿ ಕೌಲು ಆಗಿರಲಿಲ್ಲ. ಈ ಕೌಲಿನಿಂದ ಭಾರತಕ್ಕೆ ತುಂಬ ಅನುಕೂಲವಾಯಿತು. ಇದರಿಂದ ಭಾರತ – ಅಮೆರಿಕ ಸಂಬಂಧಗಳು ಮತ್ತಷ್ಟು ಹಳಸಿಕೊಂಡವು. ಪಶ್ಚಿಮ ರಾಷ್ಟ್ರಗಳು ಕೌಲನ್ನು ಟೀಕಿಸಿದುವು. ಭಾರತ ಅಲಿಪ್ತತೆಯನ್ನು ಕಳೆದುಕೊಂಡಿದೆ ಎಂದು ಆಪಾದನೆ ಮಾಡಿದುವು. ೧೯೭೧ರ ಡಿಸೆಂಬರ್ ೩ರಂದು ಭಾರತ – ಪಾಕಿಸ್ತಾನ ಯುದ್ಧ ಪ್ರಾರಂಭವಾಯಿತು. ಅಮೆರಿಕದ ಪೂರ್ಣ ಬೆಂಬಲ ಪಡೆದಿದ್ದ ಯಾಹ್ಯಾ ಖಾನ್ ಭಾರತದ ಮೇಲೆ ವಿಮಾನ ದಾಳಿ ಪ್ರಾರಂಭಿಸಿದ್ದ. ಈ ಯುದ್ಧದ ಪರಿಣಾಮವಾಗಿ ಪೂರ್ವ ಪಾಕಿಸ್ತಾನ ಪ್ರತ್ಯೇಕಗೊಂಡು ಸ್ವತಂತ್ರ ರಾಷ್ಟ್ರ ವಾಯಿತು. ಹೊಸ ಸ್ವತಂತ್ರ ರಾಷ್ಟ್ರ ಬಂಗ್ಲಾದೇಶ ಉದಯವಾಯಿತು. ವಿಮೋಚನೆಗಾಗಿ ಸಶಸ್ತ್ರ ಹೋರಾಟ ಪ್ರಾರಂಭಿಸಿದ್ದ ಮುಕ್ತವಾಹಿನಿಗೆ ಭಾರತದ ಸೇನೆ ಬೆಂಬಲ ನೀಡಿತು. ಪೂರ್ವ ಬಂಗಾಳ ವಿಮೋಚನೆಯಾದ ನಂತರ ಸ್ವಯಂಪ್ರೇರಣೆಯಿಂದ ಭಾರತ ಯುದ್ಧಸ್ತಂಭನ ವನ್ನು ಘೋಷಿಸಿತು. ಅಮೆರಿಕ ಅಧ್ಯಕ್ಷ ನಿಕ್ಸನ್ ಭಾರತ ಪಾಕಿಸ್ತಾನದ ಮೇಲೆ ಆಕ್ರಮಣ ನಡೆಸಿದೆ ಎಂದು ಘೋಷಿಸಿದರು. ವಿಶ್ವಸಂಸ್ಥೆಯ ಭದ್ರತಾ ಮಂಡಳಿಯಲ್ಲಿ ಭಾರತವನ್ನು ಆಕ್ರಮಣಕಾರಿ ಎಂದು ಕರೆದು ಒಡನೆಯೇ ತುರ್ತು ಕ್ರಮ ಕೈಗೊಳ್ಳಬೇಕೆಂದು ಒತ್ತಾಯ ಪಡಿಸುವ ನಿರ್ಣಯವನ್ನು ಪಾಶ್ಚಾತ್ಯ ದೇಶಗಳು ಮಂಡಿಸಿದ್ದುವು. ಸೋವಿಯತ್ ಒಕ್ಕೂಟದ ವೀಟೋದಿಂದಾಗಿ ಆ ನಿರ್ಣಯ ಅಂಗೀಕಾರವಾಗಲಿಲ್ಲ. ಅಮೆರಿಕ ಯುದ್ಧದಲ್ಲಿ ಹಸ್ತಕ್ಷೇಪ ಮಾಡಲು ಸಜ್ಜಾಗಿತ್ತು. ಬಂಗಾಳ ಕೊಲ್ಲಿಗೆ ಅಮೆರಿಕದ ಸಪ್ತಮ ನೌಕಾದಳದ 'ಎಂಟರ್‌ಪ್ರೈಸ್' ಯುದ್ಧ ನೌಕೆಯು ಆಗಮಿಸಿತ್ತು. ಪೂರ್ವ ಬಂಗಾಳದಲ್ಲಿದ್ದ ಪಾಕಿಸ್ತಾನಿ ಸೇನೆ ಭಾರತಕ್ಕೆ ಶರಣಾಯಿತು. ಈ ಯುದ್ಧಾನಂತರ ಅಮೆರಿಕ ಭಾರತದ ಮೇಲೆ ಸೇಡು ತೀರಿಸಿಕೊಳ್ಳಲು ಭಾರತಕ್ಕೆ ನೀಡುತ್ತಿದ್ದ ನೆರವಿನ ಪ್ರಮಾಣವನ್ನು ಸಾಕಷ್ಟು ಕಡಿಮೆ ಮಾಡಿತು.



ಸಿಮ್ಲಾ ಒಪ್ಪಂದದ ನಂತರ ಇಂದಿರಾ ಗಾಂಧಿ ಮತ್ತು ಭುಟ್ಟೋ

ಈ ಯುದ್ಧ ಮುಗಿದ ಮೇಲೆ ಪಾಕಿಸ್ತಾನದ ಪ್ರಧಾನಿ ಭುಟ್ಟೋ ಮತ್ತು ಭಾರತದ ಪ್ರಧಾನಿ ಶ್ರೀಮತಿ ಇಂದಿರಾ ಗಾಂಧಿ ಸಿಮ್ಲಾದಲ್ಲಿ ಭೇಟಿಯಾಗಿ ಮಾತುಕತೆ ನಡೆಸಿದರು. ಕಾಶ್ಮೀರ ಸಮಸ್ಯೆಯನ್ನು ಒಳಗೊಂಡಂತೆ ಎಲ್ಲ ವಿವಾದಾತ್ಮಕ ಸಮಸ್ಯೆಗಳನ್ನೂ ಮೂರನೆಯವರ ಮಧ್ಯಪ್ರವೇಶವಿಲ್ಲದೆ ನೇರವಾದ ಪರಸ್ಪರ ಮಾತುಕತೆಗಳಿಂದ ಬಗೆಹರಿಸಿಕೊಳ್ಳಬೇಕೆಂದು ಒಪ್ಪಂದವಾಯಿತು. ಇದೇ ಸಿಮ್ಲಾ ಒಪ್ಪಂದವೆಂದು ಹೆಸರುವಾಸಿಯಾಯಿತು. ಅನಂತರ ಹಲವು ಸಲ ನೇರವಾದ ಮಾತುಕತೆಗಳು ನಡೆದಿದ್ದರೂ ಪ್ರಯೋಜನ ವೇನಾಗಿಲ್ಲ. ಭಾರತ – ಪಾಕಿಸ್ತಾನ ಸಂಬಂಧಗಳು ಇಂದೂ ಕೂಡ ಸಮಸ್ಯೆಯಾಗಿಯೇ ಉಳಿದಿವೆ. ಅಸ್ತಿತ್ವಕ್ಕೆ ಬಂದ ಬಂಗ್ಲಾದೇಶದ ಪ್ರಧಾನಿಯಾಗಿ ಅಧಿಕಾರ ವಹಿಸಿಕೊಂಡ ಅವಾಮಿ ಲೀಗ್‌ನ ನಾಯಕ ಶೇಖ್ ಮುಜಿಬುರ್ ರೆಹಮಾನ್ ಕೆಲ ದಿನಗಳಾದ ನಂತರ ಕ್ಷಿಪ್ರಕ್ರಾಂತಿಗೆ ಬಲಿಯಾದರು. ಅವರ ಕುಟುಂಬದ ಮೇಲೆ ನಡೆದ ದಾಳಿಯಲ್ಲಿ ಹಲವು ಸದಸ್ಯರು ಬಲಿಯಾದರು. ಹೊಸದಾಗಿ ಉದಯಿಸಿದ ದೇಶಕ್ಕೆ ಇದೊಂದು ದೊಡ್ಡ ಆಘಾತ. ಬಂಗ್ಲಾದೇಶದಲ್ಲೂ ಮಿಲಿಟರಿ ಆಡಳಿತ ಬಂದಿತು. ಈಗ ಮುಜಿಬುರ್ ರೆಹಮಾನ್‌ರ ಮಗಳು ಶೇಖ್ ಹಸೀನ ಬಂಗ್ಲಾದೇಶದ ಪ್ರಧಾನಿಯಾಗಿದ್ದಾರೆ. ಅವರ ನೇತೃತ್ವದಲ್ಲಿರುವ ಅವಾಮಿ ಲೀಗ್ ಪಕ್ಷ ಅಧಿಕಾರದಲ್ಲಿದೆ. ಭಾರತ ದೊಂದಿಗೆ ಮೈತ್ರಿ ಸಂಬಂಧಗಳು ಇದ್ದಾಗ್ಯೂ ಎರಡೂ ದೇಶಗಳ ಮಧ್ಯೆ ಅಕ್ರಮ ವಲಸೆಗಾರರ ಸಮಸ್ಯೆ ಇದೆ.

*(ಮುಂದುವರಿಯುವುದು)*

**ಸಿ. ಆರ್. ಕೃಷ್ಣರಾವ್**
'ಚೌಬೀನ', ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ, ೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು – ೫೬೦ ೦೮೫

# ಗುರು–ಶುಕ್ರ ಸಮಾಗಮ

**ಮ**ಳೆ, ಗುಡುಗು, ಮಿಂಚುಗಳ ಆರ್ಭಟದಲ್ಲಿ ನಭಾವಲೋಕನಕ್ಕೆ ರಜಾ ಎಂದುಕೊಳ್ಳಬಹುದು. ಆದರೆ, ಮೋಡಗಳ ನಡುವೆ ಮಧ್ಯದಲ್ಲೆಲ್ಲೋ ಎಂದೋ ಒಂದು ಸಂಜೆ ಸಣ್ಣ ಕಿಂಡಿ ಏನಾದರೂ ಕಾಣಬಹುದು. ಕ್ಷೀಣ ನಕ್ಷತ್ರಗಳು, ಆಕಾಶಗಂಗೆಯ ಸೊಬಗು ಅಲ್ಲದಿದ್ದರೂ ಗ್ರಹಗಳ ಓಟದ ಸ್ಪರ್ಧೆಯಂತೂ ಕಾಣಬಹುದು. ಆದ್ದರಿಂದ, ಸಂಜೆಯ ಆಕಾಶದಲ್ಲಿ, ಆಗ್ನೇಯ ದಿಕ್ಕಿನತ್ತ ಕಣ್ಣು ಹಾಯಿಸಿ. ವೃಶ್ಚಿಕ ಮತ್ತು ಧನು ರಾಶಿಗಳು ಕಾಣಬೇಕಷ್ಟೇ. ಅಲ್ಲಿ ಆಕಾಶಗಂಗೆಯೂ ಇದೆ. ದಕ್ಷಿಣದ ಅಂಚಿಗೆ ಕಿನ್ನರ (ಸೆಂಟಾರೆಸ್) ಮತ್ತು ತ್ರಿಶಂಕು (ಸದರ್ನ್‌ಕ್ರಾಸ್) ಮೂಲಕ ಆಕಾಶಗಂಗೆಯ ಇನ್ನೊಂದು ಭಾಗ ಹಾದುಹೋಗುತ್ತದೆ. ಈಶಾನ್ಯದಲ್ಲಿ ರಾಜಹಂಸ (ಸಿಗ್ನಸ್) ಮತ್ತು ವೀಣಾ (ಲೈರಾ) ನಡುವೆ ಇನ್ನೂ ಒಂದು ಭಾಗವಿದೆ. ಇವನ್ನೆಲ್ಲಾ ಕಾಣುವುದು ಸಾಧ್ಯವಾಗಲಾರದು.

ತೆಳ್ಳನೆಯ ಮೋಡ ಇರುವಾಗಲೂ ಕಾಣಬಹುದಾದದ್ದನ್ನು ಗಮನಿಸೋಣ. ನೆತ್ತಿಯಿಂದ ತುಸು ದಕ್ಷಿಣಕ್ಕೆ ಕಾಣುವ ಎರಡು ಚುಕ್ಕೆಗಳು ಮಂಗಳ ಮತ್ತು ಶನಿ. ತಿಂಗಳುದ್ದಕ್ಕೂ ಇವುಗಳನ್ನು ಗಮನಿಸುತ್ತಾ ಬನ್ನಿ. ಅವುಗಳ ಅಂತರ ಕ್ರಮೇಣ ಕಡಿಮೆಯಾಗುತ್ತಾ ಬರುವುದು. ತಿಂಗಳ ಕೊನೆಗೆ ಕನಿಷ್ಠ ಅಂದರೆ ಸುಮಾರು ಮೂರು ಡಿಗ್ರಿಗಳಷ್ಟಾಗುವುದು. ಈ ಎರಡು ಚುಕ್ಕೆಗಳನ್ನು ಗುರುತಿಸಲು ಇನ್ನೂ ಒಂದು ಉಪಾಯವಿದೆ. ೩ರಂದು ಸಂಜೆ ಚಂದ್ರನ ಪಕ್ಕ ಇರುವ ಚುಕ್ಕೆ ಮಂಗಳ; ೪ರಂದು ಚಂದ್ರನ ಪಕ್ಕ ಇರುವುದು ಶನಿ. ಹೀಗೆ ಗುರುತುಮಾಡಿಕೊಳ್ಳಿ. ಚಂದ್ರ ಮುಂದಕ್ಕೆ ಓಡಿಹೋದಮೇಲೂ ಈ ಚುಕ್ಕೆಗಳು ಅಲ್ಲಿಯೇ ಇರುತ್ತವೆ. ಅಂದರೆ ಅವುಗಳ ನಡುವೆ ಸುಮಾರು ೧೨ ಡಿಗ್ರಿ ಅಂತರವಿದೆ ಎಂದಾಯಿತು. (ಇದು ಚಂದ್ರ ಒಂದು ದಿನದಲ್ಲಿ ಕ್ರಮಿಸುವ ಕೋನ). ತಿಂಗಳ ಕೊನೆಗೆ ಚುಕ್ಕೆಗಳು ಹತ್ತಿರ ಬಂದಿರುತ್ತವೆ ಎಂಬುದನ್ನು ಗಮನಿಸಲು ಇದು ಸುಲಭ ಉಪಾಯ. ೩೧ರಂದು ರೇಖಾ ಚಂದ್ರ ಪುನಃ ಇವನ್ನು ಸಮೀಪಿಸಿದಾಗ ನೀವು ಗುರುತು ಮಾಡಿದ್ದುದು ಸರಿಯೇ ಎಂದು ಪರೀಕ್ಷಿಸಬಹುದು.




ಇದೇ ರೀತಿ ಮುಂಜಾವಿನಲ್ಲಿಯೂ ಎರಡು ಚುಕ್ಕೆಗಳು ಒಂದನ್ನೊಂದು ಸಮೀಪಿಸಿ ದೂರವಾಗುವುವು. ಎರಡು ತಿಂಗಳ ಮುಂಚೆ ಸಂಜೆಯ ಆಕಾಶದಲ್ಲಿದ್ದ ಗುರು ಈಗ ಮುಂಜಾವಿನಲ್ಲಿ ಕಾಣುತ್ತಿದೆ. ಇನ್ನೊಂದು ಪ್ರಖರ ಗ್ರಹ ಶುಕ್ರ. ದಿನೇ ದಿನೇ ಶುಕ್ರ ಕೆಳಗಿಳಿದಂತೆ, ಗುರು ಮೇಲೇರಿದಂತೆ ಕಾಣುತ್ತದೆ. ಇವೆರಡರ ನಡುವಿನ ಕೋನ ೧೮ರಂದು ಒಂದು ಡಿಗ್ರಿಗಿಂತಲೂ ಕಡಿಮೆ ಇರುತ್ತದೆ.



**ಆಗಸ್ಟ್ ೧೮ರ ಮುಂಜಾವು**
**ಗುರು–ಶುಕ್ರ ನಡುವೆ ೦.೨ ಡಿಗ್ರಿ ಅಂತರ**

ಛಾಯಾಗ್ರಹಣಕ್ಕೆ ಇದು ಅಪೂರ್ವ ಅವಕಾಶ. ೨೪ರಂದು ರೇಖಾಚಂದ್ರ ಇವನ್ನು ಸಮೀಪಿಸಿದಾಗ ಗುರುಗ್ರಹ ದಿಗಂತದಿಂದ ಸ್ವಲ್ಪ ಮೇಲೆ ಇರುತ್ತದೆ.

ಇನ್ನೊಂದು ಗ್ರಹ ಬುಧ, ತಿಂಗಳ ಕೊನೆಯ ಭಾಗದಲ್ಲಿ ಸಂಜೆ ಪಶ್ಚಿಮದ ಅಂಚಿನಲ್ಲಿ ಕಾಣಿಸುತ್ತದೆ. ೨೬ರಂದು ಅದು ರೇಖಾ ಚಂದ್ರದ ಪಕ್ಕದಲ್ಲಿ ಇರುತ್ತದೆ.

ಆಗಸ್ಟ್ ಎಂದರೆ ಪರ್ಸಿಯೈಡ್ ಉಲ್ಕಾವೃಷ್ಟಿಯ ನೆನಪಾಗುತ್ತದೆ. ಆಗಸ್ಟ್ ೧೨ರಂದು ಉಲ್ಕೆಗಳ ಸಂಖ್ಯೆ ಗರಿಷ್ಠವಾಗಲಿದೆ. ಆಗಸ್ಟ್ ೧೦ರ ಮುಂಜಾವಿನಿಂದಲೇ ಆರಂಭಿಸಿ, ಮುಂದಿನ ಮೂರೂ ದಿನಗಳಲ್ಲಿ ಈಶಾನ್ಯ ದಿಕ್ಕನ್ನು ಗಮನಿಸಿ. ಲೆಕ್ಕದ ಪ್ರಕಾರ ಗಂಟೆಗೆ ೬೦ರಿಂದ ೧೦೦ ಉಲ್ಕೆಗಳು ಬೀಳಬಹುದು. ಅಂದರೆ ನಿಮಿಷಕ್ಕೆ ಒಂದು. ಆದರೆ ಹುಣ್ಣಿಮೆ ಚಂದ್ರನ ಬೆಳಕು, ಮೋಡಗಳು – ಈ ಎಲ್ಲ ಪ್ರತಿಕೂಲ ಅಂಶಗಳಿಂದ ಕ್ಷೀಣವಾದ ಉಲ್ಕೆಗಳು ಕಾಣದೆ ಗಂಟೆಗೆ ೧೦–೧೫ ಮಾತ್ರ ಕಾಣಬಹುದು.

ಈ ತಿಂಗಳಲ್ಲಿ ಚಂದ್ರ ಶನಿಗ್ರಹವನ್ನು ಮರೆಮಾಡುವ ಅವಕಾಶಗಳಿವೆ. ೪ರಂದು ಮತ್ತು ೩೧ರಂದು ನಡೆಯುವ ಈ ಆಚ್ಛಾದನೆಗಳು ನಮ್ಮ ಹಗಲಿನಲ್ಲಿ ನಡೆಯುವುದರಿಂದ ನೋಡುವ ಅವಕಾಶವಿಲ್ಲ. ಈ ತಿಂಗಳ ಹುಣ್ಣಿಮೆ ೧೦ರ ಮಧ್ಯರಾತ್ರಿ ೨೩:೩೯ಕ್ಕೆ. ಅದಕ್ಕೆ ೨೬ ನಿಮಿಷ ಮುಂಚೆ ಭೂಮಿ–ಚಂದ್ರರ ಅಂತರ ಕನಿಷ್ಠ ವಾಗುವುದು. ಆದ್ದರಿಂದ ಉಬ್ಬರ ಇಳಿತಗಳ ಪ್ರಮಾಣ ಹೆಚ್ಚಿರುತ್ತದೆ. ಆದರೆ, ಮಾನ್ಸೂನ್ ಆರ್ಭಟದಲ್ಲಿ ಅಲೆಗಳ ಎತ್ತರ ಹೆಚ್ಚುವುದು ಗುರುತಿಸಲಾಗುತ್ತದೆಯೇ ? ಪರೀಕ್ಷಿಸಿ ನೋಡಬೇಕು.

**ಆಗಸ್ಟ್ ತಿಂಗಳ ಖಗೋಳ ದಿನಚರಿ**

| | |
|---|---|
| ೩ | ಸಂಜೆ ಮಂಗಳ–ಚಂದ್ರ ನಡುವೆ ೩ ಡಿಗ್ರಿ ಅಂತರ* |
| ೪ | ಸಂಜೆ ಶನಿ–ಚಂದ್ರ ನಡುವೆ ೩ ಡಿಗ್ರಿ ಅಂತರ* |
| ೮ | ಚಾಂದ್ರಮಾಸದ ಮೊದಲ ಪಾದ (ಚಂದ್ರಾಸ್ತ ನಡುರಾತ್ರಿಗೆ) ಬುಧ ಗ್ರಹದ ಯುತಿ |
| ೧೦ | ಚಂದ್ರ ಪುರಭೂ ಬಿಂದುವಿನಲ್ಲಿ ೨೩:೧೩ಕ್ಕೆ ಹುಣ್ಣಿಮೆ ೨೩:೩೯ಕ್ಕೆ |
| ೧೧ರಿಂದ ೧೩ | ಮುಂಜಾವು ಪರ್ಸಿಯೈಡ್ ಉಲ್ಕಾವೃಷ್ಟಿ* |
| ೧೬ | ಚಾಂದ್ರಮಾಸದ ಕೊನೆಯ ಪಾದ |
| ೧೮ | ಮುಂಜಾವು ಗುರು–ಶುಕ್ರ ನಡುವೆ ೦.೨ ಡಿಗ್ರಿ ಅಂತರ* |
| ೨೩ | ಮುಂಜಾವು ಗುರು–ಚಂದ್ರ ನಡುವೆ ೬ ಡಿಗ್ರಿ ಅಂತರ* |
| ೨೪ | ಮುಂಜಾವು ಶುಕ್ರ–ಚಂದ್ರ ನಡುವೆ ೫ ಡಿಗ್ರಿ ಅಂತರ* |
| ೨೫ | ಅಮಾವಾಸ್ಯೆ ೧೯:೪೩ಕ್ಕೆ |
| ೨೬ | ಸಂಜೆ ಮಂಗಳ–ಶನಿ ನಡುವೆ ೩.೬ ಡಿಗ್ರಿ ಅಂತರ* |
| ೩೧ | ಸಂಜೆ ಶನಿ–ಚಂದ್ರ–ಮಂಗಳ ಸಣ್ಣ ಗುಂಪು* |

(* ಛಾಯಾಗ್ರಹಣಕ್ಕೆ ಸದವಕಾಶ)


**ಡಾ|| ಬಿ. ಎಸ್. ಶೈಲಜಾ**
ಜವಾಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು – ೫೬೦ ೦೦೧

ಡಿ. ಡಿ. ಕೋಸಾಂಬಿ

ಅನುವಾದ : ಟಿ. ವೆಂಕಟೇಶಮೂರ್ತಿ



# ಸಾಮೂಹಿಕ ಚಳವಳಿಯಲ್ಲಿ ನಾಯಕತ್ವದ ಪಾತ್ರ

"ಕೇವಲ ಚಳವಳಿಗಾರರು" ಎಷ್ಟರ ಮಟ್ಟಿಗೆ ಕ್ರಾಂತಿಯ ಮಾರ್ಗವನ್ನು ನಿರ್ಧರಿಸುತ್ತಾರೆ? ಜಾಗರೂಕತೆಯಿಂದ ಸರಿಯಾದ ಸಮಯದಲ್ಲಿ ಕೆಲವರನ್ನು ಕೊಲ್ಲುವುದರಿಂದ ಇಂತಹ ಎಲ್ಲ ಕ್ರಾಂತಿಗಳನ್ನು ಜರುಗಿಸಲು ಸಾಧ್ಯವೇ? ಅಥವಾ ಒಂದು ವ್ಯವಸ್ಥೆಯಲ್ಲಿನ ಒಳ ವೈರುಧ್ಯಗಳು ಕಾಣಿಸಿಕೊಂಡಾಗ ಆ ವ್ಯವಸ್ಥೆಯ ಸ್ವರೂಪದ ಬದಲಾವಣೆ ಅನಿವಾರ್ಯವೇ? ನಾಯಕತ್ವವೂ ಅನಿವಾರ್ಯವೇ? ಗತಿತಾರ್ಕಿಕವಾದವು ನಮ್ಮನ್ನು ಎರಡನೆಯ ತೀರ್ಮಾನದ ಕಡೆಗೆ ಕೊಂಡೊಯ್ಯುತ್ತದೆ. ಆದರೆ, ಗತಿತರ್ಕದ ದೃಷ್ಟಿಕೋನದಿಂದಲೂ ಈ ಅನಿವಾರ್ಯತೆಯ ಸ್ವರೂಪವನ್ನು ಸೂಕ್ಷ್ಮವಾಗಿ ಪರೀಕ್ಷಿಸಬೇಕು.

ಒಂದು ಸಂಗತಿಯಲ್ಲಿ ಪರಿಮಾಣ ಬದಲಾದರೆ ಗುಣಾತ್ಮಕವಾಗಿಯೂ ಅದು ಅನಿವಾರ್ಯವಾಗಿ ಬದಲಾಗುತ್ತದೆಂದು ಈ ದೃಷ್ಟಿಕೋನ ಪ್ರತಿಪಾದಿಸುತ್ತದೆ. ನೀರನ್ನು ಸತತವಾಗಿ ತಂಪಾಗಿಸಿದಾಗ ಅದು ದ್ರವವಾಗಿ ಉಳಿಯುವುದಿಲ್ಲ. ಬದಲಾಗಿ ಸಾಕಷ್ಟು ಉಷ್ಣಾಂಶವನ್ನು ಕಳೆದುಕೊಳ್ಳುವುದರಿಂದ ಮಂಜುಗಡ್ಡೆಯಾಗಿ ಪರಿವರ್ತಿತವಾಗುತ್ತದೆ. ಅದೇ ದ್ರವ ಸಾಕಷ್ಟು ಉಷ್ಣಾಂಶವನ್ನು ಹೀರಿಕೊಂಡಾಗ ಅನಿಲವಾಗಿ, ಆವಿಯಾಗಿ ಪರಿವರ್ತಿತವಾಗುತ್ತದೆ. ಹಾಗೆಯೇ ಯಾವುದೇ ಸಾಮಾಜಿಕ ಉತ್ಪಾದನೆಯ ರೂಪದಲ್ಲಿ ಒಳ ವೈರುಧ್ಯಗಳು ಕಾಣಿಸಿಕೊಂಡಾಗ ಅದರ ಸಾಮಾಜಿಕ ರೂಪ ಬದಲಾವಣೆಯೂ ಅನಿವಾರ್ಯ. ಇದು ಸಾಮಾನ್ಯ ವಿಷಯ, ಆದರೂ ಸಂದಿಗ್ಧ ಸಂದರ್ಭಗಳಲ್ಲಿ ಮತ್ತಷ್ಟು ಪರೀಕ್ಷೆ ಅಗತ್ಯ.

ಮೊದಲನೆಯದಾಗಿ, ಪದಾರ್ಥದ ಕನಿಷ್ಠ ಮೌಲ್ಯವೊಂದಿರುತ್ತದೆ. ಅದಕ್ಕಿಂತ ಕಡಿಮೆ ಇದ್ದಾಗ ಯಾವ ಬದಲಾವಣೆಯೂ ಸಾಧ್ಯವಿಲ್ಲ. ಎರಡನೆಯದಾಗಿ, ಈ ಕನಿಷ್ಠ ಮೌಲ್ಯದ ವ್ಯಾಪ್ತಿಯನ್ನೂ ಆಶ್ಚರ್ಯ ಎನಿಸುವ ಮಟ್ಟಿಗೆ ಮೀರಲು ಸಾಧ್ಯ. ಆದರೆ ಇಂತಹ ಸಂಭವವು ಉಳಿದಂತೆ ಗಮನಾರ್ಹವಲ್ಲದ ಕೆಲವು ಪರಿಸ್ಥಿತಿಗಳಿಗೆ ಒಳಪಟ್ಟಿರುತ್ತದೆ. ಒಂದು ಉದಾಹರಣೆ : ನಾವು ದ್ರವಸ್ಥಿತಿಯಲ್ಲಿರುವ ಒಂದು ಲವಣವನ್ನು ಘನೀಕರಿಸಲು ಸಾಧ್ಯವಿಲ್ಲ. ಎಂದರೆ, ದ್ರವವು ಸಾಂದ್ರೀಕೃತ ಸ್ಥಿತಿಯಲ್ಲಿಲ್ಲದಿದ್ದರೆ ಹರಳುಗಳನ್ನು ಸ್ಫಟಿಕವಾಗಿ ಬದಲಾಯಿಸಲು ಅಸಾಧ್ಯ. ಆದರೆ ಸ್ವಲ್ಪ ಜಾಗರೂಕತೆಯಿಂದ ಗಾಢ ದ್ರವವನ್ನು ಪಡೆಯಬಹುದು. ಇದಕ್ಕೆ ಒಂದು ಹರಳನ್ನು ಸೇರಿಸಿದರೆ ಆಶ್ಚರ್ಯಕರ ತೀವ್ರತೆಯಿಂದ ಹರಳುಗಳೂ ಸ್ಫಟಿಕವಾಗಿ ಮಾರ್ಪಡುತ್ತವೆ. ಮೂಲದಲ್ಲಿನ ಸಣ್ಣ ಹರಳು ಸಂತೃಪ್ತ ದ್ರವದ ಗಾಢತೆಯನ್ನು ಗಮನಾರ್ಹವಾಗಿ ಹೆಚ್ಚಿಸುವುದಿಲ್ಲ. ಆದರೂ ಮೂಲ ಹರಳು ಈ ಪ್ರಕ್ರಿಯೆಯಲ್ಲಿ ಅಗತ್ಯ. ಅಷ್ಟೇ ಅಲ್ಲದೆ ಕೆಲವು ವಸ್ತುಗಳು ಹಲವಾರು ಭಿನ್ನ ರೂಪಗಳ ಸ್ಫಟಿಕಗಳಾಗಿರಬಹುದು. ಅಂತಹ ಸಂದರ್ಭಗಳಲ್ಲಿ ಮೂಲದಲ್ಲಿನ ಹರಳು ಸ್ಫಟಿಕೀಕರಣದ ರೂಪವನ್ನು ನಿರ್ಧರಿಸುತ್ತದೆ.

ಈ ಹೋಲಿಕೆ ಸಾಮಾಜಿಕ ಚಳುವಳಿಯೊಂದರ ನಾಯಕತ್ವದ ಸ್ಥಿತಿಯನ್ನು ವಿವರಿಸುತ್ತದೆ ಎಂದು ನನ್ನ ಅನಿಸಿಕೆ. ಒಟ್ಟಾರೆ ಸಮಾಜದ ವಾಸ್ತವಿಕ ಸ್ಥಿತಿ ಕನಿಷ್ಠ ಮಟ್ಟಕ್ಕಿಂತ ಕೆಳಗಿದ್ದಾಗ ಹೆಚ್ಚೇನೂ ಮಾಡಲಾಗುವುದಿಲ್ಲ. ಆದರೆ, ಒಳ್ಳೆಯ ನಾಯಕತ್ವವು ವಾಸ್ತವವಾಗಿ ಕನಿಷ್ಠ ಮಟ್ಟ ಕ್ರಮೇಣ ಮೇಲೇರುವುದನ್ನು ಗುರುತಿಸಿ ಅಪೇಕ್ಷಿತ ಬದಲಾವಣೆಯನ್ನು ಸ್ವಲ್ಪವೇ ಗಾಢತೆಯಿಂದ ತರಬಲ್ಲದು. ನಿರೀಕ್ಷಿತವಾಗಿಯೇ ಸಾಮಾಜಿಕ ಒತ್ತಡಗಳು ಸಾಕಷ್ಟು ಬಲವಾಗಿದ್ದಲ್ಲಿ ಉದಾಸೀನ

**ವರ್ಗ–ಪ್ರತಿಗಾಮಿತ್ವ ಮತ್ತು ವ್ಯಕ್ತಿಪೂಜೆಯನ್ನು ಅರ್ಥ ಮಾಡಿಕೊಳ್ಳುವುದು ಇಡೀ ಜನತೆಯು ಪರಿವರ್ತಿತ ಚಳವಳಿಯಲ್ಲಿ, ಉದಾಹರಣೆಗೆ, ಕ್ರಾಂತಿಯ ನಂತರದ ಸ್ವರಾಜ್ಯ ಹಾಗೂ ರಾಷ್ಟ್ರೀಯ ಯೋಜನೆಗಳಲ್ಲಿ, ಭಾಗವಹಿಸುವುದರಿಂದಲೇ ಸಾಧ್ಯ. ಮತ್ತೊಂದೆಡೆ, ರಾಷ್ಟ್ರೀಯ ಯೋಜನೆಯ ಯಶಸ್ಸು ಮತ್ತು ಅದರ ಪರಿಣಾಮವಾಗಿ ಉತ್ಪಾದನಾ ಪ್ರಮಾಣದ ಹೆಚ್ಚಳ – ಸಮಾಜವಾದಿ ಯೋಜನೆ ಮತ್ತು ಸಮಾಜವಾದಿ ಉತ್ಪಾದನೆ – ನಾಯಕತ್ವದ ಗುಣಮಟ್ಟದ ಬದಲಾವಣೆಗೆ ಕಾರಣವಾಗಬೇಕು. ಅಧಿಕ ಸಂಖ್ಯೆಯಲ್ಲಿ ತರಬೇತಿ ಪಡೆದಿರುವ ತಂತ್ರಜ್ಞರು, ಎಂಜಿನಿಯರ್‌ಗಳು ಮತ್ತು ವಿಜ್ಞಾನಿಗಳಿಂದಾಗಿ ವಿಶ್ವದಲ್ಲೇ ಎರಡನೆಯ ಅತಿ ದೊಡ್ಡ ಕೈಗಾರಿಕಾ ರಾಷ್ಟ್ರವಾಗಿರುವ ಯು.ಎಸ್.ಎಸ್.ಆರ್.ನ ಸ್ಟಾಲಿನೀಕರಣ ತೊಡೆಯುವ ನೀತಿಯನ್ನು ಭಾಗಶಃವಾಗಿಯಾದರೂ ಇದು ವಿವರಿಸುತ್ತದೆ.**



ಅಥವಾ ಕಳಪೆ ನಾಯಕತ್ವದ ಕೊರತೆಯನ್ನು ನೀಗಬಹುದು. ಆದರೆ ಬದಲಾವಣೆಯ ಪೂರ್ಣ ಪ್ರಕ್ರಿಯೆ ಸ್ವಾಭಾವಿಕವಾಗಿಯೇ ಭವಿಷ್ಯದ ಬೆಳವಣಿಗೆಯ ಹಂತದಲ್ಲಿಯೇ ಆಗಬೇಕು.

ರಷ್ಯಾದಲ್ಲಿ ಸಮತಾವಾದದ ಕ್ರಾಂತಿ ಯಶಸ್ವಿಯಾಯಿತಾದರೂ ಶಕ್ತಿಯುತ ಉತ್ಪಾದನಾ ಕೇಂದ್ರವಾಗಿದ್ದ ಜರ್ಮನಿಯಲ್ಲಿ – ಮಾರ್ಕ್ಸ್ ಮತ್ತು ಏಂಗೆಲ್ಸ್‌ರ ನಿರೀಕ್ಷೆಗೆ ವಿರುದ್ಧವಾಗಿ – ಕ್ರಾಂತಿಯು ಏಕೆ ಸೋತಿತು ಎನ್ನುವುದನ್ನು ವಿವರಿಸುವುದು ಈ ತರ್ಕವೇ. ಟ್ರಾಟ್ಸ್ಕಿ ರಷ್ಯಾದ ಕ್ರಾಂತಿ ಚರಿತ್ರೆಯ ಬಗ್ಗೆ ಬರೆಯುತ್ತಾ: "...ಲೆನಿನ್ ರಷ್ಯಾದ ಕ್ರಾಂತಿಯ ಗತಿಗೆ ಕಾರಣ ಪುರುಷರಲ್ಲ... ಚರಿತ್ರೆಯ ವಾಸ್ತವಿಕ ಪ್ರೇರಕಶಕ್ತಿ ಸರಪಣಿಯ ಒಂದು ಭಾಗ ಮಾತ್ರವಾಗಿದ್ದರು. ಆದರೆ ಆ ಸರಪಣಿಯ ಒಂದು ಪ್ರಮುಖ ಕೊಂಡಿಯಾಗಿದ್ದರು," ಎನ್ನುತ್ತಾನೆ. ಆದರೆ ನಮ್ಮ ಪ್ರಸ್ತುತ ಹೋಲಿಕೆ ಸರಪಣಿಯದಕ್ಕಿಂತ ಹೆಚ್ಚು ರಚನಾತ್ಮಕವಾಗಿದೆಯೆಂದು ನನಗೆ ತೋರುತ್ತದೆ. ಲೆನಿನ್ ೧೯೧೪ರ ಯುದ್ಧವನ್ನು ಅಪ್ಪಟ ಸಾಮ್ರಾಜ್ಯಶಾಹಿ ಹೋರಾಟವೆಂದು ಗುರುತಿಸಿದ್ದುದುಂಟು. ಎರಡನೆಯ ಅಂತಾರಾಷ್ಟ್ರೀಯವು (ಎರಡನೆಯ ಅಂತಾರಾಷ್ಟ್ರೀಯ ೧೮೮೯–೧೯೧೪). ರಾಷ್ಟ್ರೀಯತೆಯ ಆಧಾರದ ಮೇಲೆ ಹುಟ್ಟಿಕೊಂಡಿದ್ದ ಸಮಾಜವಾದಿ ಪಕ್ಷಗಳ ಅಂತಾರಾಷ್ಟ್ರೀಯ ಸಂಘಟನೆ. ಮೊದಲನೇ ಮಹಾಯುದ್ಧದ ಕಾಲದಲ್ಲಿ ಅದರ ಕೆಲವು ಅವಕಾಶವಾದಿ ನಾಯಕರ ಮತ್ತು ಅನ್ಯಾಕ್ರಮಣಶೀಲ ಸ್ವದೇಶ ಪ್ರೇಮದಿಂದಾಗಿ ಕುಸಿದುಬಿದ್ದಿತು. ಈ ಹೋರಾಟವು ಅಂತರ್ಯುದ್ಧವಾಗಿ ಪರಿವರ್ತನೆಗೊಳ್ಳುವುದೆಂದು ಆ ಅಂತಾರಾಷ್ಟ್ರೀಯವು ಸೂಚಿಸಿತ್ತು. ಲೆನಿನ್ ಮಾತ್ರವೇ ಎರಡನೆಯ ಅಂತಾರಾಷ್ಟ್ರೀಯದ ನಿರ್ಣಯವನ್ನು ಕಾರ್ಯರೂಪಕ್ಕೆ ತರಬೇಕೆಂದು ಪಟ್ಟುಹಿಡಿದಿದ್ದರು. ಕ್ರಾಂತಿಯ ಬೆಳವಣಿಗೆಗೂ ಮುನ್ನ ಬೂರ್ಜ್ವಾ–ಲಿಬರಲ್ ಪ್ರಜಾಪ್ರಭುತ್ವದ ಹಂತವಿದೆಯೆಂದು ಎಡಬಿಡಂಗಿ ಸಿದ್ಧಾಂತಿಗಳು ಪ್ರತಿಪಾದಿಸುತ್ತಿದ್ದರು. ಈ ಪ್ರತಿಪಾದನೆಯನ್ನು ಲೆನಿನ್‌ರವರು ಪಕ್ಕಕ್ಕೆ ತಳ್ಳಿಹಾಕಿದರು. ರಷ್ಯಾದ ಸಮಾಜವಾದಿಗಳಲ್ಲೆಲ್ಲ ಲೆನಿನ್‌ರವರೇ ಸೋವಿಯತ್ ಕಾರ್ಮಿಕ ವರ್ಗದ ನೈಜ ಪಾತ್ರವನ್ನು ಗುರುತಿಸುವಲ್ಲಿ ಮೊಟ್ಟ ಮೊದಲಿಗರು. ಅವರ ಒಂದು ಪತ್ರವು ೧೯೧೭ರ ನವೆಂಬರ್ ೭ರಂದು ಕಮ್ಯುನಿಸ್ಟರ ಸಶಸ್ತ್ರ ದಂಗೆಗೆ ಪ್ರೇರೇಪಿಸಿತು. ಈ ಮಾರ್ಗದಲ್ಲಿ ಅಧಿಕಾರವನ್ನು ಹಿಡಿಯುವುದಕ್ಕೆ ಕಾಲ ಪಕ್ವವಾಗಿತ್ತು. ಬಹುಶಃ ಬೇರೆ ಯಾವ ಮಾರ್ಗವೂ ಇಷ್ಟು ಪರಿಣಾಮಕಾರಿಯಾಗಿರುತ್ತಿರಲಿಲ್ಲ. ಪ್ರಾರಂಭದಲ್ಲಷ್ಟೇ ಅಲ್ಲದೆ ನಂತರದ ವರ್ಷಗಳಲ್ಲಿಯೂ ನಾಯಕತ್ವ ಏನೆಲ್ಲವನ್ನು ಸಾಧಿಸಬಹುದೆಂದು ಲೆನಿನ್ ತೋರಿಸಿದ್ದರು. ಕ್ರಾಂತಿಯನ್ನು ಕಾಪಾಡಲು ಆಕ್ರಮಣಕಾರಿ ವೈರಿಗಳೊಂದಿಗೆ ಮತ್ತು ಹೊಸ ಆರ್ಥಿಕ ನೀತಿಗಳೊಂದಿಗೆ ಅನಾನುಕೂಲಕರ ಒಪ್ಪಂದಗಳನ್ನು ಮಾಡಿಕೊಂಡು ಹಿಮ್ಮೆಟ್ಟಬೇಕೆಂಬುದನ್ನು ಲೆನಿನ್ ಸಾಧಿಸಿ ತೋರಿಸಿದ್ದರು. ಯೂರೋಪಿನ, ಅಂದರೆ ಹಂಗರಿ, ಜರ್ಮನಿ, ಇಟಲಿ ಮುಂತಾದ ದೇಶಗಳಲ್ಲಿ ಕ್ರಾಂತಿಗಳನ್ನು ಕಾಪಾಡಿಕೊಳ್ಳಲಾಗದಿದ್ದುದಕ್ಕೆ ಕೇವಲ ಸಾಮಾಜಿಕ ಪರಿಸ್ಥಿತಿಗಳು ಹೆಚ್ಚು ಅನುಕೂಲ ಇರಲಿಲ್ಲವೆನ್ನುವ ಕಾರಣ ಮಾತ್ರವಾಗಿರಲಿಲ್ಲ. ಆ ದೇಶಗಳಲ್ಲಿನ ನಾಯಕತ್ವ ಕಡಿಮೆ ಸಾಮರ್ಥ್ಯದ್ದಾಗಿತ್ತು. ಮತ್ತೊಂದೆಡೆ, ತಾಯ್ನಾಡಿನಿಂದ ಹೊರದೂಡಲ್ಪಟ್ಟು ಜಿನೀವಾದಲ್ಲಿದ್ದಾಗ ಲೆನಿನ್‌ರವರೂ ಕೂಡ ಸಂತೃಪ್ತ ಸ್ವಿಸ್ ಕಾರ್ಮಿಕ ವರ್ಗದ ಜಡತ್ವವನ್ನು ಅಲುಗಾಡಿಸಲಾಗಿರಲಿಲ್ಲ.

ಈಗ ಇನ್ನೊಂದು ಬಗೆಯ ನಾಯಕತ್ವವಿದೆ (ಚರಿತ್ರೆಯಲ್ಲಿ ನಾವು ಬಹಳಷ್ಟು ಸಾರಿ ನೋಡಿರುವಂತೆ). ಮೇಲ್ಕಂಡ ಉದಾಹರಣೆಗೆ ತದ್ವಿರುದ್ಧವಾಗಿ ಈ ನಾಯಕತ್ವ ಕ್ರಾಂತಿಯಲ್ಲಿ ತಾನೇ ಭಾಗವಹಿಸುವುದಿಲ್ಲ. ಇದನ್ನು ಅತ್ಯಧಿಕವಾಗಿ ಧಾರ್ಮಿಕ ಚಳವಳಿಯಲ್ಲಿ ಕಾಣುತ್ತೇವೆ. ಇಂತಹ ನಾಯಕತ್ವ ಇದ್ದಕ್ಕಿದ್ದಂತೆ ತಲೆಯೆತ್ತಿ, ಕ್ಷಣಿಕ ಕಾಲ ಕ್ರಾಂತಿಕಾರಿಯಾಗಿ, ಹೊಸ ಆಡಳಿತಗಾರರನ್ನು ಅಧಿಕಾರದ ಗದ್ದುಗೆಗೇರಿಸುತ್ತದೆ. ನಂತರ ವಾಡಿಕೆಯಂತೆ ಪರಾವಲಂಬಿಯಾಗಿ ಸ್ಥಿರಗೊಳ್ಳುತ್ತದೆ.




ಇವೆಲ್ಲ ಕನಿಷ್ಠ ತಾತ್ವಿಕ ಬದಲಾವಣೆಯೂ ವ್ಯಕ್ತವಾಗದಂತೆ ನಡೆಯುತ್ತವೆ. ನಿರೀಕ್ಷಿತವಾಗಿಯೇ ಈ ಬದಲಾವಣೆ ತಾತ್ವಿಕವಾಗಿಯಲ್ಲದಿದ್ದರೂ ವಾಡಿಕೆಗಾಗಿ ಉಂಟಾಗುತ್ತದೆ. ಯಾವುದೇ ಕಾಲದ ಬಡವರು ಅಮೂರ್ತ ಮತಧರ್ಮಶಾಸ್ತ್ರದ ಸಮಸ್ಯೆಗಳನ್ನು ಅರ್ಥ ಮಾಡಿಕೊಂಡು ಅವುಗಳಿಗಾಗಿ ಹೋರಾಡಬೇಕೆಂದು ನಿರೀಕ್ಷಿಸಲಾಗುವುದಿಲ್ಲ. ಕಾಲ್ಪನಿಕ ಧರ್ಮಶಾಸ್ತ್ರಗಳ ಸಮಸ್ಯೆಗಳನ್ನು ಪಂಡಿತರಾದ ಕ್ರೈಸ್ತಗುರುಗಳೇ ಬಗೆಹರಿಸಲಾಗಿಲ್ಲವೆಂದ ಮೇಲೆ ಅವುಗಳನ್ನು ಅರ್ಥ ಮಾಡಿಕೊಂಡು ಅವುಗಳ ಪರವಾಗಿ ಯಾವುದೇ ಕಾಲದ ಬಡವರು ಹೋರಾಡಬೇಕೆಂದು ನಿರೀಕ್ಷಿಸಲಾಗುವುದಿಲ್ಲ. ಆಥನೇಸಿಯಸ್ ಪಂಥದ ಸ್ಥಾಪನೆಯ ಎರಡು ಮೂರು ಶತಮಾನಗಳ ನಂತರವೂ ಅವರ ವಂಶಸ್ಥರು ಇಸ್ಲಾಂ ವಿರುದ್ಧ ಕಡಿಮೆ ಹುರುಪಿನಿಂದ ಹೋರಾಡಿದರೂ ಒಂದು ತಲೆಮಾರಿನ ಜನರು ಏರಿಯನ್ ಪಂಥೀಯರ ವಿರುದ್ಧ ಏಕೆ ಹೋರಾಡಬೇಕಿತ್ತು? ವಾಸ್ತವಾಂಶವೇನೆಂದರೆ, ಜನಮಾನಸದಲ್ಲಿ ಕೆಲವು ಕಾಲದಲ್ಲಿ ಮತಧರ್ಮಶಾಸ್ತ್ರಗಳ ಬಗ್ಗೆ ಇದ್ದಕ್ಕಿದ್ದಂತೆ ತಿಳುವಳಿಕೆ ಮೂಡುತ್ತದೆ ಎಂದಲ್ಲ. ಬದಲಾಗಿ ಧಾರ್ಮಿಕ ನಾಯಕತ್ವಕ್ಕೆ ಯಾವ ವಿಷಯದ ಬಗ್ಗೆ ಬಿಗಿಯಾದ ಪಟ್ಟು ಹಿಡಿದರೆ ಇದ್ದಕ್ಕಿದ್ದಂತೆ ಸಾಮಾಜಿಕ ಅತೃಪ್ತಿಯನ್ನು ಚುರುಕುಗೊಳಿಸಬಹುದೆಂದು ತಿಳಿದಿತ್ತು ಎಂದರ್ಥ. ಈ ಉದಾಹರಣೆ ಸಂಪೂರ್ಣ ಗಾಢ ದ್ರವಸ್ಥಿತಿಯದಲ್ಲ. ಅದಕ್ಕೂ ಮಿಗಿಲಾಗಿ, ರಾಸಾಯನಿಕ ಕ್ರಿಯೆಗಳಲ್ಲಿ ವೇಗವರ್ಧಕಗಳ ಪಾತ್ರಕ್ಕೆ ಸಂಬಂಧಿಸಿದ್ದು. ಕೆಲವು ಕ್ರಿಯೆಗಳು ನಿಧಾನವಾಗಿ ಆಗುತ್ತವೆ. ಮತ್ತೆ ಕೆಲವು ಕ್ರಿಯೆಗಳು ಸ್ಪಾಂಜ್–ಪ್ಲೇಟಿನಂ ಅಥವಾ ಕೇಯಲಿನ್ (ಜೇಡಿಮಣ್ಣು)ನಂತಹ ವೇಗವರ್ಧಕಗಳಿಲ್ಲದೆ ಆಗುವುದೇ ಇಲ್ಲ. ಕ್ರಿಯೆ ಪೂರ್ಣವಾದ ನಂತರ ಈ ದ್ರವ್ಯ ವಸ್ತುಗಳು ಲೀನವಾಗಿರುವುದೂ ಇಲ್ಲ, ಕುಗ್ಗಿರುವುದೂ ಇಲ್ಲ, ಆದರೆ ಅವುಗಳ ಉಪಸ್ಥಿತಿಯು ಕ್ರಿಯೆಯ ವೇಗವನ್ನು ಭೌತಿಕವಾಗಿ ಹೆಚ್ಚಿಸುತ್ತದೆ.

ಕಡೆಯದಾಗಿ, ಸಾಮಾಜಿಕ ಶಕ್ತಿಗಳನ್ನು ಚದುರಿಸುವ ನಾಯಕತ್ವವಷ್ಟೇ ಅಲ್ಲದೆ ಅವುಗಳನ್ನು ಒಗ್ಗೂಡಿಸುವ ನಾಯಕತ್ವದ ಉದಾಹರಣೆಗಳನ್ನೂ ನೋಡಿದ್ದೇವೆ. ಅಧಿಕಾರದಲ್ಲಿಲ್ಲದ ಒಂದು ವರ್ಗ ಕೆಳವರ್ಗವೊಂದರ ಜೊತೆಗೂಡುವುದರಿಂದ ಮೇಲುಗೈ ಸಾಧಿಸುವುದನ್ನು ನಾವು ಪದೇ ಪದೇ ಕಾಣಬಹುದು. ಆದರೆ ಅಂತಹ ಸಂದರ್ಭದಲ್ಲಿ ಕೆಳವರ್ಗ ಶೋಷಣೆಗೊಳಪಡಲೇಬೇಕು. ಅಂತಹ ಸಂದರ್ಭದಲ್ಲಿ ಮಿತಿಮೀರಿದ ಶಕ್ತಿಯನ್ನು ಚದುರಿಸಲು ಮಾರ್ಗಗಳನ್ನು ಯೋಜಿಸಬೇಕಾಗುತ್ತದೆ. ಅಂತಹ ಮಾರ್ಗಗಳೂ ಸಾಮಾನ್ಯವಾಗಿ "ಕಾನೂನು ಮತ್ತು ವ್ಯವಸ್ಥೆಯ ಪುನರ್‌ಸ್ಥಾಪನೆ"ಯ ಹಣೆಪಟ್ಟಿಯನ್ನು ಹಚ್ಚಿಕೊಂಡೇ ಬರುತ್ತವೆ. ಕೆಲವು ಮಾರ್ಕ್ಸ್‌ವಾದಿಗಳು (ಅವರಲ್ಲಿ ನಾನೂ ಒಬ್ಬ) ಮಹಾತ್ಮ ಗಾಂಧಿಯ ನಾಯಕತ್ವವು ಭಾಗಶಃ ಈ ರೀತಿಯದು ಎಂದು ವಾದಿಸುತ್ತಾರೆ. ೧೯೨೦ರ ಸತ್ಯಾಗ್ರಹದ ಹಿಡಿತ ತಪ್ಪಿ, ನಂತರದ ಹೋರಾಟದಿಂದಾಗಿ ಚಳವಳಿಯ ಸ್ವರೂಪವು ಮೂಲಭೂತವಾಗಿ ಬದಲಾಗುತ್ತದೆನ್ನುವ ಸಂದರ್ಭದಲ್ಲಿ ೧೯೩೦ರ ಗೇಣಿ ಮತ್ತು ತೆರಿಗೆಯ ವಿರುದ್ಧದ ಹೋರಾಟದ ಬದಲು ಮಹಾತ್ಮ ಗಾಂಧಿಯವರು ಅಸ್ಪೃಶ್ಯರನ್ನು ಮೇಲಕ್ಕೆತ್ತುವುದರ ಅಗತ್ಯದತ್ತ ಗಮನ ಹರಿಸಿದರು. ಹೀಗೆ ಇಡೀ ಚಳವಳಿಯ ದಿಕ್ಕನ್ನೇ ನಾಜೂಕಿನಿಂದ ಬದಲಾಯಿಸಿದರು. ಆ ವರ್ಷ (೧೯೩೯) ಗಾಂಧೀಜಿ ರಾಜ್‌ಕೋಟ್‌ನಲ್ಲಿ ಸುಲಭವಾಗಿ ನಂದಿಸಲಾಗದಂತಹ ನಮ್ಮ ಸಾಮಾಜಿಕ ಅತೃಪ್ತಿಯ ಬೆಂಕಿಯನ್ನು ಹೊತ್ತಿಸಬಲ್ಲ ಹೋರಾಟದ ಮುಂಚೂಣಿಯಲ್ಲಿದ್ದರು. ಆದರೆ ಅದರ ದಿಕ್ಕನ್ನೂ ಸಹ ಹೊಸದಾಗಿ ನಾಜೂಕಿನಿಂದ ಕಂಡುಹಿಡಿದ ಅಹಿಂಸಾ ಸಿದ್ಧಾಂತದ ಸೂಕ್ಷ್ಮವಾದ ಅಂಶಗಳಿಂದ ಬದಲಿಸಿಬಿಟ್ಟರು. ಇವೆರಡೂ ಚೌರಿ–ಚೌರಾದ ನಂತರದಲ್ಲಿನ ಮೊದಲ ಸಾಮಾಜಿಕ ಚಳವಳಿಯನ್ನು ರದ್ದುಪಡಿಸುವ ಮುನ್ಸೂಚನೆಗಳಾಗಿದ್ದವು. ನಂತರದ ಎರಡು ವಿದ್ಯಮಾನಗಳಿಂದ ಸ್ಪಷ್ಟವಾಗಿ ಗೊತ್ತಾಗುವುದೇನೆಂದರೆ ಸಾಮಾಜಿಕ ಬದಲಾವಣೆಯ ಶಕ್ತಿಗಳನ್ನು



ಕಾವ್ಯಲೋಕ

# ತಿರುಗುತಿಹೆವು

ತಿರುಗುತಿಹೆವು ನಾವೆಲ್ಲರೂ
ದುಂಡನೆಯ ಭೂಮಿಯ ಮೇಲೆ
ದಂಡೆಯನು ಹುಡುಕುತ್ತ

ಕಾರು ಟ್ರೇನು ಪ್ಲೇನುಗಳಲ್ಲಿ
ನೆಲ ನೀರು ಗಾಳಿಗಳಲ್ಲಿ
ಸವುಡಿಲ್ಲದೆ ಓಡಾಡಿ
ಹುಡುಕುತಿಹೆವು ವಿಶ್ರಾಂತಿಯನ್ನು

ಇರುಳಿನ ಕತ್ತಲೆ ಮುಸುಕನ್ನು
ವಿದ್ಯುತ್ತಿನಿಂದ ಹರಿದು
ಕಣ್ಣಲಿ ಎಣ್ಣೆ ಹಾಕಿಕೊಂಡು
ಹುಡುಕುತಿಹೆವು ನಿದ್ದೆಯನ್ನು

ಮರಗಳ ಕಡಿದು ಕೆರೆಗಳ ಮುಚ್ಚಿ
ಸಿಮೆಂಟು ಭವನದಲ್ಲಿ ಫ್ಯಾನು ತಿರುಗಿಸಿ
ಪ್ಲಾಸ್ಟಿಕ್ ಹೂಗಳ ಅಲಂಕಾರದಲಿ
ಹುಡುಕುತಿಹೆವು ನಿಸರ್ಗವನ್ನು

ಗಂಟೆ ಜಾಗಟೆ ಡೊಳ್ಳು ಬಾರಿಸಿ
ಮೈಕಿನ ತಾರಕದಲಿ ಕೂಗಿ ಕರೆದು
ಅಂತರಾತ್ಮದ ನೆಮ್ಮದಿಗೆಂದು
ಹುಡುಕುತಿಹೆವು ಶಾಂತತೆಯನ್ನು

ಸರಳ ಸತ್ಯಗಳ ಗೋರಿಯ ಮೇಲೆ
ಭವ್ಯ ಭ್ರಮೆಗಳ ಮಹಲುಗಳೆಬ್ಬಿಸಿ
ಆಸೆಯ ನೂರು ನಾಯಿ ಛೂ ಬಿಟ್ಟು
ಹುಡುಕುತಿಹೆವು ಸುಖವನ್ನು

ಎದೆಎದೆಯೊಳಗೂ ಹುದುಗಿಸಿಕೊಂಡು
ಕರುಣೆ ಮಮತೆಯ ಸಾಗರಗಳನು
ಒಣಮಾತುಗಳ ಮರುಭೂಮಿಯಲಿ
ಹುಡುಕುತಿಹೆವು ಪ್ರೀತಿಯನ್ನು

ತಿರುಗುತಿಹೆವು ನಾವೆಲ್ಲರೂ
ದುಂಡನೆ ಭೂಮಿಯ ಮೇಲೆ
ದಂಡೆಯನು ಹುಡುಕುತ್ತ.

**ಸಂಕುಲಜೀವ** (ಸಂಜೀವ ಕುಲಕರ್ಣಿ)
'ನಗೆ ಮಲ್ಲಿಗೆ', ೨೦/೧, ಮಹಿಷಿ ರಸ್ತೆ, ಮಾಳಮಡ್ಡಿ, ಧಾರವಾಡ – ೫೮೦ ೦೦೭

ಒಟ್ಟುಗೂಡಿಸುವ ಬದಲು ಚದುರಿಸಲಾಯಿತು, ಎಂಬುದು. ಅವುಗಳು ಒಟ್ಟಾಗಿದ್ದಲ್ಲಿ ಅಧಿಕಾರ ಬಯಸಿದ್ದ ವರ್ಗ –ಅರ್ಥಾತ್ ಭಾರತೀಯ ಶ್ರೀಮಂತ ವರ್ಗ – ಅಪಾಯದಲ್ಲಿರುತ್ತಿತ್ತು. ಇದರ ಅರ್ಥ ಎಚ್ಚರಿಕೆಯಿಂದ ಉದ್ದೇಶಪೂರ್ವಕವಾಗಿ ನಾಯಕತ್ವ ನಡೆದುಕೊಂಡಿತು ಎಂದಲ್ಲ. ಆದುದರಿಂದಲೇ ಕಾಂಗ್ರೆಸ್ ಚಳವಳಿ ಆಗಾಗ ನಿರುತ್ಸಾಹದಿಂದ ಸೊರಗ ಬೇಕಾಯಿತು. ಅಂತಹ ಸಮಯದಲ್ಲಿ ಮಾತ್ರ ಈಗಾಗಲೇ ಉಲ್ಲೇಖಿಸಿರುವ ವರ್ಗಕ್ಕೆ ಅದರಿಂದ ಹೆಚ್ಚು ಪ್ರಯೋಜನವಾಗಲಿಲ್ಲ.

ಉದಾಹರಣೆಗಾಗಿ ನಾವು ತೆಗೆದುಕೊಂಡಿರುವ ಸಾಮಾಜಿಕ ಗುಂಪು ಮತ್ತು ದ್ರಾವಣಗಳ ನಡುವೆ ಕನಿಷ್ಠ ಒಂದು ವ್ಯತ್ಯಾಸವಿದೆ; ಅದು ಏಕರೂಪದ ಕೊರತೆ. ಒಂದು ಸಾಮಾಜಿಕ ಚಳವಳಿಯ ಸಾಂದ್ರತೆಯು ಸಂಬಂಧಿಸಿದ ಇಡೀ ಪ್ರಾಂತದಲ್ಲಿ ಒಂದೇ ರೀತಿಯಾಗಿರಬೇಕಿಲ್ಲ. ಇದು ಪ್ರಾರಂಭಿಕ ಹಂತಗಳ ನಂತರ ಎರಡು ವಿಭಿನ್ನ ಬೆಳವಣಿಗೆಗಳತ್ತ ಕೊಂಡೊಯ್ಯುತ್ತದೆ. ಒಂದೋ, ಒಂದು ಸಣ್ಣ ಭಾಗದಲ್ಲಿ ಉಂಟಾಗಿರುವ ಬದಲಾವಣೆ ಉಳಿದ ಸಾಮಾಜಿಕ ಗುಂಪಿಗೂ ಹರಡುತ್ತದೆ. ಇದರ ಅರ್ಥ, ಇಡೀ ಗುಂಪಿಗೆ ಅನ್ವಯವಾಗುವಂತೆ ಕನಿಷ್ಠ ಮೌಲ್ಯವಿರಬೇಕು. ಇಲ್ಲವಾದಲ್ಲಿ ಬದಲಾವಣೆಯಾಗದ ಭಾಗದಲ್ಲಿ ವಿರಳವಾಗಿ, ಅಸಾಂದ್ರತೆಯುಂಟಾಗುತ್ತದೆ. ಎರಡನೆಯ ವಿಷಯದಲ್ಲಿ, ಬದಲಾವಣೆಯಾದ ಭಾಗ ತಾತ್ಕಾಲಿಕವಾಗಿ ಬೇರೆಯಾಗಿರಬೇಕು, ಅಥವಾ, ಪುನಃ ತನ್ನ ಸುತ್ತಲಿನ ಪರಿಸರದಲ್ಲಿ ಲೀನವಾಗಬೇಕು. ಪ್ರಪಂಚದ ಒಂದು ಭಾಗದಲ್ಲಾದ ಮಾರ್ಕ್ಸ್‌ವಾದಿ ಕ್ರಾಂತಿಯು ನಿರೀಕ್ಷಿತ ವೇಗದಲ್ಲಿ ಏಕೆ ಹರಡಲಿಲ್ಲವೆಂಬುದನ್ನು ಇದು ವಿವರಿಸುತ್ತದೆಯೆಂದು ನಾನು ಭಾವಿಸಿದ್ದೇನೆ. ಆ ಭಾಗದಲ್ಲಿ ಕ್ರಾಂತಿ ಸಂಭವಿಸಿದ್ದರಿಂದಲೇ ಉಳಿದ ಭಾಗಗಳಲ್ಲಿ ವೈರುಧ್ಯಗಳ ತೀಕ್ಷ್ಣತೆ ಹೆಚ್ಚಿತು. ಅದರಿಂದಾಗಿ ಎಡಬಿಡಂಗಿ ನಾಯಕರುಗಳನ್ನು ಮತ್ತೆ ಪ್ರಗತಿ ವಿರೋಧಿ ಮನೋಭಾವನೆಯ ಸ್ಥಿತಿಗೆ ತಳ್ಳಿತು. ಏಕೆಂದರೆ ಅವರೇ ಅಗತ್ಯವಾದ ಮಟ್ಟಕ್ಕೆ ಬೆಳೆದಿರಲಿಲ್ಲ.

ಕೊನೆಯಲ್ಲಿ ಸ್ಪಷ್ಟವಾಗಿ ಹೇಳಬೇಕೆಂದರೆ, ಒಂದು ಸಾಮೂಹಿಕ ಚಳವಳಿಯ ಪ್ರಮುಖ ಹಾಗೂ ತತ್‌ಕ್ಷಣದ ಉದ್ದೇಶ ಸಾಧನೆಯಾದ ಮೇಲೆ ಜನತೆ ಮತ್ತು ನಾಯಕತ್ವ ಇಬ್ಬರೂ ಮುಂದಿನ ಹಂತದ ಅಗತ್ಯಗಳನ್ನು ಗಮನದಲ್ಲಿಟ್ಟುಕೊಂಡು ಒಳ ವೈರುಧ್ಯಗಳು ಪಕ್ವವಾಗುವುದರ ಬಗ್ಗೆ ಎಚ್ಚರವಾಗಿರಬೇಕು. ವರ್ಗ–ಪ್ರತಿಗಾಮಿತ್ವ ಮತ್ತು ವ್ಯಕ್ತಿಪೂಜೆಯನ್ನು ಅರ್ಥ ಮಾಡಿಕೊಳ್ಳುವುದು ಇಡೀ ಜನತೆಯು ಪರಿವರ್ತಿತ ಚಳವಳಿಯಲ್ಲಿ, ಉದಾಹರಣೆಗೆ, ಕ್ರಾಂತಿಯ ನಂತರದ ಸ್ವರಾಜ್ಯ ಹಾಗೂ ರಾಷ್ಟ್ರೀಯ ಯೋಜನೆಗಳಲ್ಲಿ, ಭಾಗವಹಿಸುವುದರಿಂದಲೇ ಸಾಧ್ಯ. ಮತ್ತೊಂದೆಡೆ, ರಾಷ್ಟ್ರೀಯ ಯೋಜನೆಯ ಯಶಸ್ಸು ಮತ್ತು ಅದರ ಪರಿಣಾಮವಾಗಿ ಉತ್ಪಾದನಾ ಪ್ರಮಾಣದ ಹೆಚ್ಚಳ – ಸಮಾಜವಾದಿ ಯೋಜನೆ ಮತ್ತು ಸಮಾಜವಾದಿ ಉತ್ಪಾದನೆ – ನಾಯಕತ್ವದ ಗುಣಮಟ್ಟದ ಬದಲಾವಣೆಗೆ ಕಾರಣವಾಗಬೇಕು. ಅಧಿಕ ಸಂಖ್ಯೆಯಲ್ಲಿ ತರಬೇತಿ ಪಡೆದಿರುವ ತಂತ್ರಜ್ಞರು, ಎಂಜಿನಿಯರ್‌ಗಳು ಮತ್ತು ವಿಜ್ಞಾನಿಗಳಿಂದಾಗಿ ವಿಶ್ವದಲ್ಲೇ ಎರಡನೆಯ ಅತಿ ದೊಡ್ಡ ಕೈಗಾರಿಕಾ ರಾಷ್ಟ್ರವಾಗಿರುವ ಯು. ಎಸ್. ಎಸ್. ಆರ್. ನ ಸ್ಟಾಲಿನೀಕರಣ ತೊಡೆಯುವ ನೀತಿಯನ್ನು ಭಾಗಶಃವಾಗಿಯಾದರೂ ಇದು ವಿವರಿಸುತ್ತದೆ.

*[ಪುಣೆಯ ಫರ್ಗುಸನ್ ಅಂಡ್ ವಿಲಿಂಗ್ಡನ್ ಕಾಲೇಜ್ ಮ್ಯಾಗಜೀನ್, ೧೯೫೬, ಪು. ೬–೯]*

**ಡಿ. ಡಿ. ಕೋಸಾಂಬಿ**
ಅನುವಾದ : **ಟಿ. ವೆಂಕಟೇಶಮೂರ್ತಿ**
ನಂ. ೨೦೧, 'ಸ್ಕೈಲೈನ್ ಗೋಲ್ಡನ್ ರೇಸ್'
ಛತ್ರಂ ಬ್ಲಾಕ್, ಕೆಂಪೇಗೌಡ ನಗರ, ಗವಿಪುರಂ, ಬೆಂಗಳೂರು – ೫೬೦ ೦೧೯

## ಹೊಸ ಓದು



### ಅಂಡಮಾನ್ ಕಂಡ ಹಾಗೆ

(ಪ್ರವಾಸದನುಭವ)

ಡಾ॥ ಎಚ್.ಎಸ್. ಅನುಪಮಾ

**ಪುಟ : ೧೦೪**

**ಬೆಲೆ : ರೂ. ೮೦**

**ಲಡಾಯಿ ಪ್ರಕಾಶನ**

೨೧, ಪ್ರಸಾದ್ ಹಾಸ್ಟೆಲ್

ಗದಗ – ೫೮೨ ೧೦೧

ಮೂರ್ನಾಲ್ಕು ಶತಮಾನಗಳ ಹಿಂದೆ ನಾಗರಿಕ ಮಾನವ ಕಾಲಿರಿಸಲು ಹೆದರುತ್ತಿದ್ದ, ಈಗ ಭಾರತದ ಅವಿಭಾಜ್ಯ ಅಂಗವಾಗಿರುವ, ಕೇಂದ್ರಾಡಳಿತಕ್ಕೆ ಒಳಪಟ್ಟ ಪ್ರದೇಶವಾಗಿ, ಸಾವಿರಾರು ಮೈಲು ದೂರದಲ್ಲಿ, ದಕ್ಷಿಣಕ್ಕೆ ಸಮುದ್ರದಿಂದ ಆವೃತವಾಗಿರುವ ೫೭೨ ದ್ವೀಪಗಳ ಸಮೂಹವೇ ಅಂಡಮಾನ್ ನಿಕೋಬಾರ್. ಅಂಡಮಾನ್ ಅಂದರೆ ಮನಸ್ಸಿಗೆ ಬರುವುದು ಕೈದಿಗಳಿಗೆ ಗರಿಷ್ಠ ಶಿಕ್ಷೆ ಕೊಡಲೆಂದೇ, ಬ್ರಿಟಿಷರಿಂದ ನಿರ್ಮಿಸಲ್ಪಟ್ಟ ಸೆಲ್ಯುಲಾರ್ ಜೈಲು ಮತ್ತು ಬಿಲ್ಲು–ಬಾಣ ಬಳಸುವ, ಮೈ ಕೈಗೆ, ಬಳಿದ ಜೇಡಿ ಮಣ್ಣೇ ಉಡುಪಾದ ನಗ್ನ ಕಾಡು ಮನುಷ್ಯರು. ಭಾರತಕ್ಕೆ ಸ್ವಾತಂತ್ರ್ಯ ದೊರೆತ ಸಮಯದಲ್ಲಿ ಈ ದ್ವೀಪ ಸಮೂಹಗಳು, ಪಾಕಿಸ್ತಾನಕ್ಕೆ ಸೇರುವುದು ತಪ್ಪಿ ಭಾರತದ್ದು ಆಗಿಯೇ ಉಳಿದವು. ಈಗ ಲಕ್ಷಾಂತರ ವಲಸಿಗರ ನೆಚ್ಚಿನ ವಸಾಹತುವಾಗಿದೆ. ಪದೇ ಪದೇ ಸುನಾಮಿ, ೬ ತಿಂಗಳ ನಿರಂತರ ಮಳೆ, ಭೂ ಮುಳುಗಡೆಯಂಥ ಪ್ರಕೃತಿ ವಿಕೋಪ ಗಳಿಂದ ಬಳಲಿ, ಕನಿಷ್ಠ ಸವಲತ್ತುಗಳು ಇಲ್ಲದೆ, ಭಿನ್ನ ಭಾಷೆ, ಜಾತಿ, ವೃತ್ತಿ, ಧರ್ಮ, ಸಂಸ್ಕೃತಿಗಳು ಶ್ರಮಿಕರಿಂದ ತುಂಬಿದೆ. ಇಲ್ಲಿಗೆ ಪ್ರವಾಸಕ್ಕಾಗಿಯೋ ಅಥವಾ ವಲಸೆ ಗಾಗಿಯೋ ಹೋಗುವ ಗಟ್ಟಿ ಮನಸ್ಸಿನ ಸಾಹಸಿಗರಿಗೆ ಅವಶ್ಯ ಮಾಹಿತಿಯನ್ನು, ಸಾಮಾನ್ಯ ಓದುಗರಿಗೆ ಸಾಹಿತ್ಯದ ಔತಣವನ್ನೂ ಈ ಕೃತಿ ಒದಗಿಸುತ್ತದೆ. ಅರಣ್ಯವಾಸಿಗಳ ಪುನರ್ವಸತಿಯ ಸಮಸ್ಯೆಯನ್ನು ವಿಮರ್ಶಿಸಿ, ಅದರ ಅಧ್ಯಯನಕ್ಕೆ ಸೂಕ್ತವಾದ ದೃಷ್ಟಿಕೋನವನ್ನು ಕೊಟ್ಟಿದ್ದಾರೆ.

– **ಕುಸುಮಾ ಎಸ್. ಎಸ್.** *ಬೆಂಗಳೂರು – ೨೨*

### ಗುರಿಯತ್ತ ಹರಿಯಲಿ ಚಿತ್ತ



ಡಾ॥ ಮಹಾಬಲೇಶ್ವರ ರಾವ್

**ಪುಟ : ೧೦೦** **ಬೆಲೆ : ರೂ. ೫೦**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧

ಜೀವನಕ್ಕೊಂದು ಗುರಿಯಿರಬೇಕೆಂದೂ ಅದನ್ನು ಸಾಧಿಸಲು ನಿರಂತರ ಪ್ರಯತ್ನ ಬೇಕೆಂದೂ ಹೇಳಲಾಗುತ್ತದೆ. ಮನುಷ್ಯ ಅದರಲ್ಲಿ ಎಷ್ಟು ಯಶಸ್ವಿಯಾಗುತ್ತಾನೆ ? ಗುರಿ ಮುಟ್ಟಲಾಗದಿದ್ದರೆ ಅವಮಾನಕರವೆ ? ಅದು ಹೇಗೆ ಸಾಧ್ಯ ? ಮರಳಿ ಯತ್ನವನ್ನು ಮಾಡುವುದೆ ? ಮೊದಲು ಗುರಿಗಳನ್ನು ಇರಿಸಿಕೊಳ್ಳುವುದು ಮತ್ತು ಸಾಧಿಸುವುದು ಒಳ್ಳೆಯ ಆಯ್ಕೆಯಾಗಿರಲಿ. ಯಾರನ್ನೋ ತುಳಿದು ಮೇಲೆ ಬರುವುದಾಗಲೀ, ಸ್ವಾರ್ಥ ಸಾಧಿಸಿ ಇನ್ನೊಬ್ಬರ ತೇಜೋವಧೆ ಮಾಡುವುದಾಗಲೀ ಗುರಿಗಳಾಗಿರಬಾರದು. ಇಂದಿನ ಸನ್ನಿವೇಶದಲ್ಲಿ ಗುರಿಸಾಧನೆಗೆ ಬಹಳಷ್ಟು ಅಡೆತಡೆಗಳು ಬರುತ್ತವೆ. ಅಲ್ಲಿ ಸ್ಪರ್ಧೆ ಏರ್ಪಡುತ್ತದೆ. ವ್ಯಾಪಾರದ ಕ್ಷೇತ್ರದಲ್ಲಂತೂ ಗುರಿಮುಟ್ಟಲು ಪ್ರಾಮಾಣಿಕ ಪ್ರಯತ್ನ ಕೆಲಸಕ್ಕೇ ಬಾರದು ಎಂಬಂತೆ ಪರಿಸ್ಥಿತಿ ಹದಗೆಟ್ಟಿದೆ. ನಾವಿಂದು ನಮ್ಮ ಯಶಸ್ಸಿಗೆ ಹಿಡಿದಿರುವ ಮಾರ್ಗದಲ್ಲಿ ಸಾಗುವುದು ಹೇಗೆ ಮತ್ತು ಬುದ್ಧಿವಂತಿಕೆಯಿಂದ ಮುಂದುವರಿಯುವುದು ಕ್ಷೇಮವೆಂಬ ಅಂಶವನ್ನು ಲೇಖನಗಳ ಮೂಲಕ ನಿರೂಪಿಸಿದ್ದಾರೆ ಡಾ॥ ಮಹಾಬಲೇಶ್ವರ ರಾವ್. ಇವರು ಉತ್ತಮ ಶಿಕ್ಷಕರು. ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ಮಾಡುವಲ್ಲಿ ನಿಪುಣರು. ಹಲವು ಉದಾಹರಣೆಗಳ ಮೂಲಕ ಗುರಿಸಾಧನೆಗೆ ನೆರವಾಗುವ ಯೋಗ್ಯ ಸಲಹೆಗಳನ್ನು ನೀಡಿದ್ದಾರೆ.



### ಮನಸ್ಸಿನ ಮ್ಯಾಜಿಕ್

ಅಡ್ಡೂರು ಕೃಷ್ಣ ರಾವ್

**ಪುಟ : ೧೨೦** **ಬೆಲೆ : ರೂ. ೫೦**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧

ವಜ್ರದಷ್ಟು ಕಠೋರವೂ ಹೂವಿನಷ್ಟು ಕೋಮಲವೂ ಆಗಬಲ್ಲುದು ಯಾವುದು ? ಮನಸ್ಸು ! ಹೌದು, ನಮ್ಮ ದೇಹದೊಂದಿಗೆ ನಿಕಟವಾಗಿದ್ದು ಭೌತಿಕ ಕಣ್ಣುಗಳಿಗೆ ಅಗೋಚರವಾಗಿ ಅನುಭವಕ್ಕೆ ದಕ್ಕಬಲ್ಲ ಒಂದು ಸೋಜಿಗ. ನಮ್ಮ ಒಳಿತು–ಕೆಡುಕುಗಳನ್ನು ನಿರ್ಧರಿಸುವಲ್ಲಿ ಮನಸ್ಸಿನ ಪಾತ್ರ ಹಿರಿದು. ಬಲು ಸೂಕ್ಷ್ಮವೂ ಹೌದು, ಅಷ್ಟೇ ಚಂಚಲ ಪ್ರವೃತ್ತಿಯದೂ ಹೌದು. ಅದನ್ನು ಅಂಕೆಯಲ್ಲಿಟ್ಟು ಹುಚ್ಚು ಹೊಳೆಯಂತೆ ಹರಿಯಬಿಡದೆ ಏಕಾಗ್ರ ಮನಸ್ಸಿನಿಂದ ಸರಿ ನಿರ್ಧಾರ ತೆಗೆದುಕೊಂಡರೆ ನಮ್ಮ ವ್ಯಕ್ತಿತ್ವ ವಿಕಸನ ಖಂಡಿತ ಸಾಧ್ಯ. ನಿರ್ಧಾರಗಳು ಕೇವಲ ನಮ್ಮ ಸ್ವಾರ್ಥಕ್ಕೆ ಮಾತ್ರವಾಗಿರದೆ, ಏಕಪಕ್ಷೀಯವೂ ಆಗಿರಬಾರದು. ಇದು ಅಂದುಕೊಂಡಷ್ಟು ಸುಲಭವೇನೂ ಅಲ್ಲ, ಆದರೆ ಅತಿ ಕಠಿಣ ವಿಚಾರವೂ ಅಲ್ಲ. ದೃಢ ಸಂಕಲ್ಪ, ದೃಢ ಮನಸ್ಸು ಬೇಕಾಗಿರುವುದು ಇಂಥ ಸಂದರ್ಭದಲ್ಲೇ. ಚಂಚಲ ಮನಸ್ಸಿನ ವಿವಿಧ ಮಜಲುಗಳನ್ನು ಪರಿಚಯಿಸುತ್ತ ಇಂದಿನ ದಿನಗಳಲ್ಲಿ ಎದುರಿಸಬೇಕಾದ ಹಲವು ಹತ್ತು ನಡೆಗಳನ್ನು ಯಶಸ್ವಿಯಾಗಿ ನಿಭಾಯಿಸುವ ಬಗ್ಗೆ ಕಿವಿಮಾತುಗಳಿವೆ. ಪ್ರಪಂಚದ ಎಷ್ಟೊಂದು ಮಹನೀಯರು ತಮ್ಮ ವ್ಯಕ್ತಿತ್ವ ಬೆಳೆಸಿಕೊಳ್ಳಲು ಇಟ್ಟ ಹೆಜ್ಜೆಗಳನ್ನು ಉದಾಹರಿಸುತ್ತ ಲೇಖಕ ಶ್ರೀ ಅಡ್ಡೂರು ಕೃಷ್ಣ ರಾವ್ ಇಲ್ಲಿ ಮನಸ್ಸಿನ ಮಹತ್ವವನ್ನು ನಮಗೆ ತಿಳಿಸಿಕೊಟ್ಟಿದ್ದಾರೆ. ಮನಸ್ಸಿಟ್ಟು ಓದಿ, ಮನನ ಮಾಡಿಕೊಳ್ಳಿ. ಅದರಂತೆಯೇ ನಡೆಯಿರಿ.

– **ಇಂದಿರಾಕುಮಾರಿ,** *ಯಶವಂತಪುರ, ಬೆಂಗಳೂರು – ೨೨*

### ಅಂಬೇಡ್ಕರ್‌ವಾದಿಗಳ ಬಿಕ್ಕಟ್ಟು ಮತ್ತು ಭವಿಷ್ಯದ ಸವಾಲುಗಳು

ಡಾ॥ ಆನಂದ ತೇಲ್ತುಂಬ್ಡೆ; ಕನ್ನಡಕ್ಕೆ : ಡಾ॥ ಎಚ್. ಎಸ್. ಅನುಪಮಾ



**ಪುಟ : ೯೬** **ಬೆಲೆ : ರೂ. ೬೦**

**ಲಡಾಯಿ ಪ್ರಕಾಶನ,** ೨೧, ಪ್ರಸಾದ್ ಹಾಸ್ಟೆಲ್, ಗದಗ – ೫೮೨ ೧೦೧

ಪ್ರಸ್ತುತ ಪುಸ್ತಕದಲ್ಲಿ ಡಾ॥ ಎಚ್. ಎಸ್. ಅನುಪಮಾ ಅವರು, ಚಿಂತಕರಾದ ಡಾ॥ ಆನಂದ ತೇಲ್ತುಂಬ್ಡೆಯವರ ಅಂಬೇಡ್ಕರರ ಚಿಂತನೆಯನ್ನು ಈ ಕಾಲದ ಅಂಬೇಡ್ಕರ್‌ವಾದಿಗಳೆಂದರೆ ಯಾರು ? ಅವರು ಎದುರಿಸುತ್ತಿರುವ ಬಿಕ್ಕಟ್ಟುಗಳೇನು ? ಎಂದು ವಿವರಿಸುತ್ತಾರೆ. ಈ ಹಿನ್ನೆಲೆಯಲ್ಲಿ ಅಂಬೇಡ್ಕರರ ವ್ಯಕ್ತಿಪರಿಚಯವನ್ನು, ಅವರೇ ಕಟ್ಟಿದಂತಹ ಸಂಘಟನೆಗಳ ಬಗ್ಗೆ, ಹಿಂದೂಧರ್ಮವನ್ನು ನಿರಾಕರಿಸಿ ಬೌದ್ಧ ಧರ್ಮವನ್ನು ಸ್ವೀಕರಿಸಿದ ಬಗ್ಗೆ ವಿವರಗಳಿವೆ. ಸಂವಿಧಾನ ಕರಡು ಸಮಿತಿಯ ಅಧ್ಯಕ್ಷರಾಗಿದ್ದರೂ 'ಸ್ಟೇಟ್ಸ್ ಅಂಡ್ ಮೈನಾರಿಟೀಸ್' ಆಶಯಗಳು ಸಂವಿಧಾನದಲ್ಲಿ ಅಡಕ ಗೊಳ್ಳುವಂತೆ ಮಾಡಲು ಸಾಧ್ಯವಾಗದಿರುವುದರ ಬಗ್ಗೆ ಅಂದಿನ ಸ್ಥಿತಿಯ ಚಿತ್ರಣ ಕಾಣುತ್ತದೆ. ಸಮಾನತೆ–ಸೋದರತೆ–ಸ್ವಾತಂತ್ರ್ಯ ಆಧಾರದ ಸಮಾಜ ಅಂಬೇಡ್ಕರರ ಕನಸು. ಅದು ನನಸಾಗದೇ ಉಳಿದಿರುವುದಕ್ಕೆ ಕಾರಣಗಳು : ದಲಿತ ಮೇಲ್ವಲನದ ವ್ಯಕ್ತಿಗಳು ಸಾಮಾಜಿಕವಾಗಿ, ರಾಜಕೀಯವಾಗಿ ಮುಂದುವರಿದಂತೆ ಬಂಡವಾಳಶಾಹಿಯನ್ನು ಪ್ರೋತ್ಸಾಹಿಸುತ್ತ ದಲಿತ ಬೂರ್ಶ್ವಾಗಳಾಗಿ ಬದಲಾಗಿ, ಸಾಮಾನ್ಯ ದಲಿತರ ಸಂಬಂಧವನ್ನು ರಾಜಕೀಯ ನೆಲೆ ಭದ್ರತೆಗಾಗಿ ಹಾಗೂ ಜನಸಂಖ್ಯಾ ಬೆಂಬಲಕ್ಕಾಗಿ ಮಾತ್ರ ಸೀಮಿತಗೊಳಿಸಿದ್ದಾರೆ. ಇಳಿಯುತ್ತಿರುವ ದಲಿತರ ಜೀವನ ಮಟ್ಟ, ಕಡಿಮೆಯಾಗುತ್ತಿರುವ ಉದ್ಯೋಗಾವಕಾಶ, ಜಾಗತೀಕರಣದ ಪರಿಣಾಮ, ದಲಿತ ಚಳುವಳಿಗಾರರಿಗೆ ಅರ್ಥವಾಗುತ್ತಿಲ್ಲ, ಇನ್ನೂ ಭೂತಕಾಲದ ಘಟನೆಗಳಿಗೆ ಅಂಟಿಕೊಂಡಿದ್ದಾರೆ. ವರ್ತಮಾನದ ಪರಿಸ್ಥಿತಿಯನ್ನು ಗ್ರಹಿಸುತ್ತಿಲ್ಲ. ಅಂಬೇಡ್ಕರ್ ನೀಡಿದ ಕೊಡುಗೆಯನ್ನು ಭಾರತೀಯ ಸಮಾಜ ಗುರುತಿಸುವಲ್ಲಿ ವಿಫಲವಾಗಿ, ಅವರ ಮೂರ್ತೀಕರಣ, ದೈವೀಕರಣಗೊಳಿಸಿದ್ದಾರೆ. ಸದ್ಯದ ಪರಿಸ್ಥಿತಿಯಲ್ಲಿ ಅಂಬೇಡ್ಕರರ ಚಿಂತನೆಗಳನ್ನು ಮೇಲ್ಪದರದಲ್ಲಿ ಕಾಣದೇ ಆಳವಾಗಿ ಅರ್ಥೈಸಿಕೊಳ್ಳಲೇಬೇಕಾದ ಅನಿವಾರ್ಯತೆ ಇದೆಯೆಂಬುದು ಚಿಂತಕರ ಆಶಯವಾಗಿದೆ.

– **ತೇಜ,** *ಬೆಂಗಳೂರು – ೬೧*

# ಸ್ವಾತಂತ್ರ್ಯ ಚಳುವಳಿ

## ನಿರೀಕ್ಷೆ ಮತ್ತು ಬಳುವಳಿ

"ಭಾರತಕ್ಕೆ ಸ್ವಾತಂತ್ರ್ಯ ಬಂದು ೬೮ ವರ್ಷಗಳಾದವು. ಆ ಅಮೂಲ್ಯ ಕೊಡುಗೆಯನ್ನು ನಮಗಿತ್ತ ಮಹನೀಯರನ್ನು, ಹುತಾತ್ಮರನ್ನು ಕೃತಜ್ಞತೆಯಿಂದ ನೆನೆಯುವುದು ನಮ್ಮೆಲ್ಲರ ಕರ್ತವ್ಯ. ಅವರು ನಮಗೆ ತಂದು ಕೊಟ್ಟ ಸ್ವಾತಂತ್ರ್ಯವನ್ನು ಉಳಿಸಿಕೊಳ್ಳುವುದು ನಮ್ಮೆಲ್ಲರ ಹೊಣೆಗಾರಿಕೆ... ಇತ್ಯಾದಿ, ಇತ್ಯಾದಿ." : ಇದು ಪ್ರತಿವರ್ಷ ನಮ್ಮ ಸ್ವಾತಂತ್ರ್ಯೋತ್ಸವದಂದು ಕೇಳಿ ಬರುವ ಒಂದು ಬಗೆಯ ಮಾತು. ಇದೇ ಸಂದರ್ಭದಲ್ಲಿ ಹೇಳುವ ಇನ್ನೊಂದು ಬಗೆಯ ಮಾತು : "ಬ್ರಿಟಿಷರು ನಮ್ಮ ದೇಶವನ್ನು ಬಿಟ್ಟುಹೋಗಿ ೬೮ ವರ್ಷಗಳಾಯಿತು. ಆದರೆ ನಮಗೆ ನಿಜವಾಗಿ ಸ್ವಾತಂತ್ರ್ಯ ಬಂದಿದೆಯೇ ? ನಮ್ಮ ಆಕಾಂಕ್ಷೆಗಳು ಕೈಗೂಡಿವೆಯೇ ? ಸಾಮಾಜಿಕವಾಗಿ, ಆರ್ಥಿಕವಾಗಿ, ಅದಕ್ಕೂ ಹೆಚ್ಚಾಗಿ ಮಾನಸಿಕವಾಗಿ ನಾವು ಸ್ವತಂತ್ರರೇ ? ಇಲ್ಲ, ಖಂಡಿತ ಇಲ್ಲ ! ಏ ಆಜಾದಿ ಝೂಟ್ ಹೈ !... ಇತ್ಯಾದಿ, ಇತ್ಯಾದಿ."

ನಮಗೆ ಸ್ವಾತಂತ್ರ್ಯ ಬಂತು, ಈಗ ನಾವು ಸ್ವತಂತ್ರರು ಎಂದು ವರ್ಷಕ್ಕೊಮ್ಮೆ ಸಂಭ್ರಮಿಸಿ ಸಿಹಿ ಹಂಚಿ, ತಿಂದು, ಮುಖ ಒರೆಸಿ, ಮನೆಯತ್ತ ಹೋಗುವುದು ಒಂದೆಡೆಯಾದರೆ, ನಮಗೆ ನಿಜವಾದ ಸ್ವಾತಂತ್ರ್ಯ ಬರಲೇ ಇಲ್ಲ ಎಂದು ವ್ಯಗ್ರರಾಗುವುದು ಅಥವಾ ರೋದಿಸುವುದು ಇನ್ನೊಂದೆಡೆ. ಇವೆರಡೂ ಒಂದೇ ಉತ್ಸವದ ಆಚರಣೆಯಲ್ಲಿ ಕಾಣುವಂತಹದ್ದು. ಇದರಲ್ಲಿ ಯಾವ ವೈರುಧ್ಯವನ್ನೂ ನಾವು ಕಾಣುವುದಿಲ್ಲ. ಏಕೆಂದರೆ ವಾಸ್ತವದಲ್ಲಿ ಇಲ್ಲಿ ಯಾವ ವಿರೋಧಾಭಾಸವೂ ಇಲ್ಲ. ಇದನ್ನು ತಿಳಿಯಬೇಕಾದರೆ ಸ್ವಾತಂತ್ರ್ಯ ಚಳುವಳಿಯ ಸ್ವರೂಪವನ್ನು ಅರ್ಥಮಾಡಿಕೊಳ್ಳುವುದು ಅವಶ್ಯ.

ಸ್ವಾತಂತ್ರ್ಯ ಚಳುವಳಿಯು ಬ್ರಿಟಿಷ್ ಆಳ್ವಿಕೆಯ ವಿರುದ್ಧ ನಡೆದದ್ದು. ಅದು ರಾಷ್ಟ್ರೀಯ ಕಾಂಗ್ರೆಸ್ಸಿನ ಮುಂದಾಳುತನದಲ್ಲಾಯಿತು ಎನ್ನುವುದು ಒಂದು ಗಟ್ಟಿಯಾದ ಪರಿಕಲ್ಪನೆ. ಅದು ವಿವಿಧ ಹಂತಗಳಲ್ಲಿ, ಸಂದರ್ಭಗಳಲ್ಲಿ, ಸಾರಥ್ಯಗಳಲ್ಲಿ ನಡೆಯಿತು ಎನ್ನುವುದೂ ಸಾಮಾನ್ಯವಾಗಿ ಒಪ್ಪಿದ ವಿಚಾರ. ಆದರೆ ಅದರೊಂದಿಗೆ ರೂಪುಗೊಂಡದ್ದು, ಅದರೊಡನೆ ಅಂತರ್ಗತವಾದದ್ದು ಹಾಗೂ ಅದನ್ನು ಮೀರಿ ಬೆಳೆದದ್ದು ಭಾರತದ ರಾಷ್ಟ್ರೀಯತೆ. ಎಷ್ಟೋ ಬಾರಿ ನಾವು ಸ್ವಾತಂತ್ರ್ಯ ಚಳುವಳಿಯನ್ನು ರಾಷ್ಟ್ರೀಯ ಚಳುವಳಿಯೊಡನೆ ಸಮೀಕರಿಸಿ ಅದಕ್ಕೊಂದು ಬೃಹತ್ ವೇದಿಕೆಯನ್ನು ನೀಡುತ್ತೇವೆ. ಇದು ಚಳುವಳಿಯ ಹುಮ್ಮಸ್ಸನ್ನು ಪ್ರಕಟಿಸುವಷ್ಟು ಅದರ ಮೌಲ್ಯಗಳನ್ನು ವಿವರಿಸುವುದಿಲ್ಲ. ರಾಷ್ಟ್ರೀಯತೆಯ ವಿಕಾಸವು ತನ್ನೊಳಗೆ ರೂಢಿಸಿಕೊಂಡ ಅನೇಕ ಆಶಯ, ಆತಂಕಗಳನ್ನು ತೆರೆದಿಡುವುದಿಲ್ಲ. ನಮ್ಮ ಸ್ವಾತಂತ್ರ್ಯ ಸಂಗ್ರಾಮವು ಮುಗಿದ ಘಟನೆ. ಬ್ರಿಟಿಷರ ಧ್ವಜ ಕೆಳಗಿಳಿದು ನಾವು ನಮ್ಮ ರಾಷ್ಟ್ರಧ್ವಜವನ್ನೇರಿಸಿದಾಗ ಸ್ವಾತಂತ್ರ್ಯ ಸಂಗ್ರಾಮವು ಕೊನೆಗೊಂಡಿತು. ಮುಂದಿನ ದಿನಗಳಲ್ಲಿ ಬ್ರಿಟಿಷ್ ಆಳ್ವಿಕೆಯ ನೆನಪುಗಳನ್ನು, ಪಳಿಯುಳಿಕೆಗಳನ್ನು ಅಳಿಸಿಹಾಕುವ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಸ್ವಾತಂತ್ರ್ಯ ಚಳುವಳಿಯ ಮನೋಲಹರಿಯನ್ನು ಮುಂದುವರಿಸಿದರೂ ಆಗಸ್ಟ್ ೧೫ರ ಸಾರ್ಥಕತೆ ಸರ್ವವಿದಿತ. ಅದಿಲ್ಲದಿದ್ದರೆ ನಮ್ಮ ಸ್ವಾತಂತ್ರ್ಯೋತ್ಸವಕ್ಕೆ ಅರ್ಥವೇ ಇರುವುದಿಲ್ಲ. ಆದರೆ ಅದರೊಳಗೆ ಒಂದು ಅಪೂರ್ಣತೆಯ ಭಾವನೆ ಕಾಡುವುದೇಕೆ ?

ಬ್ರಿಟಿಷರ ಆಳ್ವಿಕೆಯನ್ನು ಕೊನೆಗಾಣಿಸುವುದು ನಮ್ಮ ಸ್ವಾತಂತ್ರ್ಯ ಚಳುವಳಿಯ ಏಕಮಾತ್ರ ಗುರಿಯಾಗಿತ್ತು ಎಂದುಕೊಂಡರೆ ನಮ್ಮ ಇತಿಹಾಸದ ಈ ಕಾಲಘಟ್ಟವನ್ನು ನಾವು ತುಂಬ ಸರಳೀಕರಿಸಿ ನೋಡಿದಂತಾಗುತ್ತದೆ. ಅಥವಾ ನಮ್ಮ ಚಳುವಳಿಯ ತೀವ್ರತೆಯನ್ನು ತಾಳಲಾರದೆ ಬ್ರಿಟಿಷ್ ಆಳರಸರು ಭಾರತದಿಂದ ಕಾಲುಕಿತ್ತರು ಎಂಬ ಚಿತ್ರಣವೂ ಇತಿಹಾಸದ ಸಂಕೀರ್ಣ ಒತ್ತಡ, ಪರಿಣಾಮಗಳನ್ನು ಕಡೆಗಣಿಸುತ್ತದೆ. ಆಂಗ್ಲರ ಆಗಮನದೊಡನೆ ಭಾರತದಲ್ಲಿ ಅಲ್ಲಲ್ಲಿ ಪ್ರತಿಭಟನೆ, ಅವರ ವಿರುದ್ಧ ಹೋರಾಟಗಳು ಕಾಣತೊಡಗಿದವು. ಅನೇಕ ರಾಜರು, ತುಂಡರಸರು ತಮ್ಮದೇ ಆದ ಬೇರೆಬೇರೆ ಕಾರಣಕ್ಕಾಗಿ ಅವರನ್ನು ವಿರೋಧಿಸಿದರು. ಅವುಗಳನ್ನೆಲ್ಲಾ ಸ್ವಾತಂತ್ರ್ಯ ಸಂಗ್ರಾಮದ ಮಹಾಗಾಥೆಯಲ್ಲಿ ಸೇರಿಸುವುದು ರಾಷ್ಟ್ರೀಯತೆಯ ಒಂದು ಸಾಮಾನ್ಯ ಲಕ್ಷಣ. ಆದರೆ ೧೮೫೭ರ ಮಹಾ ಪ್ರತಿಭಟನೆಯು ದಮನಗೊಂಡ ನಂತರ ಅಂತಹ ನೇರ ಹಿಂಸಾತ್ಮಕ ಪ್ರತಿಭಟನೆಗಳು ಮುಕ್ತವಾಗಿ ಪ್ರಕಟವಾದದ್ದು ಕಡಿಮೆ. ಭಾರತದಲ್ಲಿ ಅಳಿದುಳಿದ ರಾಜಪತ್ಯಗಳು ಬ್ರಿಟಿಷ್ ಆಳ್ವಿಕೆಗೆ ಅಧೀನವಾಗಿ ಬಹುತೇಕ ಮೂಕಮೂರ್ತಿಗಳಾಗಿ ರಾರಾಜಿಸಿದವು. ಇದನ್ನು ದೇಶದ

ಪ್ರೊ॥ ಬಿ. ಸುರೇಂದ್ರ ರಾವ್



ಒಂದು ಸಂಕ್ರಮಣ ಕಾಲ ಎನ್ನಬಹುದು. ಇಂಗ್ಲಿಷ್ ಶಿಕ್ಷಣ ಮತ್ತು ಪಾಶ್ಚಾತ್ಯ ಜ್ಞಾನಪ್ರಕಾರಗಳಿಂದ ಪ್ರಭಾವಿತರಾದ, ತಮ್ಮ ವಿಚಾರ, ಆಕಾಂಕ್ಷೆಗಳನ್ನು ಮಾತಿನಲ್ಲಿ, ಬರವಣಿಗೆಗಳಲ್ಲಿ ಅಭಿವ್ಯಕ್ತಿಗೊಳಿಸಲು ಶಕ್ತರಾದ 'ಮಧ್ಯಮ ವರ್ಗ'ವು ಹೊಸ ಯುಗದ ಪ್ರವರ್ತಕರಾದರು. ಈ ವರ್ಗದ ಪೌರೋಹಿತ್ಯದಲ್ಲಿ ಆಧುನಿಕ ಭಾರತದ ರಾಷ್ಟ್ರೀಯತೆಯ ನಿರ್ವಚನೆ ಹಾಗೂ ವಿಶದೀಕರಣಗಳು ನಡೆದವು. ಇದು ಯಾವಾಗಲೂ ಬ್ರಿಟಿಷ್ ಆಳ್ವಿಕೆಯ ವಿರುದ್ಧವಾಗಿಯೇ ನಡೆಯಿತು ಎನ್ನುವುದು ಕಷ್ಟ. ಪರ್ಯಾಯವಾಗಿ ಇದು ವಸಾಹತುಶಾಹಿಯ ಸಂದರ್ಭದಲ್ಲಿ, ಅದರೊಡನೆ ಸಂವಾದ ರೂಪದಲ್ಲಿ, ಅದಕ್ಕೆ ಪ್ರತಿಕ್ರಿಯೆಯಾಗಿ ನಡೆದದ್ದು; ಅದನ್ನು ಬೌದ್ಧಿಕವಾಗಿ ಅನಾವರಣಗೊಳಿಸಿ, ಅದರಲ್ಲಿ ಕೆಲವನ್ನು ನೆಚ್ಚಿ, ಇನ್ನು ಕೆಲವನ್ನು ನಿರಾಕರಿಸಿ ನಡೆದ ಸಂಕೀರ್ಣ ಪ್ರಕ್ರಿಯೆ ಎನ್ನುವುದು ಹೆಚ್ಚು ಸೂಕ್ತ.

ಹತ್ತೊಂಭತ್ತನೆಯ ಶತಮಾನದ ಧಾರ್ಮಿಕ ಮತ್ತು ಸಾಮಾಜಿಕ ಸುಧಾರಣೆಗಳು ಈ ಬಗೆಯ ಸಂವಾದದಿಂದ ಹುಟ್ಟಿಕೊಂಡಂಥವು. ಭಾರತದ ಸಮಾಜ, ಧರ್ಮ ಮತ್ತು ಸಂಸ್ಕೃತಿಯನ್ನು 'ಯುಟಿಲಿಟೇರಿಯನಿಸಂ'ನಂಥ ಸಿದ್ಧಾಂತದ ಅಥವಾ ಕ್ರೈಸ್ತ ಮಿಷನರಿಗಳ ಟೀಕೆಗಳ ಒರೆಗೆ ಹಚ್ಚಿದಾಗ ಅವುಗಳಲ್ಲಿ ಕಂಡುಬಂದ ಊನ, ನ್ಯೂನತೆಗಳನ್ನು ಒಪ್ಪಿಕೊಂಡು, ಅವುಗಳನ್ನು ನಿವಾರಿಸಿ, 'ಆಧುನಿಕತೆ'ಯನ್ನು ಸ್ವಾಗತಿಸಲು ಮುಂದೆ ಬಂದದ್ದು ಪಾಶ್ಚಾತ್ಯ ಜ್ಞಾನ–ವಿಜ್ಞಾನಗಳಿಂದ ಪ್ರಭಾವಿತರಾದ 'ಮಧ್ಯಮ ವರ್ಗ'. ಇಲ್ಲಿ ವಸಾಹತುಶಾಹಿಯ ಯಾಜಮಾನ್ಯವನ್ನು ಕಾಣುವುದು ಸುಲಭ. ಇದನ್ನು ಪ್ರತಿಭಟಿಸಿ, ನಮ್ಮ ಸಮಾಜ–ಸಂಸ್ಕೃತಿಯು ಪರಿಪೂರ್ಣ, ನಿಷ್ಕಳಂಕ; ಅದಕ್ಕೆ ಯಾವ ದುರಸ್ತಿಯೂ ಬೇಕಿಲ್ಲ; ಬೇಕಿದ್ದರೂ ಅದರ ಪಾಠವನ್ನು ಪಾಶ್ಚಾತ್ಯರಿಂದ ಕಲಿಯುವ ಅವಶ್ಯಕತೆ ಏನೇನೂ ಇಲ್ಲ, ಎಂಬ ಸಂಪ್ರದಾಯವಾದಿ ನಿಲುವುಗಳೂ ಆಗ ಪ್ರಕಟಗೊಂಡವು. ಈ ಚರ್ಚೆ–ವಿವಾದಗಳನ್ನು ದೇಶೀಯತೆ – ರಾಷ್ಟ್ರೀಯತೆಯ ದೃಷ್ಟಿಯಲ್ಲಿ ನೋಡಿದಾಗ ಸಮಾಜದ ಆಧುನಿಕ ಧುರೀಣರು ವಸಾಹತುಶಾಹಿ ಯಾಜಮಾನ್ಯವನ್ನು ಒಪ್ಪಿಕೊಂಡಂತೆ ಹಾಗೂ ಸಂಪ್ರದಾಯವಾದಿಗಳು ದೇಶದ ಸಂಸ್ಕೃತಿಯ ಸಂರಕ್ಷಣೆಯ ಬಿಚ್ಚುಗತ್ತಿ ಬಂಟರಂತೆ ಕಾಣಲು ಸಾಧ್ಯ. ಆದರೆ ಬದಲಾಗದ ಸಮಾಜ ನಿರ್ಜೀವ ಸಮಾಜ. ಬದಲಾಗುವ ಜಗತ್ತಿನಲ್ಲಿ ಬದಲಾವಣೆಗೆ ತೆರೆದುಕೊಳ್ಳಲು ನಿರಾಕರಿಸಿದರೆ ಸಮಾಜವು ತಿರೋಗಾಮಿಯಾಗುತ್ತದೆ. ಆದರೆ ಬದಲಾವಣೆಯು ನಿದ್ರಾಸಂಚಾರವಾಗಬಾರದು, ಅದು ವಿಮರ್ಶಾತ್ಮಕ ನೆಲೆಯಲ್ಲಾಗಬೇಕು. ಹತ್ತೊಂಭತ್ತನೇ ಶತಮಾನದ ಸುಧಾರಣೆಗಳು ಸಮಾಜದ ಮೇಲ್ವರ್ಗವನ್ನು ಮಾತ್ರ ಉದ್ದೇಶಿಸಿತ್ತು; ಅವುಗಳಲ್ಲಿ ಕೆಲವು ಆಧುನಿಕತೆಯ ಸೋಗಿನಲ್ಲಿ ನಡೆದವು, ಬಹುತೇಕ ಪುರುಷಪ್ರಧಾನ ನೆಲೆಯಲ್ಲಿ ನಿರ್ದೇಶಿಸಲ್ಪಟ್ಟಿದ್ದು, ಆದುದರಿಂದ ಅವುಗಳ ವ್ಯಾಪ್ತಿ ತೀರ ಸಂಕುಚಿತ ಎಂಬ ಆಪಾದನೆಯೂ ಇದೆ. ಇದು

## ನೆನಪು

ಲೇಖಕ, ನಟ, ಉತ್ತಮ ಸಂಘಟಕರಾಗಿದ್ದು ರಂಗಭೂಮಿ ಮತ್ತು ಜಾನಪದ ಲೋಕದಲ್ಲಿ ಹೆಸರು ಗಳಿಸಿದ್ದ ಡಾ॥ ಬಸವರಾಜ ಮಲಶೆಟ್ಟಿ ಅವರು ಇತ್ತೀಚೆಗೆ ನಿಧನರಾಗಿದ್ದಾರೆ. ಅವರು 'ನವಕರ್ನಾಟಕ ಸಾಹಿತ್ಯ ಸಂಪದ' ಮಾಲಿಕೆಯ 'ಚಂದ್ರಶೇಖರ ಕಂಬಾರ' ಎಂಬ ಕೃತಿ ರಚನೆ ಮಾಡಿಕೊಟ್ಟಿದ್ದನ್ನು ಸ್ಮರಿಸುತ್ತ ಮಲಶೆಟ್ಟಿ ಅವರ ನಿಧನಕ್ಕೆ 'ಹೊಸತು' ಮತ್ತು ನವಕರ್ನಾಟಕ ಬಳಗವು ತೀವ್ರ ಸಂತಾಪ ವ್ಯಕ್ತಪಡಿಸುತ್ತದೆ.

ಸತ್ಯವೇ. ಆದರೆ ಸುಧಾರಣಾ ಮನೋಧರ್ಮ ದೇಶದಲ್ಲಿ ನೆಲೆಯೂರಲು ಇದು ಕಾರಣವಾಯಿತು. ಅದು ವಸಾಹತುಶಾಹಿ ಸಂದರ್ಭದಲ್ಲಿ, ಅದರಿಂದ ಪ್ರೇರಿತವಾಗಿ ನಡೆಯಿತು ಎನ್ನುವುದು ಇತಿಹಾಸದಲ್ಲಿ ನಿರಾಕರಿಸಲಾಗದ ಸತ್ಯ. ಸುಧಾರಣೆಗಳ ವ್ಯಾಪ್ತಿ ಹೆಚ್ಚಬೇಕು, ಸಮಾಜದಲ್ಲಿ ಇನ್ನೂ ಹಠಮಾರಿಯಾಗಿ ನೆಲೆಸಿದ ಅನೇಕ ಪಿಡುಗುಗಳನ್ನು ನಿಗ್ರಹಿಸಬೇಕೆಂಬ ಧೋರಣೆ ಹಾಗೂ ಅದಕ್ಕೆ ಸಂಪ್ರದಾಯವಾದಿಗಳ ವಿರೋಧ ಸ್ವತಂತ್ರ ಭಾರತದಲ್ಲೂ ಕಾಣಬರುವ ವಿಚಾರ.

ಬ್ರಿಟಿಷರ ಆಳ್ವಿಕೆಯಿಂದ ಮುಕ್ತಿ ಪಡೆಯಬೇಕು ಎಂಬುದು ನಮ್ಮ ಸ್ವಾತಂತ್ರ್ಯ ಚಳುವಳಿಯ ಹೆಗ್ಗುರಿಯಾಗಿದ್ದರೂ, ಅದರೊಳಗೆ ಸ್ವಾತಂತ್ರ್ಯವನ್ನು ಅನೇಕರು ಅನೇಕ ರೀತಿಯಲ್ಲಿ ಪರಿಭಾವಿಸಿದ್ದನ್ನು ಕಾಣುತ್ತೇವೆ. ವಸಾಹತುಶಾಹಿ ಆರ್ಥಿಕ ವ್ಯವಸ್ಥೆಯ ಬೆಳವಣಿಗೆ, ಬಿಕ್ಕಟ್ಟುಗಳಲ್ಲಿ ಅದರ ವಿವಿಧ ಘಟಕಗಳು ಅದಕ್ಕೆ ವಿವಿಧ ರೀತಿಯಲ್ಲಿ ಪ್ರತಿಕ್ರಿಯೆ ನೀಡಿದ್ದನ್ನು ನೋಡಬಹುದು. ಕೈಗಾರಿಕೀಕರಣವು ಸೃಷ್ಟಿಸಿದ ಸಂಪತ್ತಿನ ನ್ಯಾಯಯುಕ್ತ ಹಂಚಿಕೆಯಿಂದ ವಂಚಿತರಾದ ಕಾರ್ಮಿಕ ವರ್ಗಗಳ ಪ್ರತಿಭಟನೆಗಳು ಎಷ್ಟೋ ಬಾರಿ ರಾಜಕೀಯ ಸ್ವರೂಪವನ್ನು ಪಡೆದವು. ಬ್ರಿಟಿಷ್ ಸರಕಾರದ ಕಂದಾಯ ಧೋರಣೆ ಹಾಗೂ ಕ್ಷಾಮಕಾಲದಲ್ಲಿ ರೈತರ ಕ್ಷೇಮವನ್ನು ನಿರ್ಲಕ್ಷಿಸುವ ಸರಕಾರದ ವಿರುದ್ಧ ರೈತಾಪಿ ಜನರು ಆಗಾಗ ದನಿ ಎತ್ತಿದರು. ಅವರ ಸ್ವಾತಂತ್ರ್ಯದ ಕಲ್ಪನೆ ಅವರ ಜೀವನ ನಿರ್ವಹಣೆಗೆ ಸಂಬಂಧಿಸಿದ್ದು; ಆದರೆ ಸಾಂದರ್ಭಿಕವಾಗಿ ಅದಕ್ಕೆ ರಾಜಕೀಯ ಅರ್ಥ ಹಾಗೂ ಉಪಯೋಗ ಒದಗಿಬಂತು. ದೇಶದ ಬುಡಕಟ್ಟು ಜನಾಂಗಗಳು ತಮ್ಮ ಜೀವನೋಪಾಯ, ಜೀವನಶೈಲಿ ಅಥವಾ ಸಾಂಸ್ಕೃತಿಕ ನೆಲೆಗಳಿಗೆ ಬಾಹ್ಯ ಶಕ್ತಿಗಳಿಂದ ದಾಳಿಯಾಗಿದೆ, ಅಪಾಯ ಬಂದಿದೆ ಎಂದುಕೊಂಡಾಗ ಸಿಡಿದೆದ್ದು ಪ್ರತಿಭಟಿಸಿದ್ದನ್ನು ಕಾಣುತ್ತೇವೆ. ಈ ಎಲ್ಲಾ ಪ್ರತಿಭಟನೆಗಳನ್ನು ಸ್ವಾತಂತ್ರ್ಯ ಚಳುವಳಿಯ ವಿವಿಧ ಅಂಶಗಳು, ಜನರು ವಸಾಹತುಶಾಹಿಯ ವಿರುದ್ಧ ಎತ್ತಿದ ದನಿಗಳು ಎಂದು ಪರಿಭಾವಿಸಲಾಗಿದೆ. ಕೆಲವೊಮ್ಮೆ ಆರ್ಥಿಕ ಮತ್ತು ಸಾಮಾಜಿಕ ಅಶಾಂತಿಯನ್ನು ಧುರೀಣರು ರಾಜಕೀಯವಾಗಿ ಉಪಯೋಗಿಸಿ ಬ್ರಿಟಿಷ್ ಆಳ್ವಿಕೆಯ ವಿರುದ್ಧ ಪ್ರತಿಭಟನೆಯನ್ನು ರೂಪಿಸಿದ್ದುಂಟು. 'ಸಬಾಲ್ಟರ್ನ್ ಇತಿಹಾಸಕಾರರು' ಈ ಚಿತ್ರಣವನ್ನು ನಿರಾಕರಿಸಿ, ಕಾರ್ಮಿಕ ವರ್ಗ, ರೈತಾಪಿ ಜನ, ಬುಡಕಟ್ಟು ಜನಾಂಗ ಮತ್ತಿತರ ಕೆಳಸ್ತರದ ಮಂದಿ ಗಣ್ಯರ ಆಲೋಚನಾ ವಿಧಿ ಅಥವಾ ಕಾರ್ಯಕ್ರಮಗಳನ್ನು ಮುಗ್ಧವಾಗಿ ಅನುಮೋದಿಸದೆ, ಅವುಗಳಿಗೆ ತಮ್ಮದೇ ಆದ ನೆಲೆಗಳಲ್ಲಿ ಪ್ರತಿಕ್ರಿಯೆ ನೀಡಿದರು ಎಂದು ವ್ಯಾಖ್ಯಾನಿಸಿದ್ದಾರೆ. ಇದರ ಬಗ್ಗೆ ಬಹಳಷ್ಟು ಚರ್ಚೆ ನಡೆದಿದೆ. ಈಗ ಸಬಾಲ್ಟರ್ನ್ ಇತಿಹಾಸ ಕಥನದ ಉಬ್ಬರದ ಕಾಲ ಕೊನೆಗೊಂಡಿದೆ. ಅದರೊಳಗಿಂದ ಕೆಳಸ್ತರದ ಮಂದಿ ಅಂತರ್ಧಾನರಾಗಿದ್ದಾರೆ ಎಂಬ ಆಪಾದನೆಯೂ ಸತ್ಯ. ಅದನ್ನೆಲ್ಲಾ ಈಗ ರಚನೋತ್ತರ–ಆಧುನಿಕೋತ್ತರ ವಾದಗಳನ್ನು ಪುಷ್ಟೀಕರಿಸುವಲ್ಲಿ ಉಪಯೋಗಿಸಲಾಗುತ್ತಿದೆ ಎಂಬ ಮಾತಿನಲ್ಲೂ ಹುರುಳಿಲ್ಲದಿಲ್ಲ. ಕೆಳಸ್ತರದ ಮಂದಿಯ ಹೋರಾಟಗಳನ್ನು ರಾಷ್ಟ್ರೀಯತೆಯ ನೆಲೆಯಲ್ಲಿ ನೋಡಬೇಕೇ, ವರ್ಗ ಸಂಹಿತೆಯೊಳಗಿಟ್ಟು ಅರ್ಥೈಸ ಬೇಕೇ ಅಥವಾ ಸಬಾಲ್ಟರ್ನ್ ಇತಿಹಾಸಕಾರರು ನೀಡಿದ ಸ್ವಾಯತ್ತತೆಯ ಚೌಕಟ್ಟಿನಲ್ಲಿ ಪರಿಭಾವಿಸಬೇಕೇ ಎಂಬ ಚರ್ಚೆ ಇತಿಹಾಸದ ರಚನೆಯಲ್ಲಿ ಸಮಾರೋಪ ಗೊಂಡಿಲ್ಲ. ಹಾಗಾಗುವುದು ಇತಿಹಾಸ ಕಥನದಲ್ಲಿ ಮುಖ್ಯವಲ್ಲ. ಆದರೆ ಸ್ವಾತಂತ್ರ್ಯ ಚಳುವಳಿಯಲ್ಲಿ ನಾವು ಕಾಣುವ ಕೆಳಸ್ತರ ಮಂದಿಯ ಹೋರಾಟಗಳು ಇಂದಿಗೂ ಜೀವಂತವಾಗಿವೆ. ಈ ಹೋರಾಟಗಳ ಕ್ರಮ, ಅಭಿವ್ಯಕ್ತಿಗಳು ಬದಲಾದರೂ ಅವುಗಳ ಆಶಯ, ಹೋರಾಟಗಳು ಪ್ರಸ್ತುತವಾಗಿಯೇ ಇವೆ. ಇವು ಬಗೆಹರಿಯದ ಸಮಸ್ಯೆಗಳ ಕಥೆಯೇ? ಆಳುವವರು ಬದಲಾದರೂ ಆಳ್ವಿಕೆಯ ನೀತಿ, ವಿಧಾನಗಳು ಬದಲಾಗದ್ದು ಕಾರಣವೇ? ಅಥವಾ ಅದು ನಮ್ಮ ಸ್ವಾತಂತ್ರ್ಯದ ಕಲ್ಪನೆ ಮತ್ತು ಸಾಧನೆಗಳಲ್ಲಿ ಏರ್ಪಟ್ಟ ಅಂತರವೇ? ಎಂಬ ಪ್ರಶ್ನೆಗಳು ಜಿಜ್ಞಾಸೆಗೆ ಆಮಂತ್ರಣ ನೀಡುತ್ತಲೇ ಇರುತ್ತವೆ.

ನಮ್ಮ ಸ್ವಾತಂತ್ರ್ಯ ಚಳುವಳಿಯು ಜಾತ್ಯತೀತ ನೆಲೆಯಲ್ಲಿ ನಡೆಯಿತು; ಅದಕ್ಕೆ ಆಗಾಗ ಆತಂಕಗಳನ್ನೊಡ್ಡಿದ ಕೋಮುವಾದವನ್ನು ನಿಗ್ರಹಿಸಿ ಅಥವಾ ಅದನ್ನು ಮೀರಿ ರಾಷ್ಟ್ರೀಯ ಕಾಂಗ್ರೆಸ್ಸಿನ ನೇತೃತ್ವದಲ್ಲಿ ಈ ಚಳುವಳಿ ನಡೆಯಿತು; ಆ ಆದರ್ಶವನ್ನು ಸ್ವತಂತ್ರ ಭಾರತವು ಜತನದಿಂದ ಕಾಪಾಡಿಕೊಂಡು ಬಂದಿದೆ ಎಂಬ ಹೆಮ್ಮೆಯ ಮಾತನ್ನು ನಾವು ಕೇಳುತ್ತಾ ಬಂದಿದ್ದೇವೆ. ಜಾತ್ಯತೀತ ಆದರ್ಶವನ್ನು ಹಾಗೂ ಅದರ ಬುನಾದಿಯ ಮೇಲೆ ಆಧುನಿಕ ಸಮಾಜವನ್ನು ರೂಪಿಸಬೇಕೆಂದುಕೊಂಡವರಿಗೆ ಇದೆಲ್ಲಾ ಆಪ್ಯಾಯಮಾನವಾಗುತ್ತದೆ. ಆದರೆ ಸ್ವಾತಂತ್ರ್ಯ ಚಳುವಳಿಯಲ್ಲಿ ನಾವು ಕೇವಲ ಜಾತ್ಯತೀತ ವಿಚಾರ ಸಂಹಿತೆ ಹಾಗೂ ಕಾರ್ಯಾಚರಣೆಗಳನ್ನು ಗುರುತಿಸುವುದು ಅಥವಾ ಅದನ್ನು ವಿರೋಧಿಸಿದವುಗಳನ್ನು ಕೋಮುವಾದವೆಂದು ತಿಳಿಯುವುದು ಎಷ್ಟು ಸರಿ? ಧರ್ಮಾಧಾರಿತ

ರಾಷ್ಟ್ರೀಯತೆಯನ್ನು ನಾವು ಒಪ್ಪದಿರಬಹುದು; ಆದುದರಿಂದಲೇ ಅದನ್ನು ಕೋಮುವಾದವೆಂದು ತಿರಸ್ಕರಿಸಿದ್ದು ಎನ್ನೋಣ. ಆದರೆ ಧರ್ಮಾಧಾರಿತ ರಾಷ್ಟ್ರೀಯತೆಯನ್ನು ಮುಸ್ಲಿಮ್ ಲೀಗ್, ಹಿಂದೂ ಮಹಾಸಭಾ, ರಾಷ್ಟ್ರೀಯ ಸ್ವಯಂ ಸೇವಕ ಸಂಘ, ಅಕಾಲಿದಳ, ಮೊದಲಾದವುಗಳು ಎತ್ತಿ ಹಿಡಿದವು. ಅದರ ಬಗ್ಗೆ ಚರ್ಚೆ ಕಹಿಯಾದಾಗ ಅದಕ್ಕೆ 'ಸಾಂಸ್ಕೃತಿಕ ರಾಷ್ಟ್ರೀಯತೆ' ಎಂಬ ಗೌರವದ ಪೇಟವನ್ನೂ ತೊಡಿಸಲಾಯಿತು. ಈ ವಾಡಿಕೆ ಇಂದಿಗೂ ಮುಂದುವರಿದಿದೆ. ಕೆಲವೊಮ್ಮೆ ನೇರನುಡಿಯಲ್ಲಿ, ಇನ್ನು ಕೆಲವೊಮ್ಮೆ ಸೌಮ್ಯೋಕ್ತಿಯಲ್ಲಿ ಇದರ ಚರ್ಚೆ ನಡೆದಿದೆ. 'ದ್ವಿರಾಷ್ಟ್ರ' ಕಲ್ಪನೆಯನ್ನು ಧರ್ಮಾಧಾರಿತ ರಾಷ್ಟ್ರೀಯತೆಯ ವಕ್ತಾರರಾದ ಹಿಂದು ಮತ್ತು ಮುಸ್ಲಿಮ್ ರಾಜಕೀಯ ಪಂಗಡಗಳೆರಡೂ ಪ್ರತಿಪಾದಿಸಿದವು. ಇದು ಸೃಷ್ಟಿಸಿದ್ದು ಮೇಲಾಟದ ರಾಜಕೀಯ. ಒಂದೇ ಆಲೋಚನಾ ಕ್ರಮಗಳನ್ನು ಸಮಾನ ಪದಪುಂಜಗಳಲ್ಲಿ ಹೆಣೆದು ಒಬ್ಬರ ವಿರುದ್ಧ ಇನ್ನೊಬ್ಬರು ಎಸೆದಾಗ ಅವುಗಳು ಕ್ಷಿಪಣಿಗಳಾದುವು; ಘಾಸಿಮಾಡುವ ಅಸ್ತ್ರಗಳಾದುವು. ಜಾತ್ಯತೀತ–ಧರ್ಮಾಧಾರಿತ ರಾಷ್ಟ್ರೀಯತೆಗಳೊಳಗಷ್ಟೇ ಅಲ್ಲ, ಧರ್ಮಾಧಾರಿತ ರಾಜಕೀಯದೊಳಗೂ ಪರಸ್ಪರ ವೈಷಮ್ಯ ಏರ್ಪಟ್ಟಿತು. ಬ್ರಿಟಿಷ್ ಆಳ್ವಿಕೆಯನ್ನು ಕೊನೆಗೊಳಿಸುವುದು ಧರ್ಮಾಧಾರಿತ ರಾಷ್ಟ್ರೀಯತೆಯ ಏಕಮಾತ್ರ ಕಾರ್ಯಸೂಚಿಯಾಗಿರಲಿಲ್ಲ. ಅದರ ಆಶಯ, ವ್ಯಾಪ್ತಿಗಳು ದೊಡ್ಡದಿತ್ತು. ಅದರಲ್ಲಿ ಮುಸ್ಲಿಮ್‌ಲೀಗ್ ದೇಶದ ವಿಭಜನೆಯನ್ನು ಆಗ್ರಹಿಸಿದರೆ ಹಿಂದೂ ಸಂಘಟನೆಗಳು ಅದನ್ನು ತೀವ್ರವಾಗಿ ಪ್ರತಿಭಟಿಸಿದವು. ಭಾವನಾತ್ಮಕವಾಗಿ ದೇಶದ ವಿಭಜನೆಯು ತೀವ್ರ ಯಾತನೆಯನ್ನು ನೀಡಿತು. ಅದನ್ನು ಕಾರ್ಯಗತಗೊಳಿಸುವಾಗ ಅಲ್ಲಿ ಅರಿವಳಿಕೆ ತಜ್ಞರಾಗಲೀ ಶಸ್ತ್ರವೈದ್ಯರಾಗಲೀ ಇರಲಿಲ್ಲ; ಅಲ್ಲಿ ಕೆಲಸ ಮಾಡಿದ್ದು ಕಸಾಯಿ ಮನೋಧರ್ಮ. ಇದು ನೀಡಿದ ನೋವು ಇನ್ನೂ ಮಾಸಿಲ್ಲ. ಎರಡು ದೇಶಗಳೂ ಅದನ್ನು ಮಾಸಲೂ ಬಿಟ್ಟಿಲ್ಲ. ಅದು ಭಾರತ–ಪಾಕಿಸ್ತಾನ ಸಂಬಂಧಗಳ ಮೇಲೆ ಸಾಕಷ್ಟು ಪ್ರಭಾವ ಬೀರಿದೆ. ಆದರೆ ತಾರ್ಕಿಕವಾಗಿ 'ದ್ವಿರಾಷ್ಟ್ರ'ದ ಚೌಕಟ್ಟಿನಲ್ಲಿ ಅಥವಾ ಕಲ್ಪನಾ ನೆಲೆಯಲ್ಲಿ ದೇಶದ ಅಖಂಡತೆಯನ್ನಾದರೂ ಹೇಗೆ ಪ್ರತಿಪಾದಿಸಲು ಸಾಧ್ಯ ಎಂಬ ಪ್ರಶ್ನೆಗೆ ಸಮರ್ಪಕ ಉತ್ತರ ಲಭ್ಯವಿಲ್ಲ.

ನಾವು ಸ್ವತಂತ್ರರಾದಾಗ ಮುಸ್ಲಿಮ್ ಲೀಗ್ ತನ್ನ ಧರ್ಮಾಧಾರಿತ ರಾಷ್ಟ್ರೀಯ ಚಳುವಳಿಯಲ್ಲಿ ಯಶಸ್ಸನ್ನು ಕಂಡು ಪಾಕಿಸ್ತಾನವನ್ನು ಗೆದ್ದುಕೊಂಡಿತು. ಅದೇ ಯಶಸ್ಸು ಹಿಂದೂ ರಾಷ್ಟ್ರೀಯತೆಗೆ ಒದಗಲಿಲ್ಲ ಎಂಬ ಹತಾಶೆ ಸ್ವಾತಂತ್ರ್ಯದ ಸಂಭ್ರಮವನ್ನು ಕಹಿಯಾಗಿಸಿತು. ಆ ಯಶಸ್ಸಿನ ಸಾಧ್ಯತೆಯನ್ನು ಕಸಿದುಕೊಂಡದ್ದು ಜಾತ್ಯತೀತ ರಾಷ್ಟ್ರೀಯತೆಯ ಪ್ರತಿಪಾದಕರು ಎಂಬ ರೋಷ, ಆರೋಪ ಸ್ವತಂತ್ರ ಭಾರತದಲ್ಲಿ ಉಳಿಯಿತು, ಬೆಳೆಯಿತು. ಇದಕ್ಕೆ ರಾಜಕೀಯ ವೇದಿಕೆಯೂ ಸಿಕ್ಕಿದೆ. ಇದೆಲ್ಲಾ ನಮಗೆ ಗೊತ್ತಿರುವ ಅಥವಾ ನಾವು ಅನುಭವಿಸುತ್ತಿರುವ ಸಂಗತಿ. ಆದರೆ ಹಿಂದೂ ರಾಷ್ಟ್ರೀಯತೆಯ ಕಲ್ಪನೆ ಅಥವಾ ಪ್ರತಿಪಾದನೆ ಕೇವಲ ಹಿಂದೂ ಸಂಘಟನೆಗಳಿಗೆ ಸೀಮಿತವಾಗಿರಲಿಲ್ಲ. ಸ್ವಾತಂತ್ರ್ಯ ಚಳುವಳಿಯಲ್ಲಿ ಜಾತ್ಯತೀತವೆಂದು ಘೋಷಿಸಿಕೊಂಡ ರಾಷ್ಟ್ರೀಯ ಕಾಂಗ್ರೆಸ್ಸನ್ನು ಕೇವಲ ಹಿಂದುಗಳ ಪಕ್ಷ ಎಂದು ಸರ್ ಸಯ್ಯದ್ ಅಹ್ಮದ್ ಖಾನ್ ಮತ್ತು ಮುಂದೆ ಸ್ಥಾಪಿತವಾದ ಮುಸ್ಲಿಮ್ ಲೀಗ್ ಗ್ರಹಿಸಿ, ವ್ಯವಹರಿಸಿದ್ದು ಗಮನಾರ್ಹ. ನಮ್ಮ ಗುರುತು, ಅಸ್ಮಿತೆಗಳನ್ನು ಸ್ವಗ್ರಹಿಕೆ ಮಾತ್ರ ನಿರ್ಧರಿಸುವುದಿಲ್ಲ; ಅದು ಇನ್ನೊಬ್ಬರ ಗ್ರಹಿಕೆಯ ಮೇಲೆಯೂ ಆಧರಿಸಿದೆ. ಕಾಂಗ್ರೆಸ್ ಜಾತ್ಯತೀತತೆಯ ಗಾಳಿಪಟವನ್ನು ಅದೆಷ್ಟು ಹಾರಿಸಿದರೂ, ಅನೇಕ ಪ್ರಮುಖ ಕಾಂಗ್ರೆಸಿಗರು ಪ್ರಚ್ಛನ್ನ ಹಿಂದೂವಾದಿಗಳಾಗಿದ್ದರು ಅಥವಾ ಹಾಗೆ ಕಂಡುಬಂದರು. ಅನೇಕರು ಧರ್ಮದ ಲೇಪವನ್ನು ಕಳೆದುಕೊಳ್ಳಲು ಅಶಕ್ತರಾಗಿದ್ದರು. ರಾಜಕೀಯದಲ್ಲಿ ಅಧಿಕೃತ ಘೋಷಣೆಗೂ ವಾಸ್ತವಕ್ಕೂ ದೊಡ್ಡ ಅಂತರ ಇರುವುದು ಎಲ್ಲರಿಗೂ ಗೊತ್ತಿರುವ ವಿಷಯವೇ. ರಾಷ್ಟ್ರೀಯ ಇತಿಹಾಸಕಾರರು ಬಹುತೇಕವಾಗಿ ಪ್ರಾಚೀನ ಭಾರತದ 'ಹಿಂದೂ ಯುಗ'ವನ್ನು ವೈಭವೀಕರಿಸಿದರು; ಮಧ್ಯಕಾಲೀನ 'ಮುಸ್ಲಿಮ್ ಯುಗ'ದ ಬಗ್ಗೆ ಅವರ ನಿಲುವು ಬ್ರಿಟಿಷ್ ಇತಿಹಾಸಕಾರರದ್ದೇ ಆಗಿತ್ತು. ಇತಿಹಾಸ ಪರ್ವಗಳ ವಿಂಗಡನೆಯಲ್ಲೂ ಅವರು ಬ್ರಿಟಿಷ್ ಇತಿಹಾಸಕಾರರ ಮಾರ್ಗದರ್ಶನವನ್ನು ಉಲ್ಲಂಘಿಸಲಿಲ್ಲ. 'ಮುಸ್ಲಿಮ್ ಯುಗ'ವು ನಮಗೆ ಸೇರಿದ್ದಲ್ಲ ಎಂಬ ಅವರ ನಿಲುವು, ಅದಕ್ಕೆ ಪೂರಕವಾಗಿ ಆ ಯುಗಕ್ಕೆ ನಾವು ಮಾತ್ರ ವಾರಸುದಾರರು ಎಂಬ ಮುಸ್ಲಿಮ್ ಇತಿಹಾಸಕಾರರ ಧೋರಣೆ ಧಾರ್ಮಿಕ ರಾಷ್ಟ್ರೀಯತೆಗೆ ಹಾಗೂ ಹಿಂದೂ–ಮುಸ್ಲಿಮ್ ವಿಭಜನೆಗೆ ಸಾಕಷ್ಟು ಪುಷ್ಟಿ ನೀಡಿತು.

> ನಮಗೆ ಸ್ವಾತಂತ್ರ್ಯ ಬಂತು, ಈಗ ನಾವು ಸ್ವತಂತ್ರರು ಎಂದು ವರ್ಷಕ್ಕೊಮ್ಮೆ ಸಂಭ್ರಮಿಸಿ ಸಿಹಿ ಹಂಚಿ, ತಿಂದು, ಮುಖ ಒರೆಸಿ, ಮನೆಯತ್ತ ಹೋಗುವುದು ಒಂದೆಡೆಯಾದರೆ, ನಮಗೆ ನಿಜವಾದ ಸ್ವಾತಂತ್ರ್ಯ ಬರಲೇ ಇಲ್ಲ ಎಂದು ವ್ಯಗ್ರರಾಗುವುದು ಅಥವಾ ರೋದಿಸುವುದು ಇನ್ನೊಂದೆಡೆ. ಇವೆರಡೂ ಒಂದೇ ಉತ್ಸವದ ಆಚರಣೆಯಲ್ಲಿ ಕಾಣುವಂತಹದ್ದು. ಇದರಲ್ಲಿ ಯಾವ ವೈರುಧ್ಯವನ್ನೂ ನಾವು ಕಾಣುವುದಿಲ್ಲ. ಏಕೆಂದರೆ ವಾಸ್ತವದಲ್ಲಿ ಇಲ್ಲಿ ಯಾವ ವಿರೋಧಾಭಾಸವೂ ಇಲ್ಲ. ಇದನ್ನು ತಿಳಿಯಬೇಕಾದರೆ ಸ್ವಾತಂತ್ರ್ಯ ಚಳುವಳಿಯ ಸ್ವರೂಪವನ್ನು ಅರ್ಥಮಾಡಿಕೊಳ್ಳುವುದು ಅವಶ್ಯ.

ಸ್ವಾತಂತ್ರ್ಯ ಚಳುವಳಿಯಲ್ಲಿ ಹಿಂದೂ–ಮುಸ್ಲಿಮ್ ಏಕತೆ ಒಂದು ಆದರ್ಶವಾಗಿದ್ದದ್ದು ಮಾತ್ರವಲ್ಲ, ದೊಡ್ಡ ಸವಾಲೂ ಆಗಿತ್ತು. ವಾಸ್ತವದಲ್ಲಿ ಆ ಏಕತೆ ಇದ್ದಿದ್ದರೆ ಅದು ಆದರ್ಶವಾಗುತ್ತಿರಲಿಲ್ಲ, ಸವಾಲೂ ಆಗಿರುತ್ತಿರಲಿಲ್ಲ. ಅಲ್ಲಲ್ಲಿ ಇದರ ಸಾಧನೆಯಾದದ್ದು ಹಂಗಾಮಿ ನೆಲೆಯಲ್ಲಿ ಮಾತ್ರ. ಆಗಾಗ ಹೊತ್ತಿ ಉರಿದ ಕೋಮು ದಳ್ಳುರಿ, ದೇಶದ ವಿಭಜನೆ, ಇದಕ್ಕೆ ಸಾಕ್ಷಿ. ಇದರ ವಿರುದ್ಧ ಮಹಾತ್ಮಾ ಗಾಂಧಿಯವರ ಹೋರಾಟ, ಉಪವಾಸ ಸತ್ಯಾಗ್ರಹಗಳು ಆದರ್ಶಗಳಾಗಿದ್ದಷ್ಟು ಸವಾಲಿಗೆ ಉತ್ತರವಾಗಿ ಪರಿಣಮಿಸಲಿಲ್ಲ. ಹಾಗಾಗಿದ್ದರೆ ಅವರು ಹುತಾತ್ಮರಾಗುವ ಸಂದರ್ಭವೂ ಒದಗುತ್ತಿರಲಿಲ್ಲ. ಸ್ವತಂತ್ರ ಭಾರತದಲ್ಲೂ ಹಿಂದು – ಮುಸ್ಲಿಮ್ ಏಕತೆಯು ಆದರ್ಶವಾಗಿ, ಘೋಷಣೆಯಾಗಿ, ರಾಜಕೀಯ ದಾಳವಾಗಿ, ಸವಾಲಾಗಿ ಉಳಿದಿದೆ. 'ನಾವೆಲ್ಲರೂ ಒಂದೇ' ಎಂಬುದು ಒಂದು ರಾಜಕೀಯ ಹೇಳಿಕೆಯಾದರೆ ಇನ್ನೊಂದು ನೆಲೆಯಲ್ಲಿ ಅಲ್ಪಸಂಖ್ಯಾತರ ತುಷ್ಟೀಕರಣದ ಬಗ್ಗೆ ಆಕ್ರೋಶದ ನುಡಿ, ಅವರು ಎಲ್ಲರೊಡನೊಂದಾಗದ ಅನಿಷ್ಟ ಎಂಬ ಆರೋಪ, ಹಾಗೂ ಅವರನ್ನು ಪಾಕಿಸ್ತಾನಕ್ಕೆ ರವಾನಿಸುವುದೇ ದೇಶದ ಹಿತ ಎಂಬ ಮಾತುಗಳು ಆಗಾಗ ಕೇಳಿಬರುತ್ತವೆ. ನಮ್ಮ ಧರ್ಮಾಚರಣೆಯೇ ನಮ್ಮ ಸರ್ವಸ್ವ, ಅದೇ ನಮ್ಮ ಅಸ್ಮಿತೆ ಎನ್ನುವವರೂ ರಾಜಕೀಯ ಲಾಭಕ್ಕೆ ಜಾತ್ಯತೀತ ಧ್ವಜವನ್ನು ಹಾರಿಸುವುದನ್ನೂ ಕಾಣುತ್ತೇವೆ. ಹಿಂದುಗಳು ಮುಸ್ಲಿಮರನ್ನು ಬೇರೆಯಾಗಿ ಇಟ್ಟರೇ, ಅಥವಾ ಮುಸ್ಲಿಮರು ಬೇರೆಯಾಗಿ ಉಳಿದರೇ, ಯಾವುದಕ್ಕೆ ಯಾರು ಕಾರಣ ಎಂಬುದು ಮುಗಿಯದ ಚರ್ಚೆ. ಅದನ್ನು ಮುಗಿಸದೆ ಇರುವುದು, ಅಥವಾ ಈ ಸಮಸ್ಯೆಗೆ ಪರಿಹಾರವನ್ನು ಪ್ರಾಮಾಣಿಕವಾಗಿ ಹುಡುಕದೇ ಇರುವುದು ರಾಜಕೀಯವಾಗಿ ಲಾಭದಾಯಕ ಎಂಬ ಸಿನಿಕತನಕ್ಕೆ ಆಧಾರ ಇಲ್ಲದೇನಿಲ್ಲ. ಆದರೆ ಈ ಸಮಸ್ಯೆಯು ಸ್ವಾತಂತ್ರ್ಯ ಚಳುವಳಿಯ ಬಳುವಳಿ ಎನ್ನುವುದು ಅಷ್ಟೇ ಸತ್ಯ.

ನಮ್ಮ ರಾಷ್ಟ್ರೀಯತೆಯ ಬೆಳವಣಿಗೆಯಲ್ಲಿ ಸ್ವಾತಂತ್ರ್ಯದ ಕಲ್ಪನೆಯು ಬೇರೆ ಬೇರೆ ರೀತಿಯಲ್ಲಿ ಪ್ರಕಟಗೊಂಡಿತು ಎಂಬ ಸತ್ಯವನ್ನು ಗುರುತಿಸುವುದು ಅಗತ್ಯ. ದೇಶದ ಬೇರೆಬೇರೆ ಭಾಗಗಳಲ್ಲಿ, ಭಾಷಿಕ, ಸಾಂಸ್ಕೃತಿಕ ನೆಲೆಗಳಲ್ಲಿ ಅದು ಹೊರಹೊಮ್ಮಿತು. ಪ್ರತ್ಯೇಕತೆಯ ಭಾವನೆಗಳು ಹುಟ್ಟಿಕೊಂಡರೂ ಅವುಗಳು ಘೋಷಣೆಗಳಾಗಿ ಬೆಳೆಯಲಿಲ್ಲ; ರಾಷ್ಟ್ರಗಾನದ ಶ್ರುತಿಯೊಳಗೆ ಸೇರಿಹೋಯಿತು. ಆದರೆ ಸ್ವತಂತ್ರ ಭಾರತದಲ್ಲಿ ಈ ಸ್ವರಮೇಳಗಳು ಕೇಳಿಬರುವುದು ಹೆಚ್ಚು ಅಪರೂಪವಾಗಿದೆ. ಹಾಗೆಯೇ ದೇಶದ ವಿವಿಧ ಭಾಗಗಳಲ್ಲಿ ನಡೆದ ಬ್ರಾಹ್ಮಣೇತರ ಚಳುವಳಿಗಳು, 'ಆತ್ಮಗೌರವ' ಚಳುವಳಿಗಳು, ದಲಿತ ಸಂವೇದನೆಗಳು

ಮತ್ತು ಚಳುವಳಿಗಳು ನಮ್ಮ ಸಮಾಜದ ವಿವಿಧ ಘಟಕಗಳು ತಮ್ಮ ಸ್ವಾತಂತ್ರ್ಯವನ್ನು ಪರಿಭಾವಿಸಿದ ಬಗೆ ಮತ್ತು ಅದನ್ನು ಗಳಿಸಲು ನಡೆಸಿದ ಹೋರಾಟಗಳನ್ನು ಅನಾವರಣಗೊಳಿಸುತ್ತವೆ. ಬ್ರಿಟಿಷ್ ಆಳ್ವಿಕೆಯನ್ನು ಕೊನೆಗೊಳಿಸಿದಾಗ ದೇಶಕ್ಕೆ ದೊರಕುವ ಸ್ವಾತಂತ್ರ್ಯ ಸಮಾಜದ ಎಲ್ಲಾ ಸ್ವಾತಂತ್ರ್ಯಗಳಿಂದ ವಂಚಿತರಾದ ದಲಿತ ವರ್ಗಕ್ಕೆ ಯಾವ ಬಗೆಯ ಸ್ವಾತಂತ್ರ್ಯ, ಸಾಂತ್ವನವನ್ನು ನೀಡಲು ಸಾಧ್ಯ ? ಎಂಬ ಡಾ॥ ಅಂಬೇಡ್ಕರ್ ಅವರ ಸವಾಲು ನಮ್ಮ ಸ್ವಾತಂತ್ರ್ಯದ ಕಲ್ಪನೆಯನ್ನು, ಅದನ್ನು ಒದಗಿಸುವ ನಮ್ಮ ಸಮಾಜದ ರಚನೆ ಮತ್ತು ಜಿಗುಟು ನಿಲುವನ್ನು ಮೂಲಭೂತವಾಗಿ ಪ್ರಶ್ನಿಸಿತು. ಶ್ರೇಣೀಕೃತ ಸಮಾಜದಲ್ಲಿ, ಅದರಿಂದ ನಿರ್ದೇಶಿತವಾದ ಜಾತಿ ಸಂಬಂಧಗಳಲ್ಲಿ ಸ್ವಾತಂತ್ರ್ಯ, ಗೌರವಗಳು ಸಾಪೇಕ್ಷವಾದವುಗಳು; ಮೇಲ್ವರ್ಗಕ್ಕೆ ಅವು ಲಭ್ಯವಾದಷ್ಟು ಕೆಳಸ್ತರಕ್ಕೆ ದೊರಕಲು ಅಸಾಧ್ಯ. ಅದರಲ್ಲೂ ದಲಿತವರ್ಗಕ್ಕೆ ಸ್ವಾತಂತ್ರ್ಯವನ್ನು ನಿರಾಕರಿಸುವಲ್ಲಿ ಎಲ್ಲರೂ ಕೈಜೋಡಿಸುವವರೇ. 'ನಮ್ಮಲ್ಲಿ ನೆಲೆಯೂರಿದ ಜಾತಿಪದ್ಧತಿಯನ್ನು ನಿರ್ಮೂಲಗೊಳಿಸುವ ತನಕ ನಮ್ಮ ಸ್ವಾತಂತ್ರ್ಯದ ಕಲ್ಪನೆ ಭ್ರಮೆಯಾಗಿಯೇ ಉಳಿಯುತ್ತದೆ' ಎಂಬ ಅಂಬೇಡ್ಕರರ ನಿಲುವು ನಮ್ಮ ಸ್ವಾತಂತ್ರ್ಯ ಚಳುವಳಿಯ ಆಶಯ, ವ್ಯಾಪ್ತಿಗಳನ್ನು ಹೆಚ್ಚಿಸಿತು. ನಮ್ಮ ಸ್ವಾತಂತ್ರ್ಯ ಹರಣಕ್ಕೆ ಬ್ರಿಟಿಷರು ಮಾತ್ರ ಕಾರಣರಲ್ಲ; ನಮ್ಮ ಸಾಮಾಜಿಕ ವ್ಯವಸ್ಥೆಯೂ ಇದರಲ್ಲಿ ಸಶಕ್ತವಾಗಿ ಭಾಗವಹಿಸಿದೆ. ಬ್ರಿಟಿಷರು ನಮ್ಮ ದೇಶವನ್ನು ಬಿಟ್ಟುಹೋದ ಮಾತ್ರಕ್ಕೆ ನಮಗೆ ಸ್ವಾತಂತ್ರ್ಯ ಸಿಗುವುದಿಲ್ಲ. ಅದನ್ನು ನಾವು ನಮ್ಮಿಂದಲೇ ಗಳಿಸಬೇಕು, ಎಂಬ ವಾದವನ್ನು ಜಾತಿವಾದಿಗಳು ಅಪಸ್ವರ ಎಂದದ್ದುಂಟು. ಆದರೆ ನಿಜ ಅರ್ಥದಲ್ಲಿ ಇದು ಸ್ವಾತಂತ್ರ್ಯದ, ಸ್ವಾತಂತ್ರ್ಯ ಚಳುವಳಿಯ ಹೊಸ, ಸತ್ಯನಿಷ್ಠುರವಾದ ನಿರ್ವಚನೆ. ಇದರ ಸತ್ಯವನ್ನು ಸ್ವತಂತ್ರ ಭಾರತವು ಮನಗಂಡಿದೆ. ಈ ಸ್ವಾತಂತ್ರ್ಯ ಚಳುವಳಿ ಮುಗಿದಿಲ್ಲ ಎಂಬುದನ್ನೂ ತಿಳಿದಿದೆ. ಇದು ವಸಾಹತುಶಾಹಿಯ ವಿರುದ್ಧ ನಡೆಯುವ ಚಳುವಳಿಯಲ್ಲ; ನಮ್ಮಿಂದ ನಾವೇ ಸ್ವಾತಂತ್ರ್ಯವನ್ನು ಕಸಿದುಕೊಳ್ಳುವ ಪ್ರವೃತ್ತಿಯ ವಿರುದ್ಧ ನಡೆಯುವ ಸಂಗ್ರಾಮ. ಇದು ಬದಲಾಗಬೇಕಾದ ಸಮಾಜವು ಬದಲಾಗಲೊಲ್ಲದ ಸಮಾಜದ ವಿರುದ್ಧ ನಡೆಯುವ ಸೆಣಸಾಟ. ಇದೇ ಅರ್ಥದಲ್ಲಿ ಸಮಾಜದ ವಿವಿಧ ಜಾತಿಗಳು ತಮ್ಮ ಆಕಾಂಕ್ಷೆಗಳನ್ನು ಪ್ರಕಟಿಸಿದುವು. ಹೊಸ ರಾಷ್ಟ್ರದ ಕಲ್ಪನೆಯಲ್ಲಿ ತಮ್ಮ ಸ್ಥಾನವೇನು ? ಎಂಬ ಪ್ರಶ್ನೆಯನ್ನು ಅಪ್ರಸ್ತುತ ವೆಂದಾಗಲೀ, ಬ್ರಿಟಿಷರ ವಿರುದ್ಧ ನಡೆದ ಹೋರಾಟದ ಮಹತ್ವವನ್ನು ನಿರಾಕರಿಸುವ ಬಗೆ ಎಂದಾಗಲೀ ಗ್ರಹಿಸುವುದು ತಪ್ಪು. ಇದನ್ನು ರಾಷ್ಟ್ರೀಯತೆಯ ಪ್ರಕಟನೆಯ ಮಾದರಿಗಳಲ್ಲಿ ಒಂದು ಎನ್ನುವುದು ಹೆಚ್ಚು ಸೂಕ್ತ.

ರಾಷ್ಟ್ರೀಯತೆಯ ಪರಿಕಲ್ಪನೆ ಮತ್ತು ರಾಷ್ಟ್ರವನ್ನು ಕಟ್ಟುವ ಪ್ರಕ್ರಿಯೆಗೆ ಸಮಾರೋಹ ಎಂದಿಲ್ಲ. ಇವು ನಿರಂತರವಾಗಿ ನಡೆಯುವಂಥವು. ಇವುಗಳನ್ನು ಪ್ರತಿದಿನವೂ ಜನಾಭಿಪ್ರಾಯಕ್ಕೆ ಸಮರ್ಪಿಸಬೇಕು ಎಂಬ ಮಾತಿದೆ. ಇದರೊಳಗೆ ಅನೇಕ ಸಂಕೀರ್ಣ ಶಕ್ತಿಗಳು ಕೆಲಸ ಮಾಡುತ್ತವೆ. ಅವೆಲ್ಲವೂ ಇಂದಿನವುಗಳೇ ಅಲ್ಲ. ಸ್ವಾತಂತ್ರ್ಯ ಚಳುವಳಿಯ ದಿನಗಳ ಆಶೆ, ಆಕಾಂಕ್ಷೆಗಳು ಈ ಪ್ರಕ್ರಿಯೆಯಲ್ಲಿ ಸೇರಿವೆ. ನಮ್ಮ ಸಂವಿಧಾನದಲ್ಲಿಯೂ ಅವುಗಳು ಅಡಕವಾಗಿವೆ; ಆದರೆ ಅವುಗಳು ಅಪೂರ್ಣ ಎಂಬ ಭಾವನೆ ಹಾಗೂ ಅವುಗಳನ್ನು ಪೂರ್ಣಗೊಳಿಸುವ ತವಕವೂ ಅಲ್ಲಿದೆ. ಮುಂದಿನ ದಿನಗಳಲ್ಲಿ ಆಗಬೇಕಾದ ಬದಲಾವಣೆಗಳ ಕಲ್ಪನೆಗಳೂ ಇವೆ. ಈ ಕಲ್ಪನೆಗಳೂ ಬದಲಾಗುತ್ತಿರುತ್ತವೆ. ನಮಗೆ ಸಿಕ್ಕಿದ ಸ್ವಾತಂತ್ರ್ಯದಲ್ಲಿ ಹುರುಳಿಲ್ಲ, ಅದು ಅಪೂರ್ಣ ಎಂಬ ಸಿನಿಕತನ ಒಂದು ರೀತಿಯಲ್ಲಿ ಆರೋಗ್ಯಕರ ನಿಲುವು. ಅದು ನಮ್ಮಲ್ಲಿ ರಾಷ್ಟ್ರೀಯತೆ ಜೀವಂತವಾಗಿದೆ, ರಾಷ್ಟ್ರ ಕಟ್ಟುವ ಕಾರ್ಯ ನಿರಂತರವಾಗಿ ನಡೆಯುತ್ತಿದೆ ಎಂಬುದರ ಸಂಕೇತ ಅದು.

**ಪ್ರೊ॥ ಬಿ. ಸುರೇಂದ್ರ ರಾವ್**
'ಅಮೃತವರ್ಷಿಣಿ', ಅಸೈಗೋಳಿ, ಕೊಣಾಜೆ, ಮಂಗಳಗಂಗೋತ್ರಿ
ದಕ್ಷಿಣ ಕನ್ನಡ ಜಿಲ್ಲೆ – ೫೭೪ ೧೯೯

ಕಾವ್ಯಲೋಕ

# ಅವ್ವ ಮೊಮ್ಮಗಳು



ಅವ್ವ ಹುಟ್ಟಿದ್ದಾಳೆ ಮೊಮ್ಮಗಳ ರೂಪದಲ್ಲಿ
ಅವ್ವ ಅವ್ವಯ್ಯಾ ಜಗದ ಕಾರುಣ್ಯ ಮಿಂಚುಗಣ್ಣು
ಬಳಗ ಸುತ್ತಿನಲ್ಲಿ ಹಾಲೂಡಿ ಬಂದ ತಣಿವು
ಅಂತರಂಗವ ಬೆಳಗೋ ಅನಾದಿ ಬಳ್ಳಿತೇರು

ಮಾತು ಕಲಿಯುವ ತುಟಿಯ ಮುಗ್ಧ ಚೆಲುವಿನ
ಲಯಕೆ
ಅರ್ಥ ಬೆರಗಾಯಿತ್ತು ಆನಂದ ತುಂಬಿ
ತುಳುಕಾಡಿತ್ತು
ಪುಟ್ಟಪಾದದ ಬೆಡಗು ಮೃದು ಮಧುರ ಸಿಹಿ
ಬೆಳಗು
ಪಾವನವಾದವು ನನ್ನ ತುಟಿ ತಟವಟದ
ಕೊಳೆ ಕಳೆದು

ಅವಳ ಕರಸೋಂಕಿನಲಿ ನೆನೆದ ಧರಣಿಯ ಕರುಣೆ
ಕನವರಿಸಿ ಹರಿದಂತೆ ಕೋಟಿ ಜನ್ಮದ ಜೀವಪಸೆ
ಎಲ್ಲಿದ್ದೆ ಎಲೆ ಮಗಳೆ ಜಗದ ಬೆರಗಿನ ತವರೆ
ನಿರ್ಮಲತೆ ನಗುವಾದ ರಶ್ಮಿ ರೂಪದಾ ಗೆಲುವೆ

ನಿನ್ನ ಸಾನಿಧ್ಯದಲ್ಲಿ ಸಣ್ಣತನ ಕರಗಿದವು
ಬಣ್ಣಬಣ್ಣದ ಕನಸು ಗರಿಗೆದರಿ ಹಾಡಿದವು
ಒಳಿತೆಂಬುದಿದ್ದರೆ ಅದು ನಿನ್ನ ರೂಪಿನ ಚೆಲುವು
ಕಲ್ಯಾಣ ಬಸವಣ್ಣ ಬುದ್ಧಬೆಳಗಿನ ಗೆಲುವು

**ಡಾ॥ ಸಿದ್ಧರಾಮಯ್ಯ ಎಸ್. ಜಿ.**
ಎಸ್–೧೫೨, ದೀಪ್ತಿ ಅಪಾರ್ಟ್‌ಮೆಂಟ್ಸ್, ಎಫ್–೨
ಕಿರ್ಲೋಸ್ಕರ್ ಕಾಲೋನಿ, ೧ನೇ ಅಡ್ಡರಸ್ತೆ, ಬಸವೇಶ್ವರನಗರ
ಬೆಂಗಳೂರು – ೫೬೦ ೦೭೯







ವೈ. ಸಿ. ಸುಬ್ರಮ್ಮಣ್ಯ

# ರಕ್ಷಣಾ ಉತ್ಪಾದನೆ ಮತ್ತು ವಿದೇಶಿ ನೇರ ಹೂಡಿಕೆ

ಎರಡನೇ ಮಹಾಯುದ್ಧ ನಿಂತ ನಂತರ ಪ್ರಪಂಚದಲ್ಲಿ ಹೆಚ್ಚು ಕಡಿಮೆ ಎಲ್ಲೆಲ್ಲೂ ವ್ಯಾಪಿಸಿದ್ದ ಸಾಮ್ರಾಜ್ಯಶಾಹಿಯನ್ನು ಹಿಮ್ಮೆಟ್ಟಿಸಿ ಅನೇಕ ದೇಶಗಳು ಸ್ವಾತಂತ್ರ್ಯ ಸಾಧಿಸಿಕೊಂಡಾಗ ಈ ದೇಶಗಳೆಲ್ಲವೂ ಬಹುತೇಕ ಪ್ರಗತಿಯಲ್ಲಿ ಬಹಳ ಹಿಂದುಳಿದಿದ್ದ ದೇಶಗಳಾಗಿದ್ದವು. ಇಲ್ಲಿನ ಜನಜೀವನದ ಮಟ್ಟ ಬಹಳ ಕಡಿಮೆ ದರ್ಜೆಯದಾಗಿತ್ತು. ಸ್ವಾಭಾವಿಕವಾಗಿಯೇ ಪ್ರಗತಿ ಹೊಂದಬೇಕು ಎನ್ನುವುದೂ ಜನಜೀವನವನ್ನು ಉತ್ತಮಗೊಳಿಸಬೇಕೆನ್ನುವುದೂ ಈ ದೇಶಗಳ ಗುರಿಯಾಯಿತು. ಆದರೆ, ಇದಕ್ಕೆಲ್ಲಾ ಬೇಕಾದ ಬಂಡವಾಳದ ಮೊತ್ತವು ಸಾಧಿಸಬೇಕಾದ ಗುರಿಯ ಗಾಢತೆಗೆ ಹೋಲಿಸಿದರೆ ಅತಿ ಕಡಿಮೆಯಾಗಿತ್ತು. ಸಾಲ ಪಡೆಯುವುದು ಒಂದು ದಾರಿಯಾದರೂ ಅದೇನೂ ಆಕರ್ಷಕವಾಗಿರಲಿಲ್ಲ.

ಇಂತಹ ಸ್ಥಿತಿಯಲ್ಲಿ ಪ್ರಗತಿಶೀಲ ರಾಷ್ಟ್ರಗಳು ಬಂಡವಾಳದ ಕೊರತೆ ಇರದಿದ್ದ, ಮುಖ್ಯವಾಗಿ ಪಾಶ್ಚಾತ್ಯ ದೇಶಗಳು ಹಾಗೂ ಅಮೆರಿಕ, ದೇಶಗಳಿಂದ ಬೆಂಬಲ ಪಡೆಯಲು ತವಕಿಸಿದರು. ಆ ದೇಶದವರೇ ಇಲ್ಲಿನ ದೇಶಗಳಲ್ಲಿ ತಮ್ಮ ಹೆಚ್ಚಿನ ಬಂಡವಾಳವನ್ನು ಹೂಡಿಕೆ ಮಾಡಿ ತಮ್ಮ ಪ್ರಗತಿಗೂ ಸಹಾಯವಾಗುವ ಮಾರ್ಗವನ್ನು ಅನುಸರಿಸಲು ಹೆಜ್ಜೆ ಇಟ್ಟವು. ಇದೇ ಎಫ್‌ಡಿಐ ಅಥವಾ ವಿದೇಶಿ ನೇರ ಬಂಡವಾಳ ಹೂಡಿಕೆ ಎಂದಾಯಿತು. ಈ ವಿದೇಶಿ ನೇರ ಬಂಡವಾಳ ಹೂಡಿಕೆಯನ್ನು ಆಕರ್ಷಿಸಲು ಪ್ರಗತಿಶೀಲ ರಾಜ್ಯಗಳಲ್ಲಿ ಒಂದು ಸ್ಪರ್ಧೆ ಶುರುವಾಯಿತೆನ್ನಬಹುದು. ಈ ಹೂಡಿಕೆಯು ಉತ್ಪಾದನೆ ಮತ್ತು ಸೇವಾಕ್ಷೇತ್ರಗಳಲ್ಲಿ ಬೇರೆ ಬೇರೆ ಮಟ್ಟದಲ್ಲಿ ಅನುಮತಿ ಪಡೆದರೂ, ರಕ್ಷಣಾ ಉತ್ಪಾದನೆಯ ಬಗ್ಗೆ ಒಂದು ತೀವ್ರ ಎಚ್ಚರಿಕೆ ಇದ್ದಿತು. ಅದರಲ್ಲೂ ನಮ್ಮ ದೇಶದಲ್ಲಿ ಅದು ವಿಶೇಷವಾಗಿದ್ದಿತು. ಆದಾಗ್ಯೂ ಎಫ್‌ಡಿಐ ಪರವಾದ ಮುಂದಾಳುಗಳು ಈ ಕ್ಷೇತ್ರವನ್ನು ಅದರಲ್ಲಿ ಅಳವಡಿಸುವ ಪ್ರಯತ್ನವನ್ನು ಬಿಡಲಿಲ್ಲ. ನಮ್ಮಲ್ಲಿ ರಕ್ಷಣಾ ಉತ್ಪಾದನೆಯನ್ನು ಸಂಪೂರ್ಣವಾಗಿ ಸರ್ಕಾರದ ಸಂಸ್ಥೆಗಳಲ್ಲಿ ಇಲ್ಲವೇ ಸಾರ್ವಜನಿಕ ಕ್ಷೇತ್ರಗಳಲ್ಲಿಯೇ ಕಾದಿರಿಸಲಾಗಿತ್ತು. ಇಷ್ಟಾದರೂ ಈ ಕ್ಷೇತ್ರವನ್ನು ಶೇಕಡ ೨೬ರವರೆಗೆ ತೆರೆಯಲು ಸ್ವಲ್ಪ ಕಾಲದ ಹಿಂದೆ ತೀರ್ಮಾನಿಸಲಾಯಿತು. ಇದರಿಂದ ಏನೂ ಪ್ರಯೋಜನವಾಗಲಿಲ್ಲ. ೧೦೦% ಹೂಡಿಕೆ ಆಗಬೇಕೆಂದು ಸರ್ಕಾರದ ಕೆಲವು ವಲಯಗಳಲ್ಲೇ ಒತ್ತಡ ಹೇರಲಾಗುತ್ತಲೇ ಇತ್ತು. ಈಗಂತೂ, ಕೇಂದ್ರದ ಹೊಸ ಸರ್ಕಾರ ಬಂದ ಮೇಲೆ ಇದರ ಬಗ್ಗೆ ಕೇಳಿಬರುತ್ತಿರುವ ಹೇಳಿಕೆಗಳು ಬಲವಾಗುತ್ತಿವೆ. ಇದಕ್ಕೆ ಪ್ರಧಾನ ಮಂತ್ರಿಗಳ ಬೆಂಬಲ ಮತ್ತು ಸಮ್ಮತಿ ಇದ್ದೇ ಇದೆಯೆಂದು ಹೇಳಿದರೆ ಅದು ತಪ್ಪಾಗಲಾರದೆನ್ನಿಸುತ್ತೆ.

ಆದ್ದರಿಂದ ರಕ್ಷಣಾ ಕ್ಷೇತ್ರ, ರಕ್ಷಣಾ ಬಲದ ದಿಶೆ, ಇವುಗಳ ಬಗ್ಗೆ ಕಾರ್ಯಕ್ರಮಗಳನ್ನು ಕುರಿತಂತೆ ಪ್ರಧಾನಿಯವರ ಇತ್ತೀಚಿನ ಹೇಳಿಕೆಗಳನ್ನು ಗಮನಿಸಿದರೆ, ನಮ್ಮ ರಕ್ಷಣಾ ಉತ್ಪಾದನೆಯ ಮತ್ತು ಅದರಲ್ಲಿ ಎಫ್‌ಡಿಐನ ಪಾತ್ರ – ಇವನ್ನು ಸಮಗ್ರವಾಗಿ ಅರ್ಥ ಮಾಡಿಕೊಳ್ಳಲು ಅನುವಾಗಬಹುದು.

ಪ್ರಧಾನಿ ಮೋದಿಯವರು ಕಾರ್ಯ ನಿರ್ವಹಣೆ ವಹಿಸಿಕೊಂಡ ನಂತರ, ಕೆಲವೇ ದಿನಗಳಲ್ಲೇ ರಕ್ಷಣಾ ಪಡೆಗಳ ವೀಕ್ಷಣೆಗೆ ಸಮಯ ಮಾಡಿಕೊಂಡರು ಮತ್ತು ಅವರು ಭೇಟಿ ಮಾಡಿದ್ದು ನೌಕಾಪಡೆ – ಅದರಲ್ಲೂ ಪಶ್ಚಿಮ ನೌಕಾ ವಿಭಾಗ. ಅಲ್ಲಿನ ವಿಶೇಷ : ಹೊಸದಾಗಿ ರಷ್ಯದಿಂದ ಪಡೆದ ವಿಮಾನ ವಾಹಕ ನೌಕೆ – ವಿಕ್ರಮಾದಿತ್ಯ. ಇದು ಸುಮಾರು ೪೫,೦೦೦ ಟನ್ ಪ್ರಮಾಣದ್ದಾಗಿದ್ದು, ನೌಕಾಪಡೆಯ ಅತಿ ದೊಡ್ಡ ನೌಕೆ. ಒಂದು ಸಾವಿರದಷ್ಟು ನೌಕಾ ಸೈನಿಕರನ್ನೂ, ಹಲವಾರು ಯುದ್ಧ ವಿಮಾನಗಳನ್ನೂ, ಹೆಲಿಕಾಪ್ಟರ್‌ಗಳನ್ನೂ ಹೊಂದಿದ್ದು, ನಮ್ಮ ಈಗಿರುವಷ್ಟು ಮಟ್ಟಿಗೆ ವಿಶಿಷ್ಟ ಸಾಮರ್ಥ್ಯದ ಕುರುಹಾಗಿದೆ. ಇಂತಹ ನೌಕೆಗೆ ಭೇಟಿ ಆಕಸ್ಮಿಕವಾಗಿರಲಾರದು. ಅಲ್ಲಿ ಅವರು ಹೇಳಿದ ಮಾತಿನ ಇಂಗಿತವೆಂದರೆ ಸುರಕ್ಷಿತ ಸಮುದ್ರ ದಾರಿಗಳು ನಮ್ಮ ಬೆಳವಣಿಗೆಯ ಲೆಕ್ಕಾಚಾರವನ್ನು ಮುನ್ಸಾಗಿಸಬಲ್ಲವು ಎಂದು.

ನಾವು ಸ್ವಾವಲಂಬಿಗಳಾಗುವುದು ಅಸಾಧ್ಯವೇನಲ್ಲ, ಅಷ್ಟೇ ಅಲ್ಲ, ಆಗಲೇಬೇಕು. ಅದಕ್ಕೆ ಈಗಲಾದರೂ ಒಂದು ಮಧ್ಯ-ದೀರ್ಘಾವರ್ತಿಯ ಯೋಜನೆ ಆಗಬೇಕು. ಎಲ್ಲರಿಗೂ ತಿಳಿದಂತೆ ನಮ್ಮಲ್ಲಿ ಒಳ್ಳೆಯ ಮಟ್ಟದ ಉತ್ಪಾದನಾ ಮತ್ತು ತಂತ್ರಜ್ಞಾನದ ದೊಡ್ಡ ತಳಹದಿ ಇದೆ. ರಕ್ಷಣಾ ವಿಭಾಗದ ಸಂಶೋಧನೆ ಮತ್ತು ಅಭಿವೃದ್ಧಿ ಸಂಸ್ಥೆಯ ಮುನ್ನಡೆಯಲ್ಲಿ ಶಸ್ತ್ರಾಸ್ತ್ರ ಪಡೆಗಳವರೂ, ಉತ್ಪಾದಕರೂ ಒಟ್ಟಾಗಿ ಸಕ್ರಿಯವಾಗಿ ಭಾಗಿಗಳಾಗಬೇಕು. ಸ್ವಾವಲಂಬನೆಯಲ್ಲಿ ಶಸ್ತ್ರಾಸ್ತ್ರಪಡೆಗಳ ಕಾಣಿಕೆ ಮತ್ತು ಜವಾಬ್ದಾರಿ ಬಹಳ ಪ್ರಾಮುಖ್ಯವಾದದ್ದು.

ಇದಕ್ಕೆ ಸಮುದ್ರದ ಹೊರವಲಯಗಳಲ್ಲಿ ನಮ್ಮ ಹೆಜ್ಜೆ ಗುರುತುಗಳಿರಬೇಕು, ನಮ್ಮ ಸೇನಾಬಲಗಳ ಸಾಮರ್ಥ್ಯದ ಪ್ರದರ್ಶನವಾಗಬೇಕು. ಇದೆಲ್ಲಕ್ಕೂ ಹೊಸ ತಂತ್ರವಿದ್ಯೆಯ (technology) ಸಮ್ಮಿಲನವಾಗಬೇಕಲ್ಲದೆ, ಆಯುಧ ಇತ್ಯಾದಿಗಳು ಸ್ವಯಂ ನಮ್ಮ ದೇಶದಲ್ಲೇ ನಿರ್ಮಾಣವಾಗಬೇಕು. ಅವರು ಹೀಗೂ ಹೇಳಿದ್ದಾರೆ : ಅಂತಹ ಉತ್ತಮ ಮಟ್ಟದ ಆಧುನಿಕ ಆಯುಧಗಳು ನಮ್ಮ ರಕ್ಷಣಾ ದಳಕ್ಕೂ ಏಕೆ ಸಿಗುವಂತಾಗಬಾರದು ? ಅಲ್ಲದೆ, ಅವು ನಮ್ಮಿಂದ ಇತರ ರಾಷ್ಟ್ರಗಳಿಗೂ ಏಕೆ ದೊರಕಬಾರದು ? ಎಂದು.

'ವಿಕ್ರಮಾದಿತ್ಯ' ಭೇಟಿಯ ಎರಡು ದಿನಗಳ ನಂತರ ಪ್ರಧಾನಿಯವರು ನೆರೆ ರಾಜ್ಯ ಭೂತಾನ್‌ಗೆ ಭೇಟಿ ಕೊಟ್ಟಾಗ ಹೇಳಿದರು, ಬಲಶಾಲಿಯಾದ ಭಾರತವು ನೆರೆ ರಾಷ್ಟ್ರಗಳ ಹಿತಾಸಕ್ತಿಗಳ ಪೂರೈಕೆಗೇನೇ, ಎಂದು.

ಇಷ್ಟಲ್ಲದೆ, ಇನ್ನೂ ಇತ್ತೀಚೆಗೆ (ಜೂನ್ ೨೪) ಹೇಳಿರುವಂತೆ, ಅವರ ಅತ್ಯಂತ ಮುಖ್ಯ ಆಸಕ್ತಿಗಳಲ್ಲಿ ಒಂದು, ರಕ್ಷಣಾ ಪಡೆಗಳ ಅಗತ್ಯಗಳ ಪೂರೈಕೆ.

ಇವೆಲ್ಲವೂ ಹೊಸದೇನಲ್ಲದಿದ್ದರೂ, ಈಗಿರುವ ಹೊಸ ಆಡಳಿತದ ಒಟ್ಟಾರೆ ಮನೋಧರ್ಮ ಮತ್ತು ಧೋರಣೆಗಳ ಹಿನ್ನೆಲೆಯಲ್ಲಿ ಇವೆಲ್ಲವೂ ಬಹಳ ಮಹತ್ವ ಪಡೆಯುತ್ತವೆ.

**ಪೂರೈಕೆಯ ಮಾರ್ಗಗಳು**

೧. ಸಾಕಷ್ಟು ಹಿಂದಿನಿಂದಲೂ ಸ್ಥಾಪಿತವಾಗಿರುವ ಶಸ್ತ್ರಾಸ್ತ್ರ ತಯಾರಿಕಾ ಕಾರ್ಖಾನೆಗಳು.

೨. ಇತ್ತೀಚೆಗೆ ಸ್ಥಾಪಿಸಿರುವ – ತುಲನಾತ್ಮಕವಾಗಿ ಹೇಳುವುದಾದರೆ – ಸಾರ್ವಜನಿಕ ವಲಯದ ಹೆಚ್ಚು ಆಧುನಿಕ ಕಾರ್ಖಾನೆಗಳು.

೩. ಆಮದು.

೪. ಖಾಸಗೀ ವಲಯದ ಸೀಮಿತ ಶಕ್ತಿ.

೫. ವಿದೇಶಿ ನೇರ ಬಂಡವಾಳ ಹೂಡಿಕೆ.

ಈಗಿನ ಉದ್ದೇಶ ಶೇಕಡ ೧೦೦ರಷ್ಟು ವಿದೇಶಿ ಬಂಡವಾಳ ಹೂಡಿಕೆ ಹೌದು. ಆದರೂ, ಈಗಿರುವ ಮತ್ತು ಇನ್ನು ಮುಂದೆ ಸ್ವತಃ ನಾವೇ ನಿರ್ಮಿಸಬಲ್ಲ ಮಾರ್ಗಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿದಲ್ಲಿ, ನಮ್ಮ ಮುಖ್ಯ ಉದ್ದೇಶವನ್ನು ಒಂದು ಯಥಾದೃಷ್ಟಿ ರೂಪಣದಲ್ಲಿ ನೋಡಿದಂತಾಗುವುದರಿಂದ, ಅವುಗಳ ಒಂದು ನೋಟ ಪಡೆಯುವುದು ಸೂಕ್ತ.

**ಭಾರತದ ಆಯುಧ ತಯಾರಿಕಾ ಕೇಂದ್ರಗಳು**

೧೮ನೇ ಶತಮಾನದಲ್ಲಿ ಬ್ರಿಟಿಷರ ಈಸ್ಟ್ ಇಂಡಿಯಾ ಕಂಪನಿಯ ಕಾಲದಲ್ಲೇ ಅಂಕುರಗೊಂಡ ಈ ಕಾರ್ಖಾನೆಗಳು ಈಗ ಆಯುಧ ನಿರ್ಮಾಣದ ಭಾರಿ ಸಂಸ್ಥೆಗಳಾಗಿವೆ. ಸಂಪೂರ್ಣವಾಗಿ ರಕ್ಷಣಾ ಇಲಾಖೆಯ ವಶದಲ್ಲಿರುವ ಇವು ೧೯೪೭ರ ಸ್ವಾತಂತ್ರ್ಯದ ಸಮಯದಲ್ಲಿ ೧೮ ಆಗಿದ್ದು, ಈಗ ದೇಶದ ನಾನಾ ಪ್ರದೇಶಗಳಲ್ಲಿ ಹರಡಿದ್ದು, ೪೧ ಕಾರ್ಖಾನೆಗಳಾಗಿವೆ. ಅವು ಮುಖ್ಯವಾಗಿ ಸೇನೆಗೂ, ಸ್ವಲ್ಪಮಟ್ಟಿಗೆ ವಾಯು ಮತ್ತು ನೌಕಾ ಪಡೆಗಳಿಗೂ, ಆಯುಧಗಳು, ಗುಂಡು ಮತ್ತು ಮದ್ದು, ಟ್ಯಾಂಕ್‌ಗಳು, ಸುರಕ್ಷಿತ ಸೇನಾ ವಾಹನಗಳು, ಸಾಧಾರಣ ವಾಹನಗಳು ಮುಂತಾದುವನ್ನು ತಯಾರು ಮಾಡುತ್ತಿವೆ. ಈ ಸಂಸ್ಥೆಗಳ ಸಂಕೀರ್ಣವು ಪ್ರಪಂಚದಲ್ಲೇ ಒಂದು ಭಾರಿ ಆಯುಧ ನಿರ್ಮಾಣದ ಕೇಂದ್ರವಾಗಿದೆ. ಭಾರತವು ಸ್ವಾತಂತ್ರ್ಯಾನಂತರ ಹೋರಾಡಬೇಕಾಗಿ ಬಂದ ಎಲ್ಲ ಯುದ್ಧಗಳಲ್ಲಿ ಈ ಕಾರ್ಖಾನೆಗಳೇ ಭುಜಬಲವಾಗಿದ್ದವು, ಯಶಸ್ವಿಯಾಗಿದ್ದವು.

ಇತ್ತೀಚಿನ ಒಂದು ಭಾರಿ ಮುನ್ನಡೆಯೆಂದರೆ ಬೋಫೋರ್ಸ್ ಗುಂಡಿನ ಸ್ಥಳೀಯ ಮಾದರಿಯ ತಯಾರಿಕೆಯನ್ನು ಸ್ಥಾಪಿಸಲಾಗಿದ್ದು, ಈಗಾಗಲೇ ಆ ಗುಂಡುಗಳು ನಮ್ಮ ಸೇನೆಯ ಅಂತಿಮ ಪರೀಕ್ಷೆಯಲ್ಲಿವೆ. ಭೂಸೇನೆ ಇವಕ್ಕೆ ಈಗಾಗಲೇ ೧,೨೧೦ ಕೋಟಿ ರೂಪಾಯಿಗಳ ೧೧೪ ಗನ್ನುಗಳ ಆರ್ಡರ್‌ಅನ್ನು ಕೊಟ್ಟಿದೆ. ಇನ್ನೊಂದು ವಿಶೇಷವೆಂದರೆ, ಬೋಫೋರ್ಸ್ ಗನ್ನು ೧೫೫/೩೯ ಗುಣದ್ದಾಗಿದ್ದರೆ, ಸ್ಥಳೀಯ ಮಾದರಿಯು ೧೫೫/೪೫ ಆಗಿದ್ದು, ಇದರ ವ್ಯಾಪ್ತಿ (range) ವೃದ್ಧಿಯಾಗಿದೆ. ಇದೆಲ್ಲ ಸಂಸ್ಥೆಯ ಆಂತರಿಕ ತಾಂತ್ರಿಕ ಸಾಮರ್ಥ್ಯದ ಫಲ. ಈ ಗನ್ನಿನ ಹೆಸರು : ಧನುಷ್. ಅದರಿಂದ ಸುಮಾರು ೯ ಕಿಲೋಮೀಟರ್ ದೂರದ ಶತ್ರು ತಾಣಗಳನ್ನು ನಾಶಮಾಡಲು ಸಾಧ್ಯವಿದೆ. ರಕ್ಷಣಾ ಉತ್ಪನ್ನಗಳ ಕ್ಷೇತ್ರದಲ್ಲಿ ಈ ಸಂಸ್ಥೆಯ ಪ್ರಾಮುಖ್ಯತೆ ಮತ್ತು ಅನಿವಾರ್ಯತೆಯನ್ನು ಮನಗಂಡು ಭಾರತ ಸರ್ಕಾರ ೨೦೧೨–೧೩ / ೨೦೧೬–೨೦೧೭ ಅವಧಿಯ ೧೨ನೇ ಯೋಜನೆಯಲ್ಲಿ ಇದಕ್ಕೆ ರೂ. ೧೫,೦೦೦/– ಕೋಟಿಗಳನ್ನು ಮಂಜೂರು ಮಾಡಿದೆ. ಇದರ ಉದ್ದೇಶ : ಸಾಮರ್ಥ್ಯ ವರ್ಧನೆ, ನವೀಕರಣ ಮತ್ತು ಉತ್ಪಾದನಾ ಸೌಲಭ್ಯಗಳನ್ನು ಉತ್ತಮಗೊಳಿಸುವ ಹೆಚ್ಚಿನ ಸೇರಿಕೆ.

ಈ ಕಾರ್ಖಾನೆಗಳಿಗೆ ತಮ್ಮದೇ ಆದ ಜಾಗಗಳಲ್ಲಿ ಕಾರ್ಖಾನೆಯ ಸುತ್ತ ಎಲ್ಲಾ ಸೌಕರ್ಯಗಳನ್ನೊಳಗೊಂಡ ಮಿನಿ ಊರುಗಳಿವೆ.

ಈ ಕಾರ್ಖಾನೆಗಳ ಆದಾಯ ೨೦೧೦–೧೧ರಲ್ಲಿ ರೂ. ೧೧,೨೦೦ ಕೋಟಿ (ವರ್ಷಾವಧಿ ೩೦%ರಷ್ಟು ಹೆಚ್ಚಳ)

**ಸಾರ್ವಜನಿಕ ವಲಯ ಸಂಸ್ಥೆಗಳು**

**ಹಿಂದೂಸ್ತಾನ್ ಏರೋನಾಟಿಕ್ಸ್**

ಎರಡನೇ ಮಹಾಯುದ್ಧದ ಕಾಲದಲ್ಲಿ ಸ್ಥಾಪಿತವಾದ ಈ ಸಂಸ್ಥೆ ಯುದ್ಧ ವಿಮಾನಗಳ ದುರಸ್ತಿನಿಂದ ಪ್ರಾರಂಭಿಸಿ, ಈಗ ಸಂಪೂರ್ಣ ವಿಮಾನಗಳ ತಯಾರಿಕೆಯಲ್ಲಿ ಪ್ರಪಂಚದಲ್ಲಿ ಪ್ರಸಿದ್ಧವಾಗಿದೆ. ಮುಖ್ಯವಾಗಿ ರಷ್ಯದಿಂದ ಸರಬರಾಜಾದ ವಿಮಾನಗಳ ಸ್ವರೂಪ ಮತ್ತು ತಾಂತ್ರಿಕ ವಿದ್ಯೆಗಳನ್ನು ತಮ್ಮದಾಗಿಸಿಕೊಂಡು ಈ ಸಂಸ್ಥೆಯು ಪ್ರಸ್ತುತ ಎಲ್ಲ ಸರಣಿಯ ಯುದ್ಧ ವಿಮಾನಗಳನ್ನೂ ತಯಾರಿಸುವ ಸಾಮರ್ಥ್ಯ ಪಡೆದಿದೆ. ವಾಯುಸೇನೆಗೆ ಇದು ಮುಖ್ಯ ಆಧಾರ. ಈ ಸಂಸ್ಥೆಗೆ ಈಗಿರುವ ಸಾಮರ್ಥ್ಯ ಅಗಾಧ.

ಅದರಿಂದಲೇ, ಸ್ಥಳೀಯವಾಗಿಯೇ ಯೋಜಿಸಿದ ವಿಮಾನವಾದ ತೇಜಸ್‌ಅನ್ನು ಈ ಸಂಸ್ಥೆಯು ಯಶಸ್ವಿಯಾಗಿ ತಯಾರಿಸಿದೆ. ಈ ವಿಮಾನವು ವಾಯುಪಡೆಯ ಅಂತ್ಯ ಪರೀಕ್ಷೆಯಲ್ಲಿದ್ದು ಸದ್ಯದಲ್ಲೇ ವಾಯುಸೇನೆಯಲ್ಲಿ ಸೇರ್ಪಡೆಯಾಗಲಿದೆ. ಕೆಲವು ಭಾಗಗಳನ್ನು (ಸುಮಾರು ೩೦%) ಹೊರಗಿನಿಂದ ತರಿಸಬೇಕಾಗಿದೆ, ನಿಜ. ಆದರೂ ಈ ಸಾಧನೆ ಯುದ್ಧ ವಿಮಾನಗಳ ಸ್ವಂತ ತಯಾರಿಕೆಯಲ್ಲಿ ನಿಚ್ಚಳವಾದ

## ಅಭಿನಂದನೆಗಳು........

ಕನ್ನಡ ಸಾಹಿತ್ಯ ಪರಿಷತ್ತಿನಿಂದ ವೈಚಾರಿಕ ಸಾಹಿತ್ಯಕ್ಕೆ ನೀಡಲಾಗುವ ೨೦೧೩ರ ಡಾ॥ ಎಚ್. ಎನ್. ದತ್ತಿನಿಧಿ ಪ್ರಶಸ್ತಿಯನ್ನು 'ವೈಜ್ಞಾನಿಕ ದೃಷ್ಟಿಯನ್ನು ಬೆಳೆಸಿಕೊಳ್ಳುವುದು ಹೇಗೆ ?' ಕೃತಿಗಾಗಿ ಲೇಖಕ ಪ್ರೊ॥ ಜೆ. ಆರ್. ಲಕ್ಷ್ಮಣರಾವ್ ಅವರಿಗೆ ನೀಡಲಾಗಿದೆ. ಲೇಖಕರಿಗೆ ಈ ಕೃತಿಯ ಪ್ರಕಾಶಕರಾದ ನವಕರ್ನಾಟಕ ಹಾಗೂ 'ಹೊಸತು' ಬಳಗದಿಂದ ಅಭಿನಂದನೆಗಳು.

ಕನ್ನಡ ಸಾಹಿತ್ಯ ಪರಿಷತ್ತು ೨೦೧೩ರ 'ಬಿಸಲೇರಿ ಜಯಣ್ಣ – ಬಿಸಲೇರಿ ಬ್ರದರ್ಸ್ ದತ್ತಿನಿಧಿ ಪ್ರಶಸ್ತಿ'ಯನ್ನು ನವಕರ್ನಾಟಕ ಪ್ರಕಾಶನವು ಹೊರತಂದ 'ದೈಹಿಕ ಕಾಯಿಲೆಗಳು ಮತ್ತು ಕಣ್ಣು' ಪುಸ್ತಕಕ್ಕಾಗಿ ಕೃತಿಯ ಲೇಖಕ ಡಾ॥ ಎಚ್. ಎಸ್. ಮೋಹನ್ ಅವರಿಗೆ ನೀಡಿದೆ. ಲೇಖಕರಿಗೆ 'ಹೊಸತು' – ನವಕರ್ನಾಟಕ ಬಳಗದಿಂದ ಅಭಿನಂದನೆಗಳು.

'ಆಗೊಲ್ಲ ಎನ್ನಬೇಡಿ ಆಗುತ್ತೆ ಎನ್ನಿ' ಕೃತಿಗಾಗಿ ಲೇಖಕ ಡಾ॥ ಮಹಾಬಲೇಶ್ವರ ರಾವ್ ಅವರಿಗೆ ಕನ್ನಡ ಸಾಹಿತ್ಯ ಪರಿಷತ್ತಿನ ಡಾ॥ ಎಸ್. ಧರಣೇಂದ್ರಯ್ಯ ಮನೋವಿಜ್ಞಾನ ದತ್ತಿನಿಧಿ ಪ್ರಶಸ್ತಿ (೨೦೧೩)ಯನ್ನು ನೀಡಿದ್ದಾರೆ. 'ಹೊಸತು' ಪತ್ರಿಕೆ ಹಾಗೂ ಕೃತಿಯ ಪ್ರಕಾಶಕರಾದ ನವಕರ್ನಾಟಕ ಲೇಖಕರನ್ನು ಅಭಿನಂದಿಸುತ್ತವೆ.



ಒಂದು ಉನ್ನತ ಘಟ್ಟ. ಅಂತೆಯೇ, ಈಗಾಗಲೆ ಹಲವು ವರ್ಷಗಳಿಂದಲೂ ಈ ಸಂಸ್ಥೆಯು ಹೆಲಿಕಾಪ್ಟರ್‌ಗಳನ್ನು ವಾಯುಸೇನೆಗೆ ಸರಬರಾಜು ಮಾಡುತ್ತಿದೆ.

ಹಿಂದೂಸ್ತಾನ್ ಏರೋನಾಟಿಕ್ಸ್‌ನ ೨೦೧೧-೧೨ರ ವಾರ್ಷಿಕ ಮಾರಾಟ ಮೌಲ್ಯ ರೂ. ೧೪,೨೦೪ ಕೋಟಿಗಳು.

**ಭಾರತ್ ಎಲೆಕ್ಟ್ರಾನಿಕ್ಸ್**

ಬಹಳ ಆಧುನಿಕ ಕ್ಷೇತ್ರದಲ್ಲಿರುವ ಈ ಸಂಸ್ಥೆಯ ಇತ್ತೀಚಿನ ಉತ್ಪನ್ನಗಳು ರಕ್ಷಣಾ ಪಡೆಗಳು ಉಪಯೋಗಿಸುವ ಪ್ರತಿಯೊಂದು ಸಾಧನಗಳಿಗೂ ಅವಶ್ಯಕ. ಅಂದರೆ, ಈ ಸಂಸ್ಥೆಯ ಉತ್ಪನ್ನಗಳು ಒಂದು ನಿರ್ಣಾಯಕ ಸ್ಥಾನ ಹೊಂದಿವೆ ಎನ್ನಬಹುದು. ಒಂದೊಂದು ಉತ್ಪನ್ನವನ್ನೂ ಗುರುತಿಸಿ ಹೇಳುವುದು ಕಷ್ಟ. ಆದರೆ, ಇದಿಲ್ಲದೆ, ಮಿಕ್ಕ ಸಾಧನಗಳು ಕೆಲಸ ಮಾಡಲಾರವು. ಅಷ್ಟು ಪ್ರಮುಖವಾದ ಕಾಣಿಕೆಯು ಈ ಸಂಸ್ಥೆಯಿಂದ ಲಭ್ಯವಾಗುತ್ತಿದೆ. ಈ ಸಂಸ್ಥೆಯ ೨೦೧೨ರ ವಾರ್ಷಿಕ ಆದಾಯ ೬,೦೦೦ ಕೋಟಿ ರೂಪಾಯಿಗಳು.

ಇವಲ್ಲದೆ ನಮ್ಮ ರಕ್ಷಣಾ ವಿಭಾಗಕ್ಕೆ ಬೆನ್ನೆಲುಬಿನಂತಿರುವ ಇತರ ಅನೇಕ ಸಂಸ್ಥೆಗಳು ಸಾರ್ವಜನಿಕ ವಲಯದಲ್ಲಿವೆ. ಉದಾಹರಣೆಗೆ, ಹಡಗು ನಿರ್ಮಾಣ ಮಾಡುವ ಆಗರಗಳು ಕೊಚ್ಚಿ, ಮುಂಬೈ, ಕೊಲ್ಕತ್ತಗಳಲ್ಲಿವೆ. ಕೊಚ್ಚಿಯಲ್ಲಿ ಒಂದು ವಿಮಾನವಾಹಕ ತಯಾರಾಗುತ್ತಿದ್ದರೆ, ಮಿಕ್ಕೆರಡು ಕಡೆ ಬೇರೆ ನೌಕಾ ಹಡಗುಗಳ (೪೪) ನಿರ್ಮಾಣವಾಗುತ್ತಿದೆ.

**ಆಮದು**

ಭಾರತದ ರಕ್ಷಣಾ ಪಡೆಗಳ ಮತ್ತಿತರ ಆಯುಧಗಳ ಅವಶ್ಯಕತೆಗಳಲ್ಲಿ ಶೇಕಡ ೬೫-೭೦ರಷ್ಟು ಆಮದಿನ ಮೂಲಕ ಪೂರೈಕೆಯಾಗಬೇಕಾಗಿದೆ. ಇಂದಿನ ಸ್ಥಿತಿಯಲ್ಲಿ, ಸ್ವಂತ ಉತ್ಪನ್ನ ಜಾರಿಯಲ್ಲಿದ್ದರೂ, ಆಯುಧಗಳ ನವೀಕರಣ ಮತ್ತು ಹೆಚ್ಚುವರಿ ಅವಶ್ಯಕತೆಗಳ ಪೂರೈಕೆಗಾಗಿ ಆಮದು ಅನಿವಾರ್ಯವಾಗಿದೆ. ಬದಲಾಗುತಲೇ ಇರುವ ಸಂದರ್ಭಗಳಲ್ಲಿ ಹೊಸ ಅವಶ್ಯಕತೆಗಳು ಹುಟ್ಟಿಕೊಳ್ಳುತ್ತವೆ ಮತ್ತು ಅವನ್ನೆಲ್ಲಾ ಜಾಗ್ರತೆಯಾಗಿ ಪೂರೈಸಿಕೊಳ್ಳಬೇಕು. ಇವೆಲ್ಲ ಈ ಆಮದಿಗೆ ಕಾರಣಗಳಾದವು. ಇದರ ಜೊತೆಗೆ ಸ್ವಂತ ಆಯುಧ - ತಂತ್ರಜ್ಞಾನವು ಸಕಾಲದಲ್ಲಿ ಫಲಗೊಳ್ಳದಿದ್ದದ್ದೂ ಒಂದು ಕಾರಣವಾಯಿತು.

ಈಗ ಅಂದಾಜಾಗಿರುವ ಪಟ್ಟಿಯಲ್ಲಿ ಆಯುಧಗಳ ಆಮದಿನಲ್ಲಿ ಭಾರತ ಮೊದಲನೇ ಸ್ಥಾನದಲ್ಲಿದೆಯಂತೆ. ಮೌಲ್ಯ: ೮೨೮೩ ಮಿಲಿಯನ್ ಡಾಲರ್‌ಗಳು, ಅಂದರೆ ೪,೯೬,೯೮೦ ದಶಲಕ್ಷ ರೂ.ಗಳು. ಇದು ಪ್ರಪಂಚದ ೧೫ ಅಗ್ರ ಆಮದುಗಾರರ ಒಟ್ಟು ಮೊತ್ತದಲ್ಲಿ ಶೇಕಡ ೧೨ರಷ್ಟು. ನಿಜಕ್ಕೂ ಇದೊಂದು ಅತಿ ಭಾರಿ ಖರ್ಚು.

ರಷ್ಯದಿಂದ ಕೊಂಡದ್ದಲ್ಲದೆ (೨೦೦೯-೧೩ರ ಅವಧಿಯಲ್ಲಿ ೭೫%ರಷ್ಟು ಆಮದು ರಷ್ಯದಿಂದಲೇ) ಅಮೆರಿಕದೊಂದಿಗೆ ಸರಬರಾಜಿಗೆ ಕೊಟ್ಟಿರುವ ಪಟ್ಟಿಯಲ್ಲಿ ಇರುವ ಮುಖ್ಯ ಐಟಂಗಳು ಹೀಗಿವೆ :

೮ - ಬೋಯಿಂಗ್ ಪಿ-೮೧ ದೂರವ್ಯಾಪ್ತಿ ವೀಕ್ಷಣಾ ವಿಮಾನ : ೨.೧ ಬಿಲಿಯನ್ ಡಾಲರ್.

೬- ಸಿ-೧೩೦ ಜೆ ಸೂಪರ್ ಹರ್ಕ್ಯುಲಿಸ್ ವಿಮಾನ : ೯೬೨ ಮಿಲಿಯನ್ ಡಾಲರ್.

ಇದಲ್ಲದೆ ತೇಜಸ್ ಯುದ್ಧ ವಿಮಾನದ ಎಂಜಿನ್, ಜನರಲ್ ಎಲೆಕ್ಟ್ರಿಕ್‌ನಿಂದ ಆಮದು ಆಗಬೇಕಾಗುವುದನ್ನು ಮರೆಯಬಾರದು.

ಮತ್ತೊಂದು ಭಾರಿ ಐಟಂಗೆ ಸರ್ಕಾರದಿಂದ ಒಂದು ಕೇಳಿಕೆ ಹೋಗಿದೆಯಂತೆ :

೧೦ - ಸಿ-೧೭ Globemaster - III : ಇದೊಂದು ದೈತ್ಯ ಏರ್ ಲಿಫ್ಟ್ ಶಕ್ತಿಯ ವಿಮಾನ. ಅದರ ಬೆಲೆ 'ಒಂದು ವಿಮಾನಕ್ಕೆ ೨೨೦ ಮಿಲಿಯನ್ ಡಾಲರ್'.

ಮೇಲಿನವೆಲ್ಲ ಒಂದು ಗುಂಪಿನವೆನ್ನಬಹುದು. ಬೇರೆ ಬಾಬ್ತುಗಳ ಅಗತ್ಯಕ್ಕಾಗಿ ಅಮೆರಿಕದಿಂದ ಕೊಳ್ಳುವುದಿದೆ: ಅದು ಅತಿ ಹಗುರವಾದ M೭೭೭ ಹೋವಿಟ್ಸರ್ ಗನ್‌ಗಳು - ೧೪೫. ಈ ಗನ್‌ಗಳು ನೈರುತ್ಯ ಭಾಗದಲ್ಲಿ ಹೊಸದಾಗಿ ನಿರ್ಮಿಸಿರುವ ಪರ್ವತ ಡಿವಿಷನ್‌ಗಳಿಗೆ ಬೇಕಾದ ಆಯುಧ : ಇವನ್ನು ವಿಮಾನ ಹಾಗೂ ಹೆಲಿಕಾಪ್ಟರ್ ಮೂಲಕ ಸಾಗಿಸಬಹುದು. ಇದರ ವೆಚ್ಚ ೬೪೭ ಮಿಲಿಯನ್ ಡಾಲರ್‌ಗಳು.

ಇದರಲ್ಲೆಲ್ಲಾ ಒಂದು ವಿಶೇಷ ಕಂಡುಬರುತ್ತದೆ : ನಮ್ಮ ದೇಶವು ಹೆಚ್ಚು ಹೆಚ್ಚಾಗಿ ತನ್ನ ರಕ್ಷಣಾ ಸಾಮರ್ಥ್ಯವನ್ನು ಮೇಲ್ಮಟ್ಟಕ್ಕೆ ಕೊಂಡೊಯ್ಯುವ ನೀತಿಯಲ್ಲಿ ಅಮೆರಿಕವನ್ನು ಆಶ್ರಯಿಸಹೋಗುತ್ತಿದೆ. ಇದು ಎಲ್ಲಿ ಕೊನೆ ಕಾಣುತ್ತೆ ಎಂಬುದನ್ನು ಕಾದುನೋಡಬೇಕು.

**ಖಾಸಗೀ ವಲಯದ ಸೀಮಿತ ಶಕ್ತಿ**

ಈ ವಲಯವು ನಮ್ಮ ದೇಶದ ರಕ್ಷಣಾ ಉತ್ಪಾದನೆಯ ಸ್ವಯಂ ನಿರ್ಮಾಣದಲ್ಲಿ ಒಂದು ಗಮನಾರ್ಹವಾದ ಭಾಗವೇನಲ್ಲ. ಟಾಟಾ ಕಂಪೆನಿ, ಮಹೀಂದ್ರ, ಭಾರತ್ ಫೋರ್ಜ್, ಇವು ಒಂದಿಷ್ಟು ಆಸಕ್ತರು. ಭಾರತ್ ಫೋರ್ಜ್ ದೊಡ್ಡ ಗನ್ನುಗಳನ್ನು ನಿರ್ಮಿಸುವ ಕಾರ್ಖಾನೆಯನ್ನೇ ಆಮದು ಮಾಡಿಕೊಂಡಿದೆ. ಈ ವಲಯವು ಇನ್ನು ಮುಂದೆ ರಕ್ಷಣಾ ತಯಾರಿಕೆಯ ಭಾಗಿತ್ವವನ್ನು ಅಧಿಕ ಮಟ್ಟದಲ್ಲಿ ತೋರುವ ಸಂಭವ ಇದ್ದೇ ಇದೆ.

**ವಿದೇಶಿ ನೇರ ಬಂಡವಾಳ ಹೂಡಿಕೆ**

ಹಿಂದೆ ಗುರುತಿಸಿದಂತೆ ರಕ್ಷಣಾ ಉತ್ಪಾದನೆಯಲ್ಲಿ ಕೆಲವು ವಲಯಗಳಲ್ಲಿ ನಮ್ಮ ಕೌಶಲ್ಯ ಮತ್ತು ಸಾಮರ್ಥ್ಯ ಸಾಕಾದಷ್ಟು ಸಾಬೀತಾಗಿದ್ದರೂ, ಅದು ಈಗ ಮುಂದುವರಿದಿರುವ ಹಂತದಲ್ಲಿ ಇದೆಯೆನ್ನಬಹುದಾದರೂ, ಒಟ್ಟಿನಲ್ಲಿ ನಾವಿನ್ನೂ ಹಿಂದುಳಿದಿರುವುದು ಸಂದೇಹಾಸ್ಪದ ಅಲ್ಲವೇ ಅಲ್ಲ. ಇದಕ್ಕೆ ನಾವು ನಮ್ಮ ಅಗತ್ಯಗಳಲ್ಲಿ ಶೇಕಡ ೬೫-೭೦ರಷ್ಟನ್ನು ಆಮದು ಮಾಡಿಕೊಳ್ಳುತ್ತಿರುವುದಲ್ಲದೆ ಬೇರೆ ಯಾವ ಪುರಾವೆಯೂ ಬೇಕಿಲ್ಲ; ಇಂತಹ ಪರಿಸ್ಥಿತಿ ಮುಂದುವರಿಯುವುದನ್ನು ತಡೆಯಬೇಕಾದ ಅಗತ್ಯವನ್ನೂ ಒತ್ತಿ ಹೇಳಬೇಕಾಗಿಲ್ಲ. ರಕ್ಷಣಾ ಉತ್ಪಾದನೆಯಲ್ಲಿ



ನಿಯೋಗವಾಗುವ ತಂತ್ರಜ್ಞಾನ ಕ್ಲಿಷ್ಟವಾದದ್ದು ಮತ್ತು ಒಂದು ಸಂಸ್ಥೆ ಮತ್ತು ದೇಶದಲ್ಲಿ ಒಂದು ರೀತಿ ಪಾರಂಪರಿಕ ವಾದದ್ದು. ಅಲ್ಲದೆ, ಅದು ಸದಾ ಮುಂದಿನ ಪ್ರಗತಿಯ ಕಡೆಗೆ ಧಾವಿಸುತ್ತಲೇ ಇರುತ್ತದೆ. ನಮ್ಮಲ್ಲಿ ಈ ಉತ್ಪಾದನೆಯು ಬಹುಕಾಲ – ಸ್ವತಂತ್ರ ರಾಷ್ಟ್ರವಾದ ಮೇಲೂ – ಬ್ರಿಟಿಷರ ರೀತಿಯನ್ನೇ ಅನುಸರಿಸುತ್ತಿತ್ತು. ಅನಂತರ, ಅದರ ಜೊತೆಗೆ ರಷ್ಯದ ಮಾದರಿಯೂ ಬಂದಿತು. ಈಗ ಹೆಚ್ಚು-ಹೆಚ್ಚಾಗಿ ಪಾಶ್ಚಾತ್ಯ ರಾಷ್ಟ್ರಗಳ, ಅದರಲ್ಲೂ ಅಮೇರಿಕಾದ, ರೀತಿ ಪ್ರಾಮುಖ್ಯವಾಗುತ್ತಿದೆ. ಹೀಗಾಗಿ ನಮ್ಮದೇ ಆದ ಒಂದು ಮನೋಭಾವ ಮತ್ತು ವಿಧಾನ ಬೆಳೆದು, ಮುಂದುವರಿದು ಬೇರೂರಿದಂತಾಗಲಿಲ್ಲ. ಆದರೆ ರಕ್ಷಣಾ ಪಡೆಗಳ ಅಗತ್ಯಗಳು – ಅವರ ಅನುಭವ, ಒಂದು ಅಂದಾಜಿನ ಪ್ರಕಾರ – ಬೇರೆ ದೇಶಗಳಲ್ಲಿ ಲಭ್ಯವಿರುವ ಮಟ್ಟದ್ದಾಗುತ್ತಲೇ ಹೋದವು. ಇದೇ ನಮ್ಮ ಬೃಹತ್ ಆಮದಿಗೆ ಕಾರಣವಾಗಿತ್ತು ಮತ್ತು ಈಗ ವಿದೇಶೀ ಬಂಡವಾಳದ ನೇರ ಹೂಡಿಕೆ ಮಾರ್ಗದ ಸಾಧ್ಯತೆಯ ಕೂಗಿಗೆ ಅದೇ ಮೂಲಭೂತ ಕಾರಣ.

ಒಂದು ಆಯುಧ ಇಲ್ಲವೇ ಆಯುಧ ವ್ಯೂಹವನ್ನು ಪರದೇಶದಿಂದ ಕೊಂಡಾಗ, ಅದರ ಜೊತೆ ಅದಕ್ಕೆ ಮೂಲವಾದ ತಂತ್ರಜ್ಞಾನದ ವರ್ಗಾವಣೆಯು ಆಗುವ ಹಾಗೆ ಷರತ್ತು ಇರುತ್ತೆ, ನಿಜ. ಅದರ ಉದ್ದೇಶ ಆ ತಂತ್ರಜ್ಞಾನವನ್ನು ನಮ್ಮದಾಗಿಸಿಕೊಳ್ಳುವುದಲ್ಲದೆ, ಅದಾದ ಮೇಲೆ ಆ ತಂತ್ರಜ್ಞಾನವನ್ನು ಮುಂದಿನ ಹೆಚ್ಚು ಗುಣಮಟ್ಟದ ಸ್ಥಿತಿಗೆ ತೆಗೆದುಕೊಂಡು ಹೋಗಬಹುದೆಂಬ ಇಚ್ಛೆ. ಈ ಮಹದಾಶಯವು ಕಾಗದದ ಮೇಲೆ ಉಳಿದುಬಿಡುತ್ತದೆ. ಪ್ರಾಯೋಗಿಕ ಅನುಭವ ಹೇಳುವುದೇನೆಂದರೆ ಈ ಇಚ್ಛೆ ಕಾರ್ಯಗತ ವಾಗುವುದು ಸರ್ವೇಸಾಮಾನ್ಯವೇನಲ್ಲ. ಮಾರಾಟಗಾರರು, ಅವರ ದೇಶದವರು, ಇಂತಹ ತಂತ್ರಜ್ಞಾನವು ಬೇರೆಯವರಿಗೆ ತಿಳಿಯದಂತೆ ಸರ್ಪಗಾವಲಿಟ್ಟಿರುತ್ತಾರೆ. ಸಹಜವೇ. ಏಕೆಂದರೆ ಅವರಿಗೆ ವ್ಯಾಪಾರ ಕುದುರುತ್ತಲೇ ಇರಬೇಕಲ್ಲ. ಒಂದು ಪಕ್ಷ ಅದನ್ನು ಬಿಟ್ಟುಕೊಟ್ಟರೂ, ಅತ್ಯಾಧುನಿಕ ತಂತ್ರಜ್ಞಾನವನ್ನು ವರ್ಗಾವಣೆ ಮಾಡುವುದಿಲ್ಲ. ಹೀಗಾಗಿ ನಮ್ಮ ತಂತ್ರಜ್ಞಾನದ ಅಭಿವೃದ್ಧಿಯು ಒಮ್ಮೆ ಕೊಂಡ ಆಯುಧದ ಮಟ್ಟಕ್ಕಷ್ಟೇ ಸೀಮಿತವಾಗುತ್ತೆ. ವೃದ್ಧಿಯ ಸಾಧ್ಯತೆ ಅತಿಕಮ್ಮಿ.

ಆದರೆ ತಂತ್ರಜ್ಞಾನ ಸತತ ವೃದ್ಧಿಯಾಗದೆ ಇದ್ದಾಗ ನಮ್ಮದೇ ಆದ ಮತ್ತು ನಮಗೆ ಬೇಕಾದ ಮತ್ತು ಮುಂದುವರಿದ ಗುಣಮಟ್ಟದ ಶಸ್ತ್ರಾಸ್ತ್ರ ನಿರ್ಮಾಣ ಸ್ಥಗಿತಗೊಂಡಿರುತ್ತದೆ. ಹೀಗಾಗಿ ಯಾವುದೇ ಹಂತದಲ್ಲೂ ರಕ್ಷಣಾ ಪಡೆಗಳ ಅಗತ್ಯಗಳನ್ನು ಪೂರೈಸುವುದರಲ್ಲಿ ನಿಜವಾದ ಪ್ರಗತಿ ಆಗಲು ಸಾಧ್ಯವಿಲ್ಲ.

ಇವೇ ಸನ್ನಿವೇಶಗಳೇ, ಕೊರತೆಗಳೇ ವಿದೇಶೀ ನೇರ ಹೂಡಿಕೆ ಮಾರ್ಗಕ್ಕೂ ಅನ್ವಯಿಸುತ್ತವೆ. ಇದು ಮೂಲಭೂತವಾದ ವಿಷಯ. ಪರದೇಶದಲ್ಲಲ್ಲದೆ, ಆ ಕಾರ್ಖಾನೆ ನಮ್ಮ ದೇಶದಲ್ಲಿರುತ್ತದೆ ಎನ್ನುವುದೊಂದೇ ಈ ಮಾರ್ಗದ ವಿಶೇಷ. ಅದು ನಮ್ಮ ಸ್ವಾವಲಂಬನೆಗೆ ನೆರವಾಗುತ್ತದೆ, ಅದರ ಉತ್ಪಾದನೆ ನಮ್ಮ ಕೈಗೆ ವರ್ಗಾವಣೆ ಯಾಗುತ್ತದೆ, ಅಂದುಕೊಂಡರೆ ಅದೊಂದು ಭ್ರಮೆ, ಅಷ್ಟೆ.

ಹೂಡಿಕೆದಾರರು ಇಲ್ಲಿಗೆ ಬಂದರೆ ಅದು ನಮ್ಮನ್ನು ಸ್ವಾವಲಂಬಿಗಳನ್ನಾಗಿ ಮಾಡುವುದಕ್ಕಲ್ಲ, ಬದಲಾಗಿ ಅದಕ್ಕೆ ಅವರದೇ ಬೇರೆ ಉದ್ದೇಶಗಳಿರುತ್ತವೆ. ಮುಖ್ಯ ವಾದದ್ದು ಲಾಭ. ಅದಕ್ಕೆ ಇಲ್ಲಿನ ಅಗ್ಗವಾದ ಜಮೀನು, ಯಥೇಚ್ಛ ಕಡಿಮೆ ವೇತನದ ಕುಶಲ ಕೆಲಸಗಾರರು, ತಯಾರಿಕೆಗೆ ನಿರ್ದಿಷ್ಟವಾದ ಮಾರ್ಕೆಟ್, ಸಾಧ್ಯವಾದಲ್ಲಿ ರಫ್ತುಮಾಡುವ ಅವಕಾಶ, ಇವೆಲ್ಲ ಅನುಕೂಲ ಮಾಡಿ ಕೊಡುತ್ತವೆ. ಇದಷ್ಟೇ ಅಲ್ಲದೆ ನಾವು ಆಮಂತ್ರಿಸಿ ಕಾರ್ಖಾನೆ ಸ್ಥಾಪಿಸುವ ದೇಶಕ್ಕೆ ಒಂದು ವಿಷಯ ತಿಳಿದಿರುತ್ತದೆ: ಅತಿ ಪ್ರಾಮುಖ್ಯವಾದ, ಅತ್ಯವಶ್ಯಕ ಶಸ್ತ್ರಾಸ್ತ್ರಕ್ಕೆ ತನ್ನ ಮೇಲೆ ಭಾರತವು ಅವಲಂಬಿಯಾಗಿ ಇರುವುದರಿಂದ ಆ ಸಂಸ್ಥೆ ಪಡೆದುಕೊಳ್ಳುವ ಎಲ್ಲ ವಿಧದ ಪ್ರಭಾವ ಕೇವಲ ಕಾಲ್ಪನಿಕವಲ್ಲ, ಎಂದು. ಹೀಗಾದರೆ ದೇಶದ ಸುರಕ್ಷತೆಯ ಮೇಲೆ ಏನೂ ಪರಿಣಾಮವಾಗು ವುದಿಲ್ಲವೆ? ಕಾರ್ಮಿಕರ ಮೇಲಿನ ಪರಿಣಾಮವನ್ನೂ ಮರೆಯಬಾರದು; ಏಕೆಂದರೆ, ಹೀಗೆ ಬಂದವರೆಲ್ಲ ಕಾರ್ಮಿಕ ನೀತಿಯ ಸುಧಾರಣೆಗಳನ್ನು ಬಯಸುತ್ತಾರೆ. ಸುಧಾರಣೆ ಎಂದರೆ ಇರುವ ಕಟ್ಟುಕಟ್ಟಳೆಗಳನ್ನು ಸಡಿಲಗೊಳಿಸುವುದು, ಎಂಬುದಷ್ಟೇ ಅವರ ನಿರೀಕ್ಷೆ. ನಮ್ಮ ದೇಶ ಏನು ಮತ್ತು ಎಷ್ಟು ಕೊಳ್ಳುತ್ತಿದೆ, ಅದು ಯಾವ ಮಟ್ಟದ ತಂತ್ರಜ್ಞಾನದ್ದು, ಎಂಬುದೆಲ್ಲಾ ಜಗಜ್ಜಾಹೀರಾಗಿರುತ್ತದೆ.

ಶೇಕಡ ೧೦೦ರಷ್ಟು ವಿದೇಶೀ ಬಂಡವಾಳದ ಹೂಡಿಕೆಯಾದಲ್ಲಿ, ನಮ್ಮ ದೇಶ ಒಂದು ಕೇವಲ ಉತ್ಪಾದನೆಯ ಕೇಂದ್ರವಾದೀತೇ ಹೊರತು, ಅತಿ ಆಧುನಿಕ ತಂತ್ರಜ್ಞಾನದ ಮೇಲೆ ಯಾವುದೊಂದು ನಿಯಂತ್ರಣವನ್ನೂ ನಾವು ಇಟ್ಟುಕೊಳ್ಳಲಾಗುವುದಿಲ್ಲ. ಸ್ವಾವಲಂಬನೆಗೆ ನೆರವಾಗುವ ಬದಲು, ನಮ್ಮಲ್ಲಿ ಈಗಾಗಲೇ ಇರುವ ಸಾಮರ್ಥ್ಯಕ್ಕೂ ಕ್ರಮೇಣ ಧಕ್ಕೆ ಬಂದು, ನಾವು ಸ್ವಾವಲಂಬಿಗಳಾಗುವ ಬದಲು, ನಮ್ಮ ದೇಶದಲ್ಲೇ ಲಾಭಗಳಿಸುವ ಪರಕೀಯರ ಮೇಲೆ ಸಂಪೂರ್ಣವಾಗಿ ಪರಾವಲಂಬಿಗಳಾಗಿಬಿಟ್ಟೇವು. ಅಮೇರಿಕಾ ಇತ್ಯಾದಿ ಪಾಶ್ಚಾತ್ಯ ರಾಷ್ಟ್ರಗಳು ತಮ್ಮ ದೇಶದ ಶಸ್ತ್ರಾಸ್ತ್ರ ತಯಾರಿಕೆಗಾರರ ಬಗ್ಗೆ ಏನೇ ಹೇಳಿಕೊಂಡರೂ, ಜನರಲ್ ಐಸನ್‌ಹೋವರ್ ಅವರು ಮೊದಲ ಬಾರಿಗೆ ಧ್ವನಿ ಇತ್ತ "ಮಿಲಿಟರಿ-ಇಂಡಸ್ಟ್ರಿಯಲ್ ಕಾಂಪ್ಲೆಕ್ಸ್" ಇದೇ ಇರಬೇಕಲ್ಲವೇ?

ನಾವು ಸ್ವಾವಲಂಬಿಗಳಾಗುವುದು ಅಸಾಧ್ಯವೇನಲ್ಲ, ಅಷ್ಟೇ ಅಲ್ಲ, ಆಗಲೇಬೇಕು. ಅದಕ್ಕೆ ಈಗಲಾದರೂ ಒಂದು ಮಧ್ಯ-ದೀರ್ಘಾವರ್ತಿಯ ಯೋಜನೆ ಆಗಬೇಕು. ಮೊದಲಲ್ಲೇ ಪ್ರಸ್ತಾಪಿಸಿದಂತೆ ನಮ್ಮಲ್ಲಿ, ಒಳ್ಳೆಯ ಮಟ್ಟದ ಉತ್ಪಾದನಾ ಮತ್ತು ತಂತ್ರಜ್ಞಾನದ ದೊಡ್ಡ ತಳಹದಿ ಇದೆ. ರಕ್ಷಣಾ ವಿಭಾಗದ ಸಂಶೋಧನೆ ಮತ್ತು ಅಭಿವೃದ್ಧಿ ಸಂಸ್ಥೆಯ (DRDO) ಮುನ್ನಡೆಯಲ್ಲಿ ಶಸ್ತ್ರಾಸ್ತ್ರಪಡೆಗಳವರು, ಉತ್ಪಾದಕರೂ ಒಟ್ಟಾಗಿ ಸಕ್ರಿಯವಾಗಿ ಭಾಗಿಗಳಾಗಬೇಕು. ಸ್ವಾವಲಂಬನೆಯಲ್ಲಿ ಶಸ್ತ್ರಾಸ್ತ್ರಪಡೆಗಳ ಕಾಣಿಕೆ ಮತ್ತು ಜವಾಬ್ದಾರಿ ಬಹಳ ಪ್ರಾಮುಖ್ಯವಾದದ್ದು. ತಮಗೆ ಬೇಕಾದ ಪೂರೈಕೆಗಳ ಕ್ಯೂ-ಆರ್ (Qualitative Requirement)ಅನ್ನು ನಿಗದಿಪಡಿಸುವವರು ಅವರೇ ತಾನೆ?

ಆದ್ದರಿಂದ ಸ್ವಾವಲಂಬಿಗಳಾಗೋಣ, ಅದಕ್ಕೆ ಎಫ್‌ಡಿಐ ಏನೂ ನಮಗೆ ಬೇಕಿಲ್ಲ. ಅದರಿಂದ ಹೆಚ್ಚಿನ ಪ್ರಯೋಜನವೇನೂ ಇಲ್ಲ; ಬದಲಾಗಿ ಬಂಧನದ ಹೊರೆ ಅತಿಯಾಗಿ ಬೆಳೆಯುತ್ತದೆ.

ಪ್ರಧಾನಿ ಮೋದಿಯವರು ರಕ್ಷಣೆಗೆ ಸಂಬಂಧಿಸಿದ ವಿಷಯಗಳಲ್ಲಿ ಇತ್ತೀಚೆಗೆ ಹೇಳಿರುವ ಕೆಲವು ವಿಷಯ ಗಳನ್ನು ಮೊದಲಿಗೇ ತಿಳಿಸಲಾಗಿದೆ. ಅದರ ಪ್ರಕಾರ ರಕ್ಷಣಾ ಧೋರಣೆಯಲ್ಲಿ ನಮ್ಮ ಶಕ್ತಿಯನ್ನು ಪ್ರದರ್ಶಿಸುವುದು, ಸಾಗರಗಳಲ್ಲಿ ನಮ್ಮ ಹೆಜ್ಜೆ ಗುರುತು ಗಳನ್ನು ಇಡುವುದು, ನಮ್ಮ ದೇಶದ ಮುನ್ನಡೆಯು ನಮ್ಮ ನೆರೆಹೊರೆಯ ರಾಷ್ಟ್ರಗಳ ಹಿತಚಿಂತನೆಯಿಂದಲೇ ಪ್ರೇರಿತವಾಗಿದೆ, ನಮ್ಮ ರಕ್ಷಣಾ ಪಡೆಗಳಿಗೆ ಅತಿ ನವೀನವಾದ ಶಸ್ತ್ರಾಸ್ತ್ರಗಳನ್ನು ಒದಗಿಸುವುದಲ್ಲದೆ ಅಂತಹ ಶಸ್ತ್ರಾಸ್ತ್ರಗಳನ್ನೇ ಬೇರೆ ರಾಷ್ಟ್ರಗಳಿಗೂ ಏಕೆ ಲಭ್ಯವಾಗುವಂತೆ ಮಾಡಬಾರದು, (ಅಂದರೆ, ಮಾರಬಾರದು), ಇವೆಲ್ಲ ಮುಖ್ಯ ಭಾಗವಾಗಿವೆ. ಈ ಗುರಿ ಸಾಧಿಸಲು ನಮ್ಮ ರಕ್ಷಣಾ ಉತ್ಪನ್ನವನ್ನು ನವೀಕರಿಸುವುದಲ್ಲದೆ, ಅದನ್ನು ಸ್ವಾವಲಂಬನೆಯ ಮೂಲಕ ಸಾಧಿಸುವ ಆಶಯವನ್ನು ವ್ಯಕ್ತಪಡಿಸಿದ್ದಾರೆ. ನಮಗೆ ಈಗಾಗಲೇ ತಿಳಿದಿರುವಂತೆ ನಮ್ಮ ಸ್ವಾವಲಂಬನೆಯ ಮಟ್ಟ ಹೇಳಿಕೊಳ್ಳುವ ಅಂತಸ್ತಿ ನಲ್ಲೇನಿಲ್ಲ; ನವೀಕರಣದ ಸ್ಥಿತಿಯೂ ಇದೇನೇ. ಇಂತಹ ಪರಿಸ್ಥಿತಿಯಲ್ಲಿ ರಕ್ಷಣಾ ಉತ್ಪಾದನೆಯಲ್ಲಿ ವಿದೇಶಿ ನೇರ ಬಂಡವಾಳದ ಹೂಡಿಕೆಯು ತನ್ನಿಂದ ತಾನೆ ಸ್ವಾವಲಂಬನೆಯನ್ನು ನಮಗೆ ದೊರಕಿಸುತ್ತದೆ ಎಂದು ಅವರು ಹೇಳಬಯಸುತ್ತಾರೋ ಎನ್ನುವ ಒಂದು ತೀವ್ರ ಸಂದೇಹ ಹುಟ್ಟುತ್ತದೆ. ಅವರ ರಕ್ಷಣಾ ಸಂಬಂಧೀ ಧೋರಣೆಗಳಿಗೆ ಇದು ಸಹಾಯಕವಾದರೂ, ವಿದೇಶೀ ನೇರ ಬಂಡವಾಳ ಹೂಡಿಕೆಯು ರಕ್ಷಣಾ ಉತ್ಪಾದನೆ ಯಲ್ಲಿ ಸ್ವಾವಲಂಬನೆಯನ್ನು ನಮಗೆ ಎಂದೆಂದಿಗೂ ಒದಗಿಸಲಾರದು. ಇದೊಂದು ಈಗಿರುವ ಹಾನಿವರ್ಧಕ ವಿಷಯ. ಈ ಸಂದರ್ಭದಲ್ಲಿ ದೇಶದ ಹಿತಾಸಕ್ತಿ ಯಿರುವ ಎಲ್ಲರೂ ಈ ನೀತಿಯ ವಿರುದ್ಧ ತಮ್ಮ ಕೂಗನ್ನು ಕೇಳುವಂತೆ ಮಾಡುವುದು ಅತ್ಯವಶ್ಯಕ.

**ವೈ. ಸಿ. ಸುಬ್ರಹ್ಮಣ್ಯ**
ನಂ. ೨೯೦-೪, ೩೪ನೇ 'ಎ' ಅಡ್ಡರಸ್ತೆ, ೯ನೇ ಮುಖ್ಯರಸ್ತೆ
೪ನೇ ಬ್ಲಾಕ್, ಜಯನಗರ, ಬೆಂಗಳೂರು – ೫೬೦ ೦೧೧

## ಮುನಿಸು

ಮುಗಿಲ ಸುಂದರಿ
ತನ್ನ ಚಿಕ್ಕೆಗಣ್ಣ ಮುಚ್ಚಿ
ಕಾರ್ಮುಗಿಲ ಸೆರಗ ಮುಸುಕಿಕ್ಕಿ
ಮುಸು ಮುಸು ಅತ್ತದ್ದು
ಇಳೆಗೆ ತುಂತುರು ಮಳೆ

**ವೈ. ಕೆ. ಸಂಧ್ಯಾ ಶರ್ಮ**, ಬೆಂಗಳೂರು



ಶ್ರೀನಿವಾಸ ಕುಂಡಂತಾಯ

# ಸೊಳ್ಳೆ ಸಂಹಾರ




ಗಾಸಿಪ್ ಸುದ್ದಿಗಳಿಗೆ, ವದಂತಿಗಳಿಗೇನೂ ನಮ್ಮಲ್ಲಿ ಕೊರತೆಯಿಲ್ಲ. ಹೆಸರು ಪಡೆದ ನಟ–ನಟಿಯರ ನಡುವೆ ಸಂಬಂಧ ಕಲ್ಪಿಸಿ ರಂಗುರಂಗಿನ ಕತೆ ಹೊರಡಿಸುವುದು ಎಲ್ಲರಿಗೂ ತಿಳಿದ ಸಮಾಚಾರ. ಜಾನ್ ಅಬ್ರಹಾಂ–ಬಿಪಾಶಾ ಬಸು, ದೀಪಿಕಾ ಪಡುಕೋಣೆ (ದೀಪಿಕಾ ಪಡುಕೋಣೆ ಎಂದರೆ ಆಕೆಗೆ ಸಿಟ್ಟು ಬರುತ್ತದೆ. ದೀಪಿಕಾ ಪಡ್‌ಕೋನ್ ಅಂತೆ), ಸಿದ್ಧಾರ್ಥ ಮಲ್ಯ, ಕರೀನಾ ಕಪೂರ್, ಶಾಹಿದ್ ಕಪೂರ್, (ನಂತರ ಆಕೆ ಕರೀನಾ ಸೈಫಾಲೀಖಾನ್ ಆಗಿರುವುದು ವರ್ತಮಾನದ ಸುದ್ದಿ), ಕತ್ರಿನಾ ಕೈಫ್ – ಸಲ್ಮಾನ್‌ಖಾನ್, ನಂತರ ಕತ್ರಿನಾ ಕೈಫ್ – ರಣಬೀರ್, ದೀಪಿಕಾ ಪಡ್‌ಕೋನ್ – ರಣಬೀರ್ ಅಂತೂ ಈ ನಟಿಯರಲ್ಲಿ ಅನೇಕರು 'ಸೋಡಾ' ಇದ್ದಂತೆ. ಸಾರಾಯಿ, ವಿಸ್ಕಿ, ರಮ್, ಯಾವುದರ ಜೊತೆ ಬೇಕಾದರೂ ಬೆರೆಯುವ ಕರುಣಾಮಯಿಗಳು.

ವದಂತಿ ಮತ್ತು ಗಾಸಿಪ್ ಸುದ್ದಿ ರಾಜಕಾರಣಿಗಳನ್ನು ಬಿಟ್ಟಿಲ್ಲ. ವಿಧಾನಸಭೆಯಲ್ಲಿ 'ಬ್ಲೂ' ಫಿಲ್ಮ್ ನೋಡಿದರು ಅನ್ನೋ ಸುದ್ದಿ ಬಗ್ಗೆ ನಾನು ಬರೆಯೋಲ್ಲ, ರೇಣುಕಾಚಾರ್ಯ ಅದ್ಯಾರೋ ನರ್ಸ್‌, ಕಿಸ್ಸು ಅಂತ ಏನೇನೋ ಫೋಟೋ ಸಹಿತ ಸುದ್ದಿ ಬಂದಿತ್ತು. ರಾಧಿಕಾ ಜೊತೆ ಮಾಜಿ ಮುಖ್ಯಮಂತ್ರಿ ಶ್ರೀ ಕುಮಾರಸ್ವಾಮಿ ಬಗ್ಗೆ ಬರೆದೂ ಬರೆದೂ, ಅವಳನ್ನೇ ಕಟ್ಟಿಕೊಳ್ಳುವಂತಹ ಸಂದಿಗ್ಧ ಉಂಟಾಯ್ತು. ಹೀಗೆ ಅನೇಕ 'ಮಹನೀಯರ' ವೈಯಕ್ತಿಕ ಬದುಕಿನಲ್ಲಿ ಬಿರುಗಾಳಿಯಂತೆ ಈ ಗಾಸಿಪ್ ಸುದ್ದಿ ಅಲ್ಲೋಲ ಕಲ್ಲೋಲ ಮಾಡಿಬಿಡುತ್ತದೆ.

ಹಿಂದೆಯೂ ಇಂತಹ ಸುದ್ದಿಗಳು ಅಲ್ಲೊಂದು ಇಲ್ಲೊಂದು ಬರುತ್ತಿರಲಿಲ್ಲ ವೆಂದೇನೂ ಹೇಳಲಾಗದು. ಭಾರತದ ಪ್ರಥಮ ಪ್ರಧಾನ ಮಂತ್ರಿ ಜೊತೆಗೆ ಲೇಡಿ ಮೌಂಟ್‌ಬ್ಯಾಟನ್ ಹೆಸರು ಅಂಟಿಕೊಂಡು ಅಲೆಯುತ್ತಿತ್ತು.

ಲೇಡಿ ಮೌಂಟ್‌ಬ್ಯಾಟನ್‌ರು ಭಾರತಕ್ಕೆ ಬಂದು ಪ್ರಧಾನಿಯವರನ್ನು ಭೇಟಿ ಮಾಡಿ ಹಿಂದಿರುಗಿದ್ದ ಸಮಯದಲ್ಲಿ ಪ್ರಧಾನಿ ಶ್ರೀ ಜವಾಹರಲಾಲ್ ನೆಹರೂರವರು ಇನ್ನೂ ರೋಮ್ಯಾಂಟಿಕ್ ಮೂಡ್‌ನಲ್ಲೇ ಇದ್ದರೆಂದು ಕಾಣುತ್ತದೆ. ಸಾರ್ವಜನಿಕ ಸಭೆಯನ್ನು ಉದ್ದೇಶಿಸಿ ಭಾಷಣ ಮಾಡಿದಾಗ ಒಮ್ಮೆ ವಿನೋದವಾಗಿ, "ಭಾರತದ ಜನಸಂಖ್ಯೆ ವಿಪರೀತ ಹೆಚ್ಚಲು ಸೊಳ್ಳೆಗಳೇ ಕಾರಣ. ಸಾಕಷ್ಟು ಬೆವರಿಳಿಸಿ ದುಡಿದು ಸುಖನಿದ್ರೆಗೆ ಹೋದ ಜನರನ್ನು ಈ ಸೊಳ್ಳೆ ಎಬ್ಬಿಸಿ ನಿದ್ರೆಗೆಡಿಸಿಬಿಡುತ್ತದೆ, ನಿದ್ದೆಗೆಟ್ಟ ಮೇಲೆ ಮತ್ತೇನು ಮಾಡುವುದು...? ಹೀಗಾಗಿ ಭಾರತದ ಜನಸಂಖ್ಯೆ ಹೀಗೆ ಎಗ್ಗಿಲ್ಲದೆ ಏರುತ್ತಿದೆ" ಅಂದಿದ್ದರು. ಬಿಹಾರದ ಮಾಜಿ ಮುಖ್ಯಮಂತ್ರಿ ಲಾಲೂ ಪ್ರಸಾದ್ ಯಾದವ್‌ರಿಗೂ ತುಂಬ ಸೊಳ್ಳೆ ಕಾಟ ಇದ್ದಿರಬೇಕು. ಅನೇಕ ಹೆಣ್ಣುಮಕ್ಕಳ ತಂದೆಯಾಗಿ ಅವರು ವಿಜೃಂಭಿಸಿದರು.

ಸೊಳ್ಳೆ ನಿವಾರಣೆಗೆ ಪ್ರತಿಯೊಬ್ಬರೂ ಹೇಳಿದ ಸಲಹೆಗಳನ್ನು ಆಚರಣೆಗೆ ತಂದು ಸೋತಿದ್ದೇನೆ. ಸೊಳ್ಳೆ ಪರದೆ ಹಾಕಿ ಮಲಗು ಎಂದ ಬೆಳ್ಳ. ಸೊಳ್ಳೆ ಪರದೆ ತಂದು ಹಾಕಿಕೊಂಡು ಮಲಗಿದೆ, ಸೊಳ್ಳೆಗಳು ಒಗ್ಗಟ್ಟಿನಿಂದ ಬಲವಾಗಿ ಸೊಳ್ಳೆ ಪರದೆಯನ್ನೇ ನನ್ನ ಶರೀರದ ಬಳಿ ಬರುವಂತೆ ಮಾಡಿ ತಮ್ಮ 'ಸ್ಟ್ರಾ'ಗಳಿಂದ ರಕ್ತ ಹೀರಿಯೇ ಬಿಟ್ಟವು.

ಕಾಯಿಲ್ ಹಚ್ಚಿಟ್ಟು ಮಲಗಿದೆ. ಹೊಗೆಯಿಂದ ನನ್ನ ಉಸಿರಾಟಕ್ಕೆ ಕಷ್ಟವಾಯಿತೇ ಹೊರತು, ಸೊಳ್ಳೆ ದಾಳಿ ನಿರಂತರವಾಗಿಯೇ ನಡೆದಿತ್ತು.

ಓಡೋಮಸ್ ಮೈಯ್ಯೆಲ್ಲಾ ಹಚ್ಚಿಕೊಂಡೆ. ಓಡೋಮಸ್ ಟ್ಯೂಬ್ ಬೇಗ ಖಾಲಿ ಆಯಿತು. ಹಾಸಿಗೆ ಹೊದಿಕೆಗಳಿಗೆ ಓಡೋಮಸ್ ಅಂಟಿಕೊಂಡಿತು. ನನ್ನ ಶರೀರದ ಮೇಲೆ ಎಂದಿನಂತೆ ಸೊಳ್ಳೆಗಳು ಬಂದು ಕುಳಿತು ತಮ್ಮ ತೀಟೆ ತೀರಿಸಿಕೊಂಡೇ ಹೋದವು.

ಲಿಕ್ವಿಡೇಟರ್ ಅಳವಡಿಸಿ ಆನ್ ಮಾಡಿ ಇಟ್ಟೆ. ಕೋಣೆಯೊಳಕ್ಕೆ ಹೋದರೆ ಘಾಟು ವಾಸನೆ ವಾಕರಿಕೆ ತರಿಸಿದ್ದು ನನಗೆ ಮಾತ್ರ. ಸೊಳ್ಳೆಗಳು ನಿರಾತಂಕವಾಗಿ ತನ್ನ ರಕ್ತಹೀರುವಿಕೆ ಕಾರ್ಯ ಮುಂದುವರಿಸಿಕೊಂಡೇ ಹೋದವು. ಹಿಂದೆ ಗಿಡಗಳಿಗೆ ರೋಗ ಅಂಟಿದರೆ ಡಿಡಿಟಿ ಪುಡಿ ಸಿಂಪಡಿಸಿದರೆ ಎಲ್ಲವೂ ಉದುರಿಹೋಗಿ, ಎಲೆ ಆರೋಗ್ಯದಿಂದ ಬೆಳೆದು ಗಿಡಗಳು ಬದುಕುವಂತೆ ಆಗುತ್ತಿತ್ತು. ಕಾಲಕ್ರಮೇಣ ಡಿಡಿಟಿ ಪೌಡರನ್ನೇ ಕೀಟಗಳು ತಮ್ಮ ಆಹಾರವನ್ನಾಗಿ ಪರಿವರ್ತಿಸಿಕೊಂಡು, ಜಂಕ್ ಫುಡ್, ಪೀಡ್ಜಾ ತಿಂದು ಉಬ್ಬುವ ಈಗಿನ ಮಕ್ಕಳಂತೆ ಬೆಳೆಯಲಾರಂಭಿಸಿದವು.

ಅದರಂತೆಯೇ ಈ ಸೊಳ್ಳೆಗಳೂ ಕೂಡ ತಮ್ಮ ವಿರುದ್ಧ ಬಳಸುವ ಯಾವುದಕ್ಕೂ ಒಗ್ಗಿಕೊಂಡು ರಕ್ತಹೀರುವ ಕಾರ್ಯದಲ್ಲಿ ಯಶ ಕಾಣುತ್ತಿವೆ. ಜೊತೆಗೆ "ಗುಯ್..." ಎಂಬ ಕೆಟ್ಟ ಸಂಗೀತದ ರಸದೌತಣ ಬೇರೆ. ಈ ಸೊಳ್ಳೆಯ ಸಂಗೀತವು ಕ್ರ್ಯಾಷ್ ಕೋರ್ಸ್ ಮೂಲಕ ಕಲಿತು ಹಾಡುವ ಹಾಡುಗಾರರ ಹಾಡಿಗಿಂತ ಮೇಲೆಂದೇ ನನ್ನ ಅಭಿಪ್ರಾಯ. ಸೊಳ್ಳೆ ಕಡಿತದಿಂದ ನಿದ್ರೆ ಹಾಳಾಗುವುದರಿಂದ ಮಲಗಿದ ಕೂಡಲೇ ಸುಖ ನಿದ್ರೆ. ಒಂದು ದಿನ ರಾತ್ರಿ ಮಲಗಿದ್ದವನು ಒಂದು ಪ್ರಯೋಗ ಮಾಡಲು ನಿರ್ಧರಿಸಿದ್ದೆ. ಸೊಳ್ಳೆ ನಿವಾರಣೆಗಾಗಿ ರಕ್ತದಾನ ಮಾಡಿ ಎಂದು ಪ್ರಚಾರ ಮಾಡಿದೆ. ಎಲ್ಲ ವರ್ಗದವರೂ ಧಾರಾಳವಾಗಿ ರಕ್ತದಾನ ಮಾಡಿದರು. ಗಟ್ಟಿ ಪ್ಲಾಸ್ಟಿಕ್ ಕವರ್‌ನಲ್ಲಿದ್ದರೆ ಪಾಪ ಸೊಳ್ಳೆ ಹೇಗೆ ತಾನೇ ತೂತುಮಾಡಿ, ತನ್ನ 'ಸ್ಟ್ರಾ'ವನ್ನು ಒಳ ತೂರಲಿಕ್ಕೆ ಸಾಧ್ಯ !? ಅದಕ್ಕೆ ದಾನಿಗಳು ಕೊಟ್ಟ ರಕ್ತವನ್ನು ಬಲೂನುಗಳಲ್ಲಿ ತುಂಬಿಸಿ ಮಲಗುವ ಕೋಣೆಯಲ್ಲಿ ನೇತುಹಾಕಿದೆ. ರಕ್ತದಾಹಿಗಳಾದ ಸೊಳ್ಳೆಗಳು ಬಲೂನನ್ನು ಅಟ್ಯಾಕ್ ಮಾಡಿ ಮನದಣಿಯೆ ಕುಡಿದುವು, ನನ್ನ ಪ್ರಯೋಗ ಯಶಸ್ವಿ ಆಗಿಬಿಟ್ಟರೆ ಭಾರತದ ಜನತೆಯನ್ನು ಸೊಳ್ಳೆಗಳಿಂದ ಕಾಪಾಡಿದ ಸಂತೋಷ ನನಗೆ ಸಿಗುತ್ತದೆಂದು ಆಶಿಸಿದೆ. ನನ್ನನ್ನು ಕಚ್ಚಲು ಅಂದು ಸೊಳ್ಳೆಗಳು ಬರಲಿಲ್ಲ. ಸ್ವಲ್ಪಹೊತ್ತಿನ ನಂತರ ನಾನು ಮಲಗಿದ್ದಲ್ಲಿಗೆ ಮೊದಲು ಎರಡು ಸೊಳ್ಳೆಗಳು ಬಂದವು. ಮನುಷ್ಯರಂತೆ ಮಾತನಾಡಿದವು. ಒಂದು



ಸೊಳ್ಳೆ ಕಿವಿಯಲ್ಲಿ ಹೇಳಿತು "ಓಟು ಕೊಡು, ಓಟು ಕೊಡು, ನಾನು ನಿನ್ನ ಸೇವೆ ಮಾಡಬೇಕು ನಾನು ಸೇವಕ, ನೀನು ಧಣಿ."

ಇನ್ನೊಂದು ಸೊಳ್ಳೆ ಆ ಸೊಳ್ಳೆಗೆ ಹೇಳಿತು: "ಯಾಕೋ ಹಾಗೆ ಸುಳ್ಳು ಹೇಳುತ್ತೀ ? ನಾವೆಂದಾದರೂ ಜನಸೇವೆ ಮಾಡಿದ್ದು ಇದೆಯೇ ? ನಮ್ಮ ಉದ್ಧಾರ ನಾವು ಮಾಡಿಕೊಳ್ಳುವುದರಲ್ಲೇ ನಮ್ಮ ಪದವಿಯ ಅವಧಿ ಮುಗಿದಿರುತ್ತೆ." "ಹಾಗಲ್ಲ, ಈ ಪ್ರಜೆಗಳು ಯಾವಾಗಲೂ ನಾವು ಗೋಗರೆದಾಗ, ಕೈ ಮುಗಿದಾಗ ನಮ್ಮ ಎಲ್ಲ ಅಪರಾಧ ಮರೆತು ಮತ್ತೆ ಮತ್ತೆ ನಮ್ಮನ್ನೇ ಆರಿಸುವರು" ಎಂದು ಹೇಳಿ ಎರಡೂ ಸೊಳ್ಳೆಗಳು ನನ್ನ ರಕ್ತ ಕುಡಿಯದೆ ಹಾರಿಹೋದವು. ನನಗನ್ನಿಸಿತು – ಈ ಸೊಳ್ಳೆಗಳು ಯಾರೋ ರಾಜಕಾರಣಿಗಳು ದಾನ ಮಾಡಿದ ರಕ್ತ ಕುಡಿದು ಹೀಗೆ ಮಾತನಾಡುತ್ತಿರಬಹುದೆಂದು. ಮತ್ತೆ ಕೆಲವು ಸೊಳ್ಳೆಗಳು ನನ್ನ ಕಿವಿಯ ಬಳಿ ಬಂದು ಹಾಡಲಾರಂಭಿಸಿದವು. ಕಣ್ಣು ತೆರೆದು ನೋಡಿದರೆ, ಕ್ಯಾಬರೇ ನೃತ್ಯ ಮಾಡುತ್ತಿದ್ದವು.

"ಶೀಲಾ ಕಿ ಜವಾನಿ", "ಮುನ್ನಿ ಬದ್ನಾಂ ಹುಯಿ" ಮುಂತಾದ ಹಾಡುಗಳನ್ನು ಹಾಡುತ್ತಾ ಕುಣಿಯುತ್ತಿದ್ದುದನ್ನು ನೋಡಿ, ಈ ಸೊಳ್ಳೆಗಳು ಯಾರೋ ಸಿನಿಮಾ ಐಟಂ ಸಾಂಗ್ ನಟಿಯರು ದಾನ ಮಾಡಿದ ರಕ್ತಹೀರಿ ಬಂದಿವೆ ಎಂದು ಅರಿವಾಯಿತು. ಅವೂ ಹಾರಿಹೋದವು. ಆದರೆ ಕಚ್ಚಲಿಲ್ಲ. ಕಿವಿಯಿಂದ ಇನ್ನಷ್ಟು ಸೊಳ್ಳೆಗಳು ಕಿವಿಯ ಬಳಿ ಬಂದು ಮಾತನಾಡಿಕೊಂಡವು: "ಯಾಕ್ ಮಚ್ಚಾ, ಇವತ್ತು ಯಾವ್ದೂ ಒಳ್ಳೆ ಫಿಗರ್ರು ನೋಡೋಕೆ ಸಿಗಲಿಲ್ವಾ ?"

"ಅದಕ್ಕೆ ಬೇಜಾರಾಗಿ ಟೈಟ್ ಆಗೋವರ್ಗೂ ಹಾಕ್ಕೊಂಡೆ."

"ದಂ ಎಳೀಬೇಕಾಗಿತ್ತು. ಸಖತ್ ಸ್ವರ್ಗ ಸುಖ ಸಿಗುತ್ತೆ ಅಲ್ವಾ ?"

"ಬ್ರೌನ್ ಶುಗರ್ರು, ಆ ಕೀನ್ಯಾದ ಸ್ಟೂಡೆಂಟ್ ಕೊಡ್ತೀನೀಂತ ಬಂದ. ಕಾಸಿರ್ಲಿಲ್ಲ."

ಓಹೋ ಈ ಸೊಳ್ಳೆಗಳು, ಕಾಸನ್ನು ಏನು ಮಾಡುವುದು ? ಎಂಬ ಸ್ಥಿತಿಯಲ್ಲಿ ಕಾಸಿನಲ್ಲೇ ಉರುಳಾಡುತ್ತಿರುವವರ ಮಕ್ಕಳಿರಬೇಕು ? ಮಜಾ ಉಡಾಯಿಸಲು ಕಾಲೇಜಿಗೆ ಬರುತ್ತಿರಬೇಕು. ಅವರ ದಾನದ ರಕ್ತ ಕುಡಿದ ಸೊಳ್ಳೆಗಳ ಮಾತು ಹೀಗೆ ಕೇಳಿ ಬರುತ್ತಿದೆ ಎಂದು ಆಲೋಚಿಸಿದಾಗ ಸೊಳ್ಳೆಗಳು ಹಾರಿದವು. ಒಂದಾದರೂ ಸೊಳ್ಳೆ ನನ್ನನ್ನು ಕಚ್ಚಿ ರಕ್ತ ಕುಡಿಯಲಿಲ್ಲ. ನನ್ನ ಪ್ರಯೋಗ ಫಲಕಾರಿಯಾಗಿತ್ತು. ಒಂದು ಒಂಟಿ ಅನಾಫಿಲೀಸ್ ಹೆಣ್ಣು ಸೊಳ್ಳೆ ಮಾತ್ರ ಧೈರ್ಯ ಮಾಡಿ ನನ್ನ ಕೈಮೇಲೆ ಕುಳಿತು, ತನ್ನ 'ಸ್ಟ್ರಾ'ವನ್ನು ನನ್ನ ಚರ್ಮದ ರಂಧ್ರದೊಳಗೆ ತೂರಿಸಿ ರಕ್ತ ಹೀರಲಾರಂಭಿಸಿತು. ರಕ್ತ ಹೀರುವುದರಲ್ಲೇ ತದೇಕ ಚಿತ್ತ ಇಟ್ಟು, ಮೈ ಮರೆತು ಹೀರಿತು, ಹೀರಿತು. 'ಫಟ್' ಅಂತ ಗುರಿಯಿಟ್ಟು ಸೊಳ್ಳೆಗೆ ಹೊಡೆದೆ. ಆದರೂ ಪೂರ್ತಿ ಸಾಯಲಿಲ್ಲ, ಮೈಮೇಲೆ ಹರಿದಾಡುತ್ತಾ ಕಿವಿಯ ಬಳಿ ಬಂದು ಮೆಲುದನಿಯಲ್ಲಿ, ಪ್ರಾಣಾಂತಿಕ ಯಾತನೆಯ ಸ್ವರದಲ್ಲಿ "ಥೂ ನಿನ್ನ... ಅಲ್ಲಾ ಕಣೋ... ನಾನು ನಿನ್ನನ್ನ ಸಾಯಿಸಿಬಿಟ್ನಾ? ಸ್ವಲ್ಪ ನಿನ್ನ ರಕ್ತ ಕುಡಿದೆ, ಅದೂ ಬಹಳ ಸ್ವಲ್ಪ. ಅಷ್ಟಕ್ಕೆ ನನ್ನ ಹೊಟ್ಟೆ ತುಂಬಿಬಿಡುತ್ತೆ. ಮತ್ತೆ ಹಾರಿ ಹೋಗುತ್ತೇನೆ. ಅನಂತರ ನನ್ನನ್ನು ಕರೆದು 'ಬಾ ಸೊಳ್ಳೆ, ಇನ್ನೂ ಕುಡಿ' ಎಂದು ನೀನೇ ಗೋಗರೆದರೂ ನಾನು ಕುಡಿಯಲಾರೆ. ಮನುಷ್ಯನಲ್ಲದೆ ಮತ್ತೆ ಯಾವ ಜೀವರಾಶಿಗೂ ಹೊಟ್ಟೆ ತುಂಬಿದರೆ ಮತ್ತೇನೂ ಬೇಕೆನಿಸುವುದಿಲ್ಲ. ಕೆಲವು ತೊಟ್ಟು ರಕ್ತ ಹೀರಿದ್ದಕ್ಕೆ, ನನಗೆ ಪೆಟ್ಟು ಕೊಟ್ಟು ಸಾಯಿಸುತ್ತಿದ್ದೀಯೆ ಸ್ವಲ್ಪ ರಕ್ತ ಹೀರಿ ನಿನ್ನ ಪ್ರಾಣಕ್ಕೆ ಅಪಾಯ ಮಾಡದೆ ಹೋಗುವ ನಾನು ಹೆಚ್ಚೋ ? ಕೆಲವು ಹನಿ ರಕ್ತ ಹೀರಿದ್ದಕ್ಕಾಗಿ ನನ್ನ ಜೀವವನ್ನೇ ಬಲಿ ತೆಗೆದುಕೊಂಡ ನೀನು... 'ಛೀ ಮನುಷ್ಯ! ಥೂ – ನೀಚ ! ನಿನಗೆ ಧಿಕ್ಕಾರ !' " ಅಂತ ಹೇಳಿ ಸತ್ತೇ ಹೋಯಿತು. ಸ್ವಲ್ಪ ಪಶ್ಚಾತ್ತಾಪ ಶುರುವಾಯಿತು. ಸೊಳ್ಳೆಗಿಂತಲೂ ನಾನು ಹೀನ ಅನ್ನಿಸಲು ಪ್ರಾರಂಭವಾಯಿತು. "ಓ ಸೃಷ್ಟಿಕರ್ತ! ನನ್ನನ್ನು ಕ್ಷಮಿಸು. ಒಂದು ಸಣ್ಣ ಸೊಳ್ಳೆಯನ್ನು ಸೃಷ್ಟಿಸಲಾಗದ ನಾನು, ನೀನು ಸೃಷ್ಟಿಸಿದ ಸೊಳ್ಳೆಯೊಂದರ ಪ್ರಾಣ ತೆಗೆದು, ಕೊಲೆಗಾರನಾಗಿಬಿಟ್ಟೆ ಪ್ರಭು. ಮನ್ನಿಸು, ಪಾಪ ಪರಿಹಾರಾರ್ಥ ಬೆಳ್ಳಿಯ ಒಂದು ಅತೀ ಸಣ್ಣ ಸೊಳ್ಳೆ ಮಾಡಿಸಿ (ನಿನ್ನ ಕಣ್ಣಿಗೂ ಕಾಣದಷ್ಟು ಸಣ್ಣದು) ನಿನ್ನ ಹುಂಡಿಗೆ ಹಾಕ್ತೇನೆ" ಎಂದು ಅಳಲಾರಂಭಿಸಿದೆ.

ಮತ್ತೊಂದು ಸೊಳ್ಳೆ ತೀವ್ರವಾಗಿ ನೋವಾಗುವಂತೆ ಕಡಿಯುತ್ತಿರುವ ಅನುಭವವಾಯಿತು. ಇಷ್ಟೊಂದು ನೋವು ಮಾಡುವ ಶಕ್ತಿ ಈ ಸೊಳ್ಳೆಗೆ ಹೇಗೆ ಬಂತು ? ಎಂದು ಹೆದರಿ ಕಣ್ಣು ತೆರೆದೆ, ನನ್ನ ಅರ್ಧಾಂಗಿ, ಕೃಶಾಂಗಿ ನನ್ನನ್ನು ಜಿಗುಟುತ್ತ ಹೇಳುತ್ತಿದ್ದಳು: "ಏನ್ರೀ... ಎಂಟು ಗಂಟೆಯಾಯಿತು. ಇನ್ನೂ ಬಿದ್ಕೊಂಡೇ ಇದೀರಲ್ಲ. ಕಾಫಿ ಮಾಡಿಟ್ಟು ಒಂದು ಗಂಟೇನೆ ಆಯ್ತು. ಬಿಸಿ ಇರ್ಲಿ ಅಂತ ಕುಕ್ಕರ್ ಮೇಲೆ ಇಟ್ಟಿದ್ದೇನೆ. ಏಳಿ." ಲೇ – ಲಲ್ಲಿ, ಕನಸಲ್ಲಿ ಸೊಳ್ಳೆ ಮಾತಾಡಿದ್ದು "ನಿಂಗೆ ಹೇಗೆ ಹೇಳ್ಲಿ ?!"

"ಸೊಳ್ಳೆ ಮಾತಾಡೋದಾ, ನಾನಿರೋವಾಗ ಯಾವ ಸೊಳ್ಳೇನೂ ನನ್ನ ಗಂಡನ ಜೊತೆ ಮಾತಾಡೋದನ್ನು ನಾನು ಸಹಿಸೊಲ್ಲ ಗೊತ್ತಾ ? ಬೆಳಗ್ಗೆ ಏಳ್ತಾನೆ ಯಾಕ್ರೀ ಕಟ್ಟುಕತೆ ಹೇಳ್ತೀರಾ ?"

"ಅಲ್ಲಾ, ನಿಜವಾಗ್ಲೂ ಕಣೆ."

"ಸುದೀಪಂದು 'ಈಗಾ' ಸಿನಿಮಾ ಸೆಕೆಂಡ್ ಷೋ ಒಬ್ಬರೇ ಹೋಗಿ ನೋಡ್ಕೊಂಡು ಬಂದಿದೀರಾ ? ಅದರಲ್ಲಿ ನೊಣ ಅಧಿಕ ಪ್ರಸಂಗ ಮಾಡುತ್ತಂತೆ, ಈಗ ಅದನ್ನ ನೋಡಿ ನಿಮ್ಮ ಕನಸಿನಲ್ಲಿ ಸೊಳ್ಳೆ ಮಾತಾಡಿದ ಹಾಗೆ ಅನ್ನಿಸಿದೆ... ಸರಿಯಾಗಿ ಎಚ್ಚರ ಮಾಡ್ಕೊಳ್ಳಿ, ಬೇಗ ಹೋಗಿ ಬಾಯಿ ಗಲಬರಿಸ್ಕೊಂಡು ಬನ್ನಿ. ಕಾಫಿ ತಣ್ಣಗೆ ಆಗುತ್ತೆ."

"ಕಾಫಿ ಮಾಡಿ ಒಂದು ಗಂಟೆ ಆಯ್ತೂಂತೀಯಾ ? ತಣ್ಣಗಾಗ್ದೆ ಇರುತ್ತೈ ?"

"ಅಲ್ಲಾರಿ, ಕುಕ್ಕರ್ ಮೇಲೆ ಇಟ್ಟಿದ್ದೀನಿ ಅಂದ್ನಲ್ಲ ?"

"ಕುಕ್ಕರ್ ಮೇಲೆ ಇಟ್ಟಿದ್ದೀಯಾ ? ಆದರೆ ಸ್ಟವ್ ಆನ್ ಮಾಡೋಕೆ ಮರ್ತಿದ್ದೀಯಾ."

"ರೀ ಒಳ್ಳೆದೇ ಆಯ್ತು, ನೀವು ಹೇಳಿದ್ದು ನಿಜ, ಸ್ಟೌ ಆನ್ ಮಾಡೋಕೆ ಮರ್ತೆ, ಕುಕ್ಕರ್ ಎಲ್ಲಾ ರೆಡಿ ಮಾಡಿ ಇನ್ನೇನು ಸ್ಟೌ ಆನ್ ಮಾಡ್ಬೇಕು ಅನ್ನೋವಾಗ ಕರೆಂಟ್ ಬಂತಲ್ಲಾ, ಟಿ.ವಿ. ಹಾಕೋಕೆ ಹೋಗಿ, ಸ್ಟೌ ಆನ್ ಮಾಡೋದನ್ನು ಮರ್ತೇ ಬಿಟ್ಟೆ."

"ನನ್ನ ಕರ್ಮ, ಇವಳ ಕಲಗಚ್ಚು ಕಾಫಿ ಕುಡ್ಡು ಬದುಕಬೇಕು, ರಾತ್ರಿ ಸೊಳ್ಳೆಗಳ ಕೈಲಿ ರಕ್ತ ಹೀರಿಸ್ಕೋಬೇಕು. ಇದೇ ನನ್ನ ಹಣೇಬರಹ ಆಗೋಯ್ತು. ಅದೇನು ಸೊಳ್ಳೆ ಪುಣ್ಯ ಪಡ್ಕೊಂಡು ಬಂದ್ನೋ ನಾನು !"

ಅಂತೂ ಸೊಳ್ಳೆ ಸಂಹಾರ ಕನಸಾಗೆ ಉಳಿಯಿತು.



**ಶ್ರೀನಿವಾಸ ಕುಂಡಂತಾಯ**
ಇ–೧೧೧, ವಿ.ಡಿ.ಬಿ. ಸೆಲಡಾನ್
ರೈತರ ಸಂತೆ ಹತ್ತಿರ
ಜಕ್ಕೂರು ರಸ್ತೆ, ಶಿವನಹಳ್ಳಿ
ಯಲಹಂಕ
ಬೆಂಗಳೂರು – ೫೬೦ ೦೬೪

ಗುಲಾಮಗಿರಿ ಅತ್ಯಂತ ಹೇಯ ಪದ್ಧತಿ. ಅಮಾನುಷ ವರ್ತನೆ. ಮಾನವ ಹಕ್ಕುಗಳಲ್ಲಿ ಅವರಿಗೆ ಅತ್ಯಂತ ಮೂಲಭೂತವಾದ ಹಕ್ಕುಗಳೂ ಇಲ್ಲ. ಅವರು ಜೀವಂತ ವ್ಯಕ್ತಿಗಳೇ ಅಲ್ಲ, ಸರಕುಗಳು, ಅಷ್ಟೆ . ಅವರನ್ನು ಮಾರಾಟಮಾಡಬಹುದು. ಕೊಲ್ಲಬಹುದು, ಮನಬಂದಂತೆ ದುಡಿಸಿಕೊಳ್ಳಬಹುದು. ಅವರಿಗೆ ಕಾಯಿಲೆಗಳಿಲ್ಲ. ಚಿಕಿತ್ಸೆಗಳಿಲ್ಲ. ಅವರ ಬದುಕಿನ ಯಾವುದೇ ನಿರ್ಧಾರಗಳನ್ನು ಮಾಲಕನೇ ತೆಗೆದುಕೊಳ್ಳುತ್ತಾನೆ. ಮಾಲಕ ಗುಲಾಮರನ್ನು ಹೊಡೆಯುವುದಂತೂ ತುಂಬ ಸಾಮಾನ್ಯ. ಗುಲಾಮನ ಹೆಂಡತಿ ಹಗಲೆಲ್ಲ ಮಾಲಕನ ಹೊಲದಲ್ಲಿ ದುಡಿದು ರಾತ್ರಿ ಮಾಲಕನ ಹಾಸಿಗೆ ಸೇರಬೇಕು. ಗುಲಾಮಿ ಹೆಣ್ಣುಮಕ್ಕಳ ಮೇಲೆ ಮಾಲಕ, ಇಲ್ಲವೆ ಮಾಲಕನ ಮಕ್ಕಳಿಂದ ನಡೆಯುವ ಅತ್ಯಾಚಾರಗಳು ಅತ್ಯಾಚಾರಗಳೇ ಅಲ್ಲ. ಈಗ ಆಗಿನ ಗುಲಾಮಗಿರಿ ಕಡಿಮೆ ಆಗುತ್ತಿದ್ದು ಆಧುನಿಕ ಗುಲಾಮಗಿರಿ ತಲೆ ಎತ್ತುತ್ತಿದೆ. ಅದೇ ಮಾನವರ ಮಾರಾಟ. ಮುಖ್ಯವಾಗಿ ಮಹಿಳೆಯರನ್ನು ವೇಶ್ಯೆಯರನ್ನಾಗಿಸುವುದು ಮತ್ತು ಮಕ್ಕಳನ್ನು ವ್ಯಭಿಚಾರಕ್ಕೆ ತಳ್ಳುವುದು ಲಾಭದಾಯಕ ವ್ಯಾಪಾರವಾಗಿದೆ. ಇದು ಲಾಭದಾಯಕವಾಗಿ ಬೆಳೆಯುತ್ತಿರುವ ಅಪರಾಧ ಉದ್ಯಮವಾಗಿದ್ದು, ಅದೀಗ ಮಾದಕ ವಸ್ತುವಿನ ಮಾರಾಟದ ದಂಧೆಯನ್ನು ಮೀರಿ ಬೆಳೆಯುತ್ತಿದೆ.



# ಗುಲಾಮಗಿರಿ ಇನ್ನೂ ಜೀವಂತ!

**ಎನ್. ಆರ್. ಪಾಟೀಲ**

"ಜಗತ್ತಿನಾದ್ಯಂತ ಸುಮಾರು ಮೂರು ಕೋಟಿ ಮಂದಿ ಗುಲಾಮಗಿರಿಯಲ್ಲಿ ಬದುಕುತ್ತಿದ್ದು, ಅದರಲ್ಲಿ ಅರ್ಧದಷ್ಟು, ಅಂದರೆ ೧.೪೦ ಕೋಟಿ ಜನರು ಭಾರತೀಯರು!" ಎಂಬ ಸ್ಫೋಟಕ ಸುದ್ದಿಯನ್ನು ಆಸ್ಟ್ರೇಲಿಯಾ ಮೂಲದ ಜಾಗತಿಕ ಮಾನವ ಹಕ್ಕುಗಳ ಸಂಘಟನೆ 'ವಾಕ್ ಫ್ರೀ ಫೌಂಡೇಶನ್' ೨೦೧೩ನೇ ಸಾಲಿನ ಜಾಗತಿಕ ಗುಲಾಮಗಿರಿ ಸೂಚ್ಯಂಕದಡಿ ಹೇಳಿದ್ದು ಗಮನಾರ್ಹ. ಜಗತ್ತಿನ ಗುಲಾಮಗಿರಿ ಬಗ್ಗೆ ೧೬೨ ದೇಶಗಳಿಗೆ ರ್‍ಯಾಂಕಿಂಗ್ ನೀಡಿರುವ ಈ ವರದಿಯಲ್ಲಿ ಭಾರತ ಪ್ರಥಮಸ್ಥಾನದಲ್ಲಿದ್ದರೆ ಚೀನಾ ಎರಡನೇ ಸ್ಥಾನದಲ್ಲಿದೆ. ಚೀನಾದಲ್ಲಿ ೨೯ ಲಕ್ಷ ಜನ ಗುಲಾಮರಿದ್ದರೆ, ತೃತೀಯ ಸ್ಥಾನದಲ್ಲಿರುವ ಪಾಕಿಸ್ತಾನದಲ್ಲಿ ೨೧ ಲಕ್ಷ ಗುಲಾಮರಿದ್ದಾರೆ. ಜೀತದ ಸಾಲ, ಬಲವಂತದ ಮದುವೆ ಹಾಗೂ ಮಾನವ ಕಳ್ಳಸಾಗಣೆ ಸೇರಿದಂತೆ ವಿವಿಧ ಸಾಮಾಜಿಕ ಸಮಸ್ಯೆಗಳನ್ನು ಮಾನದಂಡವಾಗಿಟ್ಟುಕೊಂಡು ಆಧುನಿಕ ಗುಲಾಮಗಿರಿಯನ್ನು ಈ ವರದಿಯಲ್ಲಿ ವ್ಯಾಖ್ಯಾನಿಸಲಾಗಿದೆ.

'ವಾಕ್ ಫ್ರೀ ಫೌಂಡೇಶನ್' ಗುಲಾಮಗಿರಿ ಕುರಿತ ತನ್ನ ವರದಿಯನ್ನು ಪ್ರಕಟಿಸಿದ ಬೆನ್ನಲ್ಲೇ ನಮ್ಮ ರಾಜ್ಯದ 'ಕರ್ನಾಟಕ ಜೀತ ವಿಮುಕ್ತ ಸಂಸ್ಥೆ' ಗುಲಾಮಗಿರಿಗೆ ಸಂಬಂಧಿಸಿದ ಎದೆ ಝಲ್ಲೆನಿಸುವ ವರದಿಯೊಂದನ್ನು ಬಿಡುಗಡೆ ಮಾಡಿದೆ. ಕುಂದಗೋಳ ತಾಲೂಕು ಒಂದರಲ್ಲೇ ವಿವಿಧ ಗ್ರಾಮಗಳಲ್ಲಿ ೨೬೬ಕ್ಕೂ ಹೆಚ್ಚು ಜನ ಎಷ್ಟೋ ವರ್ಷಗಳ ಹಿಂದೆ ಮಾಡಿದ ಸಾಲವನ್ನು ತೀರಿಸಲಾಗದೆ ಹಣ ನೀಡಿದ ಯಜಮಾನನ ಮನೆಯಲ್ಲಿ ಜೀತದಾಳುಗಳಾಗಿ ಬದುಕು ಸಾಗಿಸುತ್ತ ದಿನ ನೂಕುತ್ತಿದ್ದಾರೆ. ಇದೇನು ? ದೇಶ ಸ್ವತಂತ್ರವಾಗಿ ೬೭ ವರ್ಷಗಳು ಮುಗಿಯುತ್ತ ಬಂದರೂ ದೇಶದಲ್ಲಿ ಇನ್ನೂ ಗುಲಾಮಗಿರಿಯೇ ? ಆದರೆ ಇದು ಸತ್ಯ.

'ಗುಲಾಮಗಿರಿ' ಮಾನವ ಬೆಳೆಸಿಕೊಂಡು ಬಂದ ಪದ್ಧತಿಗಳಲ್ಲಿಯೇ ಅತ್ಯಂತ ಕ್ರೂರ ಹಾಗೂ ಹೀನಾಯ ಪದ್ಧತಿ. ಮಾನವ ಮಾನವನನ್ನು ಪಶುಗಳಂತೆ ನಡೆಸಿಕೊಳ್ಳುವ ಅನಾಗರಿಕ ಆಚರಣೆ. ಗುಲಾಮರನ್ನು ಪ್ರಾಣಿಗಳಂತೆ, ಸರಕುಗಳಂತೆ ಪರಿಗಣಿಸಿ, ಅವರನ್ನು ಪಶು ಹಾಗೂ ಚರಾಸ್ತಿಗಳಂತೆ ಮಾರುವ–ಕೊಳ್ಳುವ–ಕೊಲ್ಲುವ ಪದ್ಧತಿ ಜಾರಿಯಲ್ಲಿತ್ತು. ಜಗತ್ತಿನಲ್ಲಿ ಗುಲಾಮಗಿರಿ ಎಷ್ಟೊಂದು ಕಠೋರ ರೂಪದಲ್ಲಿ ಜೀವಂತವಾಗಿದೆ ಎಂಬುದಕ್ಕೆ ಕೇವಲ ಎರಡು ದಶಕದ ಹಿಂದೆ, ಅಂದರೆ ೧೯೯೨ರಲ್ಲಿ ನಡೆದ ಒಂದು ಪ್ರಕರಣವನ್ನು ಹೇಳುತ್ತೇನೆ. ಮೊರಿಟಾನಿಯಾದ ರಾಜಧಾನಿ ನೊವಕ್ಚೋಟ್‌ನಲ್ಲಿ ನಡೆದ ಘಟನೆ ಇದು. ಸುಲೇಖಾ ೧೦ರ ಹರೆಯದ ಮುಗ್ಧೆ. ಅವಳ ಗುಲಾಮಿ ತಾಯಿ ಯಜಮಾನನ ಕಾಟ ತಾಳಲಾರದೆ ಓಡಿ ಹೋದಾಗ ಯಜಮಾನ ಸುಲೇಖಾಳನ್ನು ಬೇರೆ ಕಡೆ ಕರೆದುಕೊಂಡು ಹೋಗಿ ಮಹಮ್ಮದ್ ಎಂಬುವನಿಗೆ ನಾಲ್ಕು ಒಂಟೆಗಳ ಬೆಲೆಗೆ ಮಾರಾಟ ಮಾಡಿ ತನ್ನ ಸಾಲ ತೀರಿಸಿಕೊಂಡ. ತನ್ನನ್ನು ಮಾರಾಟ ಮಾಡಲಾಗಿದೆ ಎಂದು ತಿಳಿದಾಗ ಜಾಣೆ ಸುಲೇಖಾ ಅಸ್ವಸ್ಥಳಾದಂತೆ ನಟಿಸಿದ್ದರಿಂದ ಅವಳನ್ನು ಚಿಕಿತ್ಸೆಗಾಗಿ ಮತ್ತೆ ರಾಜಧಾನಿಗೆ ಕರೆತಂದಾಗ ಅವಳು ಆಸ್ಪತ್ರೆಯಿಂದ ತಪ್ಪಿಸಿಕೊಂಡು ಮೊದಲಿನ ಯಜಮಾನನ ಹತ್ತಿರ ಹೋಗಿ ತನ್ನನ್ನು ಬಂಧಮುಕ್ತಗೊಳಿಸುವಂತೆ ಅಂಗಲಾಚಿದಳು. ಯಜಮಾನ ಒಪ್ಪದೆ ಇದ್ದಾಗ ಅವಳು ಬಂಧಮುಕ್ತ ಗುಲಾಮರ ಆಶ್ರಯ ಪಡೆದಳು. ಅವಳನ್ನು ಖರೀದಿಸಿದ್ದ ಮಹಮ್ಮದ್ ಪೋಲಿಸರಿಗೆ ದೂರು ಕೊಟ್ಟ. ಪೊಲೀಸರು ಅವಳನ್ನು ಬಂಧಿಸಿ ನ್ಯಾಯಾಲಯದಲ್ಲಿ ಹಾಜರುಪಡಿಸಿದಾಗ ಬಂಧಮುಕ್ತ ಗುಲಾಮನೊಬ್ಬ ಸುಲೇಖಾಳ ಪರವಾಗಿ ವಾದಿಸಿದ. ಆಗ ನ್ಯಾಯಾಧೀಶ ಗುಲಾಮಿಯೊಬ್ಬಳ ಪರವಾಗಿ ವಾದಿಸಿದ್ದಕ್ಕಾಗಿ ಅವನನ್ನು ಜೈಲಿಗೆ ತಳ್ಳಿ ಸುಲೇಖಾಳನ್ನು ಖರೀದಿಸಿದ್ದ ಮಹಮ್ಮದ್‌ನಿಗೆ ಮರಳಿಸಿದ. ಆಗ ಸಂತಸಗೊಂಡ ಮಹಮ್ಮದ್ ಅವಳನ್ನು ಮರುಭೂಮಿಯ ಶಿಬಿರಗಳಲ್ಲಿ ಕಾಮಕೇಳಿಗೆ ನೂಕಿದ! ನ್ಯಾಯಾಲಯದ ಈ ತೀರ್ಪು ನಿಮ್ಮನ್ನು ಅತ್ಯಂತ ಪ್ರಾಚೀನ ಕಾಲದ ಹಮ್ಮುರಾಬಿಯ ನ್ಯಾಯದ ಕಡೆಗೆ ಕರೆದೊಯ್ಯಬಹುದು. ಆದರೆ ಇದು ನಡೆದದ್ದು ನವನಾಗರಿಕತೆಯ ಆಧುನಿಕ ಕಾಲದ ೧೯೯೨ರಲ್ಲಿ! ಅಂದಾಗ ಗುಲಾಮಗಿರಿ ಇನ್ನೂ ಜೀವಂತವಾಗಿದೆ ಎಂಬುದಷ್ಟೇ ಅಲ್ಲ, ಕಾನೂನುಗಳೂ ಗುಲಾಮರ ವಿರುದ್ಧವಾಗಿಯೇ ಇವೆ ಎಂಬ ಕ್ರೌರ್ಯ ಕಣ್ಣಿಗೆ ಕಟ್ಟುತ್ತದೆ. ಇದು ಕೇವಲ ಸುಲೇಖಾ ಒಬ್ಬಳ ಕಥೆ ಅಲ್ಲ, ವಿಶ್ವದ ಅತ್ಯಂತ ಪ್ರಾಚೀನ ಮಾನವ ಹಕ್ಕು ಸಂಘಟನೆ ಆಗಿರುವ ಬ್ರಿಟನ್ನಿನ 'ಗುಲಾಮಗಿರಿ

ವಿರೋಧಿ ಅಂತರರಾಷ್ಟ್ರೀಯ ಸಂಸ್ಥೆ–ಆ್ಯಂಟಿ–ಸ್ಲೇವರಿ ಇಂಟರ್‌ನ್ಯಾಶನಲ್’ನ ಪ್ರಕಾರ ಸುಮಾರು ೧೦ ಕೋಟಿಗೂ ಅಧಿಕ ಜನರು ಗುಲಾಮರಾಗಿದ್ದಾರೆ! ಇದರಲ್ಲಿ ಬಾಲಕಾರ್ಮಿಕರೂ ಸೇರಿದ್ದಾರೆ. ನಾಲ್ಕು ಭೂಖಂಡಗಳಲ್ಲಿ ಅಸ್ತಿತ್ವದಲ್ಲಿರುವ ಜೀತದಾಳು, ಚಾಕರಿ, ಗುಲಾಮಗಿರಿಯಂತಹ ಪದ್ಧತಿಗಳ ಅಧ್ಯಯನ ನಡೆಸಿದ ಅಮೆರಿಕಾದ ‘ನ್ಯೂಸ್ ವೀಕ್’ ಪತ್ರಿಕೆಯ ಪ್ರಕಾರ “ಸ್ವಇಚ್ಛೆಯಿಲ್ಲದೆ ಬಲಾತ್ಕಾರದಿಂದ ಇನ್ನೊಬ್ಬರ ಜೀತದಾಳಾಗಿ ದುಡಿಯುವವರ ಸಂಖ್ಯೆ ಮಿಲಿಯಗಟ್ಟಲೆ ಇದೆ.”

೧೯ನೇ ಶತಮಾನದಲ್ಲೇ ಗುಲಾಮಗಿರಿ ಕೊನೆಗೊಂಡಿತೆಂದು ಎಲ್ಲರೂ ಹೇಳುತ್ತಾರೆ. ಆದರೆ ಅದು ೨೧ನೇ ಶತಮಾನದಲ್ಲೂ ಜೀವಂತವಾಗಿದ್ದು, ನಮ್ಮ ಸುತ್ತಮುತ್ತ ಆಚರಣೆಯಲ್ಲಿದ್ದರೂ ನಮ್ಮ ಕಣ್ಣಿಗೆ ಕಾಣುವುದಿಲ್ಲ. ಯಾಕೆಂದರೆ ಈ ಅವಸರದ ಯಾಂತ್ರಿಕ ಬದುಕಿನಲ್ಲಿ ತೆರೆಯ ಮರೆಯಲ್ಲಿ ಅನಾಗರಿಕ ಪದ್ಧತಿಗಳೆಲ್ಲವೂ ನಡೆಯುತ್ತಲಿವೆ.

ಗುಲಾಮಗಿರಿ ಅತ್ಯಂತ ಹೇಯಪದ್ಧತಿ. ಅಮಾನುಷ ವರ್ತನೆ. ಮಾನವ ಹಕ್ಕುಗಳಲ್ಲಿ ಅವರಿಗೆ ಅತ್ಯಂತ ಮೂಲಭೂತವಾದ ಹಕ್ಕುಗಳೂ ಇಲ್ಲ. ಅವರು ಜೀವಂತ ವ್ಯಕ್ತಿಗಳೇ ಅಲ್ಲ, ಸರಕುಗಳು, ಅಷ್ಟೆ. ಅವರನ್ನು ಮಾರಾಟ ಮಾಡಬಹುದು. ಕೊಲ್ಲಬಹುದು, ಮನಬಂದಂತೆ ದುಡಿಸಿಕೊಳ್ಳಬಹುದು. ಅವರಿಗೆ ಕಾಯಿಲೆಗಳಿಲ್ಲ. ಚಿಕಿತ್ಸೆಗಳಿಲ್ಲ. ಅವರ ಬದುಕಿನ ಯಾವುದೇ ನಿರ್ಧಾರಗಳನ್ನು ಮಾಲಕನೇ ತೆಗೆದುಕೊಳ್ಳುತ್ತಾನೆ. ಮಾಲಕ ಗುಲಾಮರನ್ನು ಹೊಡೆಯುವುದಂತೂ ತುಂಬ ಸಾಮಾನ್ಯ. ಗುಲಾಮನ ಹೆಂಡತಿ ಹಗಲೆಲ್ಲ ಮಾಲಕನ ಹೊಲದಲ್ಲಿ ದುಡಿದು ರಾತ್ರಿ ಮಾಲಕನ ಹಾಸಿಗೆ ಸೇರಬೇಕು. ಗುಲಾಮಿ ಹೆಣ್ಣುಮಕ್ಕಳ ಮೇಲೆ ಮಾಲಕ, ಇಲ್ಲವೆ ಮಾಲಕನ ಮಕ್ಕಳಿಂದ ನಡೆಯುವ ಅತ್ಯಾಚಾರಗಳು ಅತ್ಯಾಚಾರಗಳೇ ಅಲ್ಲ. ಈಗ ಆಗಿನ ಗುಲಾಮಗಿರಿ ಕಡಿಮೆ ಆಗುತ್ತಿದ್ದು ಆಧುನಿಕ ಗುಲಾಮಗಿರಿ ತಲೆ ಎತ್ತುತ್ತಿದೆ. ಅದೇ ಮಾನವರ ಮಾರಾಟ. ಮುಖ್ಯವಾಗಿ ಮಹಿಳೆಯರನ್ನು ವೇಶ್ಯೆಯರನ್ನಾಗಿಸುವುದು ಮತ್ತು ಮಕ್ಕಳನ್ನು ವ್ಯಭಿಚಾರಕ್ಕೆ ತಳ್ಳುವುದು ಲಾಭದಾಯಕ ವ್ಯಾಪಾರವಾಗಿದೆ. ಇದು ಲಾಭದಾಯಕವಾಗಿ ಬೆಳೆಯುತ್ತಿರುವ ಅಪರಾಧ ಉದ್ಯಮವಾಗಿದ್ದು, ಅದೀಗ ಮಾದಕ ವಸ್ತುವಿನ ಮಾರಾಟದ ದಂಧೆಯನ್ನು ಮೀರಿ ಬೆಳೆಯುತ್ತಿದೆ.

ಮಾನವನ ಇತಿಹಾಸದುದ್ದಕ್ಕೂ ಗುಲಾಮಗಿರಿ ಒಂದಲ್ಲ ಒಂದು ರೂಪದಲ್ಲಿ ಅಸ್ತಿತ್ವದಲ್ಲಿತ್ತು ಎಂಬುದು ಸೂರ್ಯನಷ್ಟೇ ಸತ್ಯ. ಗುಲಾಮಗಿರಿಯ ಇತಿಹಾಸ ಬಹುಪ್ರಾಚೀನವಾದುದು. ಕ್ರಿ. ಪೂ. ೮೦೦೦ರಲ್ಲಿ ಈಜಿಪ್ತ್‌ನಲ್ಲಿ ‘ಲಿಬ್ಯನ್’ ಜನರು ‘ಸ್ಯಾನ್’ನಂತಹ ಬುಡಕಟ್ಟಿನವರನ್ನು ಗುಲಾಮರನ್ನಾಗಿ ಇರಿಸಿಕೊಂಡಿದ್ದರು. ಗುಲಾಮಗಿರಿಯ ನಿಜವಾದ ಉಗಮವು ೧೧೦೦೦ ವರ್ಷಗಳ ಹಿಂದೆ ನವಶಿಲಾಯುಗದ ಆರಂಭದಲ್ಲಿ ಕಂಡುಕೊಂಡ ಕೃಷಿಯ ನಂತರವೇ ಉದಯಿಸಿತು. ಗುಲಾಮಗಿರಿಯ ಅತ್ಯಂತ ಹಳೆಯ ದಾಖಲೆಗಳೆಂದರೆ ಹಮ್ಮುರಾಬಿಯ ಕಾನೂನು –“ಗುಲಾಮನಿಗೆ ತಪ್ಪಿಸಿಕೊಳ್ಳಲು ಸಹಾಯ ಮಾಡಿದವರಿಗೆ ಮತ್ತು ಪರಾರಿಯಾದ ಗುಲಾಮರಿಗೆ ಆಸರೆ ನೀಡಿದವರಿಗೆ ಮರಣದಂಡನೆಯನ್ನು ವಿಧಿಸಲಾಗುವುದು.” ಅಂದರೆ ಅಂದು ಗುಲಾಮಗಿರಿಗೆ ಎಷ್ಟೊಂದು ಮಹತ್ವವಿತ್ತು ಎಂಬುದರ ಪ್ರತೀಕವಿದು. ಅತ್ಯಂತ ಹಳೆಯ ನಾಗರಿಕತೆಯಾದ ‘ಸುಮರ್’ನಲ್ಲಿ ಇದರ ಬೇರುಗಳು ಕಾಣಸಿಗುತ್ತವೆ. ಅಲ್ಲದೆ ಪ್ರಾಚೀನ ಭಾರತ, ಈಜಿಪ್ತ್, ಚೀನಾ, ಗ್ರೀಸ್, ಮತ್ತು ನಂತರದ ಅಮೆರಿಕಾದಲ್ಲೂ ಇದು ಜಾರಿಯಲ್ಲಿತ್ತು. ಪ್ರಾಚೀನ ಗ್ರೀಸ್‌ನ ಕ್ಲಾಸಿಕ್ ಅಥೇನಿಯನ್ನರು ಹೆಚ್ಚು ಗುಲಾಮರನ್ನು ಹೊಂದಿದ್ದರು. ಅಲ್ಲಿ ಪ್ರತಿ ಮನೆಗೆ ೩–೪ ಗುಲಾಮರಿದ್ದು, ಅಲ್ಲಿ ಕ್ರಿ. ಪೂ. ೫–೬ನೇ ಶತಮಾನದಲ್ಲಿ ೮೦,೦೦೦ ಗುಲಾಮರಿದ್ದರು. ಇತಿಹಾಸತಜ್ಞರ ಪ್ರಕಾರ ಅರಬ್ ಗುಲಾಮರ ಮಾರಾಟವು ೧೦೦೦೦ ವರ್ಷಗಳಿಗೂ ಅಧಿಕ ಕಾಲ ಜಾರಿಯಲ್ಲಿತ್ತು. ೧೯೬೦ರ ಆರಂಭದಲ್ಲಿ ಸೌದಿ ಅರೇಬಿಯಾದ ಗುಲಾಮರ ಸಂಖ್ಯೆಯು ಮೂರು ಲಕ್ಷದಷ್ಟಿತ್ತು.

ಗುಲಾಮಗಿರಿಯನ್ನು ನಿಷೇಧಿಸಿದ ಮೊದಲ ಲಿಖಿತ ದಾಖಲೆಯ ಕೀರ್ತಿ ಈಜಿಪ್ತ್‌ನ ಇತಿಹಾಸಕ್ಕೆ



ಸಲ್ಲುತ್ತದೆ. ನಂತರ ಯಹೂದಿ ಕಾನೂನುಗಳು ಇಸ್ರೇಲ್ ಭೂಪ್ರದೇಶದ ಹೊರಗೆ ಗುಲಾಮರ ಮಾರಾಟವನ್ನು ನಿರ್ಬಂಧಿಸಿತು. ಅಮೆರಿಕನ್ನರ ಸ್ಪ್ಯಾನಿಷ್ ವಸಾಹತು ನೆಲೆಯು ಸ್ಥಳೀಯ ಅಮೆರಿಕನ್ನರನ್ನು ಗುಲಾಮರನ್ನಾಗಿಸಿಕೊಳ್ಳುವುದನ್ನು ಲಾಸ್ ವಿರೋಧಿಸಿದ. ಹಾಗೆಯೇ ಅಮೆರಿಕಾದಲ್ಲಿಯ ಆಫ್ರಿಕನ್ನರ ಗುಲಾಮಗಿರಿಯನ್ನು ಅವನು ವಿರೋಧಿಸಿ ಪ್ರತಿಭಟಿಸಿದ್ದು ಜಗತ್ತಿನ ಗಮನ ಸೆಳೆಯಿತು. ೧೬೮೮ರಲ್ಲಿ ಆಫ್ರಿಕನ್ನರನ್ನು ಗುಲಾಮರನ್ನಾಗಿ ಮಾಡಿಕೊಳ್ಳುವುದನ್ನು ಜರ್ಮನಿ ಹಾಗೂ ಹಾಲೆಂಡ್‌ನಲ್ಲಿ ವಿರೋಧಿಸಲಾಯಿತು. ವಿಶ್ವದಾದ್ಯಂತ ಗುಲಾಮಗಿರಿಯನ್ನು ನಿರ್ಮೂಲನೆ ಮಾಡುವ ಒಂದು ಮಹತ್ವದ ಮೈಲಿಗಲ್ಲು ೧೭೭೨ರಲ್ಲಿ ಇಂಗ್ಲೆಂಡ್‌ನ ಬ್ರಿಟಿಷ್ ನ್ಯಾಯಾಧೀಶ ಲಾರ್ಡ್ ಮ್ಯಾನಿಸಿಲ್ಡ್‌ರಿಂದ ನಡೆಯಿತು. ಅವರು ಸಾಮರ್ಸೆಟ್ ಮೊಕದ್ದಮೆಯಲ್ಲಿ ತೀರ್ಪು ನೀಡುತ್ತ ಗುಲಾಮಗಿರಿಯನ್ನು ಇಂಗ್ಲೆಂಡಿನಾದ್ಯಂತ ನಿಷೇಧಿಸಬೇಕೆಂದು ಅಭಿಪ್ರಾಯಪಟ್ಟರು. ಅಲ್ಲಿಂದ ಆರಂಭವಾದ ಜಾಗತಿಕ ಗುಲಾಮಗಿರಿ ವಿರುದ್ಧದ ಹೋರಾಟ ಈಗಲೂ ಮುಂದುವರಿದಿದೆ. ಜಗತ್ತಿನ ವಿವಿಧ ದೇಶಗಳಲ್ಲಿ, ರಾಜ್ಯ, ಜಿಲ್ಲೆಗಳಲ್ಲೂ ಗುಲಾಮಗಿರಿ ವಿರೋಧಿ ಸಂಘಟನೆಗಳಿವೆ. ಅಮೆರಿಕನ್ ಆ್ಯಂಟಿಸ್ಲೇವರಿ ಗ್ರೂಪ್, ಆ್ಯಂಟಿಸ್ಲೇವರಿ ಇಂಟರ್‌ನ್ಯಾಶನಲ್, ಫ್ರೀ ದಿ ಸ್ಲೇವ್ಸ್, ಆ್ಯಂಟಿಸ್ಲೇವರಿ ಸೊಸೈಟಿ,... ಇನ್ನೂ ಅನೇಕ ಸಂಸ್ಥೆಗಳು ವಿಶ್ವದಾದ್ಯಂತ ಗುಲಾಮಗಿರಿ ನಿರ್ಮೂಲನೆಗಾಗಿ ಹೋರಾಡುತ್ತಲಿವೆ. ಇಂಥವುಗಳಲ್ಲಿ ‘ಕರ್ನಾಟಕ ಜೀತ ವಿಮುಕ್ತ’ (ಕಜೀವಿ) ಸಂಸ್ಥೆಯೂ ಒಂದು.

ಸೌದಿ ಅರೇಬಿಯದಲ್ಲಿ ೧೯೬೨ರಲ್ಲಿ ಗುಲಾಮಗಿರಿಯನ್ನು ನಿಷೇಧಿಸಲಾಯಿತು. ಪಶ್ಚಿಮ ಯುರೋಪಿನಲ್ಲಿ ಮಧ್ಯಯುಗದ ನಂತರ ಗುಲಾಮಗಿರಿಯು ಬಹುತೇಕ ಕಣ್ಮರೆಯಾಯಿತು. ೧೧೦೨ರಲ್ಲಿ ಇಂಗ್ಲೆಂಡ್ ಗುಲಾಮರ ವ್ಯಾಪಾರವನ್ನು ಕಾನೂನುಬಾಹಿರಗೊಳಿಸಿತು. ಪೋಲೆಂಡ್‌ನಲ್ಲಿ ೧೫ನೇ ಶತಮಾನದಲ್ಲಿ ಗುಲಾಮಗಿರಿ ನಿಷೇಧಿಸಲ್ಪಟ್ಟಿತು. ೧೫೮೮ರಲ್ಲಿ ಗುಲಾಮಗಿರಿಯನ್ನು ಲಿಥುವೇನಿಯಾ ನಿಷೇಧಿಸಿತು. ಅಲ್ಲಿಯ ಗುಲಾಮರೆಲ್ಲರೂ ಎರಡನೇ ಮಟ್ಟದ ಜೀತಗಾರರಾದರು. ಗುಲಾಮಗಿರಿಯು ೧೭೨೩ರವರೆಗೂ ರಷ್ಯಾದಲ್ಲಿ ಪ್ರಮುಖ ಪದ್ಧತಿ ಆಗಿತ್ತು. ಮನೆಗೆಲಸದ ಗುಲಾಮರನ್ನು ಅರಸ ‘ಪೀಟರ್ ದಿ ಗ್ರೇಟ್’ ಮನೆಗೆಲಸದ ಜೀತದಾಳುಗಳನ್ನಾಗಿ ಪರಿವರ್ತಿಸಿದ. ಕೃಷಿ ಕೆಲಸ ಮಾಡುತ್ತಿದ್ದ ಗುಲಾಮರನ್ನು ವಿಧ್ಯುಕ್ತವಾಗಿ ಜೀತಗಾರರನ್ನಾಗಿಸಲಾಯಿತು. ೧೮೬೧ರಲ್ಲಿ ಎರಡನೇ ಅಲೆಕ್ಸಾಂಡರ್ ೨೩ ದಶಲಕ್ಷಕ್ಕೂ ಅಧಿಕ ಜೀತಗಾರರನ್ನು ಬಂಧಮುಕ್ತಗೊಳಿಸಿದ. ಜಪಾನ್ ೧೬ನೇ ಶತಮಾನದ ಆರಂಭದಲ್ಲಿ, ಚೀನಾ ೧೯೧೦ರಲ್ಲಿ ರದ್ದುಪಡಿಸಿತು. ನಾಗರಿಕತೆ ಬೆಳೆದಂತೆ ಬಹುತೇಕ ಎಲ್ಲ ದೇಶಗಳು ಗುಲಾಮಗಿರಿಯನ್ನು ಸೈದ್ಧಾಂತಿಕವಾಗಿ ರದ್ದುಪಡಿಸುವ ಕಾನೂನುಗಳನ್ನು ಜಾರಿಮಾಡಿದ್ದರೂ, ಅಂಟಾರ್ಟಿಕಾವನ್ನು ಹೊರತುಪಡಿಸಿದಂತೆ, ವಿಶ್ವದ ಎಲ್ಲಾ ಖಂಡಗಳಲ್ಲೂ ಇದು ಇನ್ನೂ ಜೀವಂತವಾಗಿದೆ. ಶತಮಾನಗಳಿಂದ

**ಪ್ರಪಾತಕ್ಕೆ**

ಸತ್ಯ–ಅಸತ್ಯಗಳೆರಡೂ
ಒಂದೇ ಮೂಲದಿಂದ
ಹೊರಟರೂ
ಅಸತ್ಯ ಮಾತ್ರ
ನಮ್ಮನ್ನು ಪ್ರಪಾತಕ್ಕೆ
ನೂಕಬಲ್ಲುದು.

**ಎಂ. ಜಿ. ದೇಶಪಾಂಡೆ**
ಬೀದರ್

ನಡೆದುಬಂದ ಈ ಹೀನಾಯ ಪದ್ಧತಿಯನ್ನು ಸಂಪೂರ್ಣವಾಗಿ ರದ್ದುಪಡಿಸಲು ವಿಶ್ವದ ಎಲ್ಲ ರಾಷ್ಟ್ರಗಳು ಪ್ರಯತ್ನಿಸುತ್ತ ಬರುತ್ತಿದ್ದರೂ ಅದು ಇನ್ನೂ ಸಾಧ್ಯವಾಗಿಲ್ಲ. ಇಂದಿನ ೨೧ನೇ ಶತಮಾನದಲ್ಲೂ ಇದು ತನ್ನ ಬೇರುಗಳನ್ನು ಉಳಿಸಿಕೊಂಡಿರುವುದು ನಿಜಕ್ಕೂ ದುರದೃಷ್ಟಕರ.

ಜಗತ್ತಿನ ಬಹುತೇಕ ಎಲ್ಲ ರಾಷ್ಟ್ರಗಳು ಗುಲಾಮಗಿರಿಯನ್ನು ನಿಷೇಧಿಸಿ ಅರ್ಧ ಶತಮಾನ ಕಳೆದುಹೋಗಿದ್ದರೂ ಈ ಅನಿಷ್ಟ ಪದ್ಧತಿ ಒಂದಿಲ್ಲೊಂದು ರೂಪದಲ್ಲಿ ಈಗಲೂ ಜಾರಿಯಲ್ಲಿದೆ ಎಂದು ಹೇಳಲು ನವನಾಗರಿಕತೆಯ ಯುಗದಲ್ಲಿರುವ ನಮಗೆ ನಾಚಿಕೆ ಆಗಬೇಕು. ಸಮೀಕ್ಷೆಗಳ ಹಾಗೂ ಗುಲಾಮಗಿರಿ ವಿರುದ್ಧ ಹೋರಾಡುತ್ತಿರುವ ಸಂಸ್ಥೆಗಳ ಪ್ರಕಾರ ಗುಲಾಮಗಿರಿ ದಿನಗಳೆದಂತೆ ಹೆಚ್ಚುತ್ತಿದೆ! ಇದಕ್ಕೆ ಪ್ರಮುಖ ಕಾರಣ ಅನಕ್ಷರತೆ, ಬಡತನ, ಹೆಚ್ಚುತ್ತಿರುವ ಜನಸಂಖ್ಯೆ ಮುಂತಾದವು. ಒಂದು ದೇಶದ ಆರ್ಥಿಕ ಪರಿಸ್ಥಿತಿ ಯಾವ ಮಟ್ಟದ್ದು ಎಂಬುದರ ಮೇಲೆ ಅಲ್ಲಿ ಗುಲಾಮಗಿರಿ ಇದೆಯೋ ಇಲ್ಲವೋ ಎಂಬುದನ್ನು ನಿರ್ಧರಿಸಬಹುದು ಎಂದು ಹೇಳಿದರೂ ಅದೇ ಅಂತಿಮ ಸತ್ಯವಲ್ಲ. ಯಾಕೆಂದರೆ ಮುಂದುವರಿದ ದೇಶಗಳಾದ ಅಮೆರಿಕಾ, ರಷ್ಯಾ, ಚೀನಾಗಳಲ್ಲೂ ಗುಲಾಮಗಿರಿ ಇದೆ. ಅವು ಬೆಳಕಿಗೆ ಬರುವುದೇ ಇಲ್ಲ. ಮಾಧ್ಯಮಗಳೂ ಇವುಗಳ ಮೇಲೆ ಬೆಳಕು ಚೆಲ್ಲುವುದಿಲ್ಲ. ಯುರೋಪ್ ಮತ್ತು ಪೂರ್ವದ ಹಲವಾರು ರಾಷ್ಟ್ರಗಳಲ್ಲಿ ಮಾನವ ಕಳ್ಳ ಸಾಗಾಣಿಕೆ ನಿರಂತರವಾಗಿದ್ದು ಅವರು ಅಂತಿಮವಾಗಿ ಗುಲಾಮರಾಗಿ ಅಹೋರಾತ್ರಿ ದುಡಿಯುತ್ತಾರೆ. ಕಳ್ಳಸಾಗಾಣಿಕೆ ಆದ ಯುವತಿಯರು – ಮಹಿಳೆಯರನ್ನು ವೇಶ್ಯಾವೃತ್ತಿಗೆ ದೂಡಲಾಗುತ್ತದೆ. ಅನೇಕ ದೇಶಗಳಲ್ಲಿ ವೇಶ್ಯಾವಾಟಿಕೆ ಅತ್ಯಂತ ಲಾಭದಾಯಕ ಉದ್ಯಮ! ಬ್ರೆಝಿಲ್ ಮತ್ತು ಪಶ್ಚಿಮ ಆಫ್ರಿಕಾದ ಪ್ಲ್ಯಾಂಟೇಶನ್‌ಗಳಲ್ಲಿ ದುಡಿಯುತ್ತಿರುವ ಗುಲಾಮರನ್ನು ಇಂದಿಗೂ ಕಾಣಬಹುದು.

ಭಾರತದ ವೈದಿಕ ಸಾಹಿತ್ಯದಲ್ಲಿ ಗುಲಾಮರ ಉಲ್ಲೇಖವಿದೆ. 'ದಾಸ' ಎಂಬ ಪದವು ಋಗ್ವೇದದಲ್ಲಿದ್ದು, ಅದು ಗುಲಾಮರನ್ನು ಕುರಿತದ್ದು ಅನ್ನಲಾಗಿದೆ. ಕ್ರಿ. ಪೂ. ೪ನೇ ಶತಮಾನದಲ್ಲಿ. ಭಾರತದಲ್ಲಿ ಗುಲಾಮಗಿರಿ ಪದ್ಧತಿ ಇತ್ತೆಂದು ಕೆಲವು ದಾಖಲೆಗಳು ತಿಳಿಸುತ್ತವೆ. ಆಂಗ್ಲರ ಆಳ್ವಿಕೆಯಲ್ಲಿ ೧೮೩೩ರಲ್ಲಿ ಗುಲಾಮಗಿರಿಯನ್ನು ರದ್ದುಗೊಳಿಸುವ ಕಾನೂನು ಜಾರಿಗೆ ಬಂದಿತು. ಈಗಲೂ ಭಾರತದ ಎಲ್ಲ ಹಳ್ಳಿಗಳಲ್ಲಿ ಗುಲಾಮಗಿರಿಗೆ ಹೋಲಿಸಬಹುದಾದ ಜೀತಪದ್ಧತಿ ಜಾರಿಯಲ್ಲಿದೆ. ಒಂದು ಅಂದಾಜಿನ ಪ್ರಕಾರ ೧೮೪೧ರಲ್ಲಿ ದೇಶದಲ್ಲಿ ೯ ದಶಲಕ್ಷ ಜೀತದಾಳುಗಳಿದ್ದರು. ಸ್ವತಂತ್ರ ಭಾರತವೂ ಈ ಅಮಾನವೀಯ ಜೀತಪದ್ಧತಿಯನ್ನು ಕಾಯ್ದೆಬದ್ಧವಾಗಿ ನಿಷೇಧಿಸಿದೆ. ಆದರೂ ಇದು ದೇಶದ ಹಲವಾರು ಕಡೆ ಚಾಲ್ತಿಯಲ್ಲಿ ಇದೆ. ಉತ್ತರ ಪ್ರದೇಶದ ಬಹುತೇಕ ಎಲ್ಲ ಹಳ್ಳಿಗಳಲ್ಲಿ ಗುಲಾಮಗಿರಿ ಈಗಲೂ ಚಾಲ್ತಿಯಲ್ಲಿದೆ. 'ಜಮಾದಾರ್' ಎಂದು ಕರೆಯಲ್ಪಡುವ ಕಾರ್ಮಿಕ ಏಜೆಂಟರು ಭಾರತದಲ್ಲಿ ಶತಶತಮಾನಗಳಿಂದ ಜೀತಪದ್ಧತಿಯನ್ನು ಜೀವಂತವಾಗಿರಿಸಿಕೊಂಡು ಬರುತ್ತಿದ್ದಾರೆ. ದೀನದಲಿತರಿಗೆ, ಭೂಹೀನರಿಗೆ, ತೀರಾ ಬಡವರಿಗೆ, ಆದಿವಾಸಿಗಳಿಗೆ ಹೆಚ್ಚಿನ ಸಂಬಳದ ಕೆಲಸ ಕೊಡಿಸುವುದಾಗಿ ತಮ್ಮ ಜೊತೆ ಕರೆದುಕೊಂಡು ಹೋಗುತ್ತಾರೆ. ಮಕ್ಕಳನ್ನು ಕಳಿಸುವ ಕುಟುಂಬಗಳಿಗೆ ಮುಂಗಡವಾಗಿ ಒಂದಿಷ್ಟು ದುಡ್ಡು ಕೊಡುತ್ತಾರೆ. ಅವರು ಕರೆದುಕೊಂಡು ಹೋದಲ್ಲಿ ಕೆಲಸ ಮಾಡಲು ಬೇಕಾಗುವ ಉಪಕರಣಗಳನ್ನು ಹಾಗೂ ಒಂದಿಷ್ಟು ದಿನದ ಆಹಾರಕ್ಕಾಗಿ ಮಾಲಕನಿಂದ ಸಾಲ ಪಡೆಯುತ್ತಾರೆ. ಹೀಗೆ ಅವರು ಸಾಲದ ಬೋನಿನೊಳಗೆ ಬೀಳುತ್ತಾರೆ. ಅನಕ್ಷರಸ್ಥ ಕೂಲಿಗಾರರಿಗೆ ಗೊತ್ತಾಗದ ಹಾಗೆ ಮಾಲೀಕರು ಅವರು ತೆಗೆದುಕೊಂಡ ಸಾಲದ ಹಣವನ್ನು ಎರಡು ಅಥವಾ ಮೂರು ಪಟ್ಟು ಹೆಚ್ಚು ಮಾಡಿ ಬರೆದಿಡುತ್ತಾರೆ. ಕೂಲಿಗಾರರು ಹಿಂದಿರುಗಿ ತಮ್ಮ ಊರಿಗೆ ಹೋಗುತ್ತೇವೆ ಅಂದಾಗ ಅವರಿಗೆ ಸಾಲದ ಸುಳ್ಳು ದಾಖಲೆ ತೋರಿಸಿ, "ಸಾಲದ ಹಣವನ್ನು ಬಡ್ಡಿ ಸಮೇತ ಕಟ್ಟಿ ಹೋಗು" ಎಂದು ಹೆದರಿಸುತ್ತಾರೆ. ಆ ಹಣ ಅವರಿಂದ ಕಟ್ಟಲಿಕ್ಕೆ ಸಾಧ್ಯವೇ ಇಲ್ಲ. ಹಾಗಾಗಿ ಅವರು ಅನಿವಾರ್ಯವಾಗಿ ಬಾಯಿ ಮುಚ್ಚಿಕೊಂಡು ದುಡಿಯುತ್ತಾರೆ. ಹಟ ಮಾಡಿದವರನ್ನು ಗೂಂಡಾಗಳಿಂದ ಹೊಡೆಸುತ್ತಾರೆ. 'ಜೀತದಾಳು ವಿಮೋಚನಾ ರಂಗ' ಎಂಬ ಸಂಸ್ಥೆಯು ೮ ತಲೆಮಾರುಗಳಷ್ಟು ಹಳೆಯದಾದ ಸಾಲವನ್ನು ಹಿಂದಿರುಗಿಸಲು ಜೀತದಾಳುಗಳಾಗಿ ದುಡಿಯುತ್ತಿರುವವರನ್ನು ಪತ್ತೆ ಮಾಡಿದೆ! ಈ ಸಂಸ್ಥೆಯ ಪ್ರಕಾರ ೫೦ ಲಕ್ಷ ವಯಸ್ಕರು ಮತ್ತು ಒಂದು ಕೋಟಿ ಮಕ್ಕಳು ಭವ್ಯ(?) ಭಾರತದಲ್ಲಿ ಯಾರೋ ಎಂದೋ ಮಾಡಿದ ಸಾಲವನ್ನು ತೀರಿಸಲು ಜೀತದಾಳುಗಳಾಗಿ ದುಡಿಯುತ್ತಿದ್ದಾರೆ. ಇವರು 'ಋಣ ಗುಲಾಮರು.' ಜೀತದಾಳು ವಿಮೋಚನಾ ರಂಗ ಹೇಳುತ್ತದೆ – "ಸದ್ರಮ್ ಮತ್ತವನ ಹೆಂಡತಿ ದೇವಕುಮಾರಿ ಭಾರತದ ರಾಜಧಾನಿ ನವದೆಹಲಿಯ ಹೊರವಲಯದಲ್ಲಿ ಕಳೆದ ಎಂಟು ವರ್ಷಗಳಿಂದ ಕಲ್ಲು ಗಣಿಯೊಂದರಲ್ಲಿ ದುಡಿಯುತ್ತಿದ್ದಾರೆ. ಅವರು ಮಾಲೀಕನಿಂದ ಪಡೆದ ಸಾಲ ೧೧೦೦೦ ರೂ.ಗಳು. ಅದು ಈಗ ೨೨೦೦ ಆಗಿದೆ. ಅವರು ಒಮ್ಮೆ ಸಾಲ ತೀರಿಸದೆ ತಮ್ಮೂರಿಗೆ ಹೋಗುವ ಆಶೆ ವ್ಯಕ್ತಪಡಿಸಿದಾಗ, ಮಾಲೀಕ ಅವರನ್ನು ಗೂಂಡಾಗಳಿಂದ ಥಳಿಸಿದ. ಅವರೀಗ ಅನಿವಾರ್ಯವಾಗಿ ಅಲ್ಲೇ ದುಡಿಯುತ್ತಿದ್ದಾರೆ. ಅವರ ದುಡಿಮೆಗೆ ಸಿಗುವ ಬಹುಪಾಲು ಹಣ ಅವರ ಹೊಟ್ಟೆ ತುಂಬಿಸಿಕೊಳ್ಳಲಿಕ್ಕೇ ಸಾಲುವುದಿಲ್ಲ. ಅಂದಾಗ ಮಾಲಕನ ಸಾಲ ತೀರುವುದೆಂದು? ಅವರು ಜೀತಮುಕ್ತವಾಗುವುದೆಂದು?"

ಜಗತ್ತಿನಲ್ಲಿ ಗುಲಾಮಗಿರಿ ಒಂದಿಲ್ಲೊಂದು ರೂಪದಲ್ಲಿ ಅಸ್ತಿತ್ವದಲ್ಲಿದೆ. ಅರಬ್ ಜಗತ್ತಿನ ಹಲವು ಭಾಗಗಳಲ್ಲಿ ಈಗ "ಅತಿಥಿ ಕೆಲಸಗಾರರು" (ಗೆಸ್ಟ್ ವರ್ಕರ್ಸ್) ಎಂಬ ಹೆಸರಿನ ಕೆಲಸಗಾರರಿದ್ದು, ಅವರು ಆಧುನಿಕ ಹೆಸರನ್ನು ಹೊಂದಿರುವ ಗುಲಾಮರೇ ಆಗಿದ್ದಾರೆ. ಕೊಲ್ಲಿ ರಾಷ್ಟ್ರಗಳು, ಯುರೋಪ್, ಆಫ್ರಿಕ, ಪಾಕಿಸ್ತಾನ, ಭಾರತದಂತಹ ದೇಶಗಳಿಂದ ಒಳ್ಳೆಯ ಕೆಲಸ ಕೊಡಿಸುವುದಾಗಿ ಜನರನ್ನು ಕರೆದುಕೊಂಡು ಹೋಗಿ ಅಲ್ಲಿ ಗುಲಾಮಗಿರಿಗೆ ತಳ್ಳುತ್ತಾರೆ. ಸುಳ್ಳು ಮದುವೆ ಆಗಿ ಕರೆದುಕೊಂಡು ಹೋದ ಯುವತಿಯರನ್ನು ಮನೆಗೆಲಸಕ್ಕೋ, ವೇಶ್ಯಾವೃತ್ತಿಗೋ ತಳ್ಳುತ್ತಾರೆ. ಮಕ್ಕಳನ್ನು ಸರಕುಗಳಂತೆ ನಡೆಸಿಕೊಳ್ಳುತ್ತಾರೆ. ಇವರ ಅತಿಥಿ ಕೆಲಸಕ್ಕೆ ಸಂಬಳವನ್ನೂ ಕೊಡದೆ, ಸರಿಯಾಗಿ ಊಟವನ್ನೂ ಕೊಡದೆ ಕಾಡಿಸುತ್ತಾರೆ. ಓಡಿ ಹೋಗದಂತೆ ಅವರನ್ನು ಕೆಲಸ ಮಾಡುವ ಮನೆಯಲ್ಲೇ ಬಂಧನದಲ್ಲಿ ಇಡಲಾಗುತ್ತದೆ. ಇಲ್ಲದಿದ್ದರೆ ಅವರ ಪಾಸ್‌ಪೋರ್ಟ್‌ಗಳನ್ನು ಕಿತ್ತುಕೊಳ್ಳುತ್ತಾರೆ. ಯಜಮಾನ ಹೇಳಿದಂತೆ ಅವರು ಕೇಳಲೇಬೇಕು. ಇಲ್ಲದಿದ್ದರೆ ಅವರನ್ನು ಥಳಿಸಲಾಗುತ್ತದೆ. ಎಲೆಕ್ಟ್ರಿಕ್ ವೈರ್‌ನಿಂದ ಹೊಡೆಯುವುದು, ಕಾದ ಕಬ್ಬಿಣದಿಂದ ಕೈಕಾಲುಗಳಿಗೆ ಬರೆ ನೀಡುವುದು, ಇಂತಹ ಎಷ್ಟೋ ಪ್ರಕರಣಗಳು ಬೆಳಕಿಗೆ ಬಂದಿವೆ. ಇಂಗ್ಲೆಂಡ್ ಒಂದರಲ್ಲೇ ಇಂತಹ ೯೩ ಪ್ರಕರಣಗಳು ಹೊರಬಂದಿವೆ. ಒಂದು ಅಧ್ಯಯನದ ಪ್ರಕಾರ ೫ ಲಕ್ಷ ಮಂದಿ ಅತಿಥಿ ಕೆಲಸಗಾರರಿದ್ದಾರೆ. ಯಜಮಾನರ



ಕಾಟ ತಾಳಲಾರದೆ ಹೇಗೋ ತಪ್ಪಿಸಿಕೊಂಡು ಬಂದ ಫಿಲಿಪೈನ್ಸ್‌ನ ಮಹಿಳೆಯೊಬ್ಬಳು ಹೇಳುತ್ತಾಳೆ: – "ಇಡೀ ಕುವೈತ್ ದೇಶವೇ ನಮ್ಮಂಥವರ ಪಾಲಿಗೆ ಸೆರೆಮನೆ ಆಗಿದೆ. ನೌಕರಿಗೆ ಸೇರುವ ಮುನ್ನ ಅತಿಥಿ ಕೆಲಸಗಾರರಿಗೆ ನೀಡುವ ನೌಕರಿಯ ನಿಬಂಧನೆಗಳು ಎಷ್ಟೊಂದು ಆಕರ್ಷಕವಾಗಿರುತ್ತವೆ ಎಂದರೆ ಅಲ್ಲಿ ಗುಲಾಮಗಿರಿಯ ಅಂಶ ಕಿಂಚಿತ್ತೂ ಕಂಡುಬರುವುದಿಲ್ಲ. ಹಾಗೆಯೇ ಸಾಂಪ್ರದಾಯಿಕ ವಿವಾಹ ಪದ್ಧತಿಗಳೂ ಕೂಡ ಗುಲಾಮಗಿರಿಯನ್ನು ಮರೆಮಾಡಿ ಅದಕ್ಕೂ ವಿವಾಹಬಂಧನದ ಮುಖವಾಡ ತೊಡಿಸುತ್ತವೆ. ಆದರೆ ಈ ಮುಖವಾಡಗಳಡಿ ಅಲ್ಲಿ ನಡೆಯುತ್ತಿರುವುದು 'ಗುಲಾಮಗಿರಿ' ಎಂಬುದು ಮಾತ್ರ ಸತ್ಯ.

ಮಾನವ ಕಳ್ಳಸಾಗಣೆ ಪ್ರತಿಯೊಂದು ದೇಶದಲ್ಲೂ ಅಪರಾಧವೇ ಆಗಿದೆ. ಈ ಅಪರಾಧದಿಂದ ತಪ್ಪಿಸಿಕೊಳ್ಳಲು ಅವರು ಬಡ ಕೂಲಿಗಳನ್ನು ಸಾಲದ ಸರಪಳಿಯಲ್ಲಿ ಬಂಧಿಸಿಬಿಡುತ್ತಾರೆ. ಸಾಲ ತೀರಿಸುವವರೆಗೆ ತಮ್ಮ ಒತ್ತೆಯಾಳುಗಳಾಗಿ ಇಟ್ಟುಕೊಳ್ಳುತ್ತಾರೆ. ದೂರದ ದೇಶಗಳ ಮಾತು ಬಿಡಿ, ನಮ್ಮ ಭಾರತ ಹಾಗೂ ನೆರೆಯ ಪಾಕಿಸ್ತಾನದಲ್ಲಿ "ಜೀತ ವಿಮೋಚನೆ"

ಒಂದು ಘೋಷಣೆಯಾಗಿ ಉಳಿದಿದೆಯೇ ಹೊರತು, ವಾಸ್ತವದಲ್ಲಿ ಗುಲಾಮರ ವಿಮೋಚನೆ ಆಗಿಯೇ ಇಲ್ಲ. ತಂದೆ ಮಾಡಿದ ಸಾಲ ಹಾಗೂ ಸಾಲದ ಬಡ್ಡಿ ತೀರಿಸಲು ಮಕ್ಕಳು, ಮೊಮ್ಮಕ್ಕಳು, ಮರಿಮಕ್ಕಳು ಶತಶತಮಾನಗಳಿಂದಲೂ ದುಡಿಯುತ್ತಲೇ ಇರುವ ಅನೇಕ ಪ್ರಕರಣಗಳು ಈಗಲೂ ಭಾರತದಲ್ಲಿ ಸಾಕಷ್ಟಿವೆ. ಇಲ್ಲಿಯ ಸುಲಭ ಸೂತ್ರವೆಂದರೆ ಸಾಲ ಮಾಡಿದ ತಂದೆ–ಮಕ್ಕಳು–ಮರಿಮಕ್ಕಳು–ಗಿರಿಮಕ್ಕಳು... ನಿರಕ್ಷರರಾಗಿಯೇ ಇರುತ್ತಾರೆ. ಅವರಿಗೆ ಬೇರೆ ಯಾರೂ ಕೆಲಸ ಕೊಡುವುದಿಲ್ಲ. ಸಾಲ ನೀಡಿದ ಮಾಲಕ ಅವರನ್ನು ಬಡವರನ್ನಾಗಿಯೇ ಇಡಲು ಅವಶ್ಯಕತೆಗಿಂತಲೂ ಕಡಿಮೆ ಕೂಲಿ ನೀಡುತ್ತಾನೆ. ಹೀಗಿರುವಾಗ ಮಾಲಕನ ಸಾಲ ತೀರುವುದೆಂತು ? ಇವರ ಬಡತನ ನೀಗುವುದೆಂತು ? ಗುಲಾಮಗಿರಿ ತೊಲಗುವುದೆಂತು ? ಇದು ಯಾವುದೇ ಒಂದು ದೇಶದ ಕತೆ ಅಲ್ಲ. ಇಡೀ ವಿಶ್ವದಲ್ಲಿರುವ ಗುಲಾಮಗಿರಿಯ ಕಥೆ ! ೧೯೪೮ರ ಡಿಸೆಂಬರ್, ೨ರಂದು ವಿಶ್ವಸಂಸ್ಥೆಯ ಸಾರ್ವತ್ರಿಕ ಸಭೆಯು 'ಯೂನಿವರ್ಸಲ್ ಡಿಕ್ಲರೇಶನ್ ಆಫ್ ಹ್ಯೂಮನ್ ರೈಟ್ಸ್'ಗೆ ಸಮ್ಮತಿ ಸೂಚಿಸುತ್ತ ಅದು ಹೀಗೆ ಘೋಷಿಸಿತು – "ಇದು ಗುಲಾಮಗಿರಿಯಿಂದ ಸ್ವಾತಂತ್ರ್ಯವನ್ನು ಪಡೆಯುವುದು ಅಂತರರಾಷ್ಟ್ರೀಯವಾಗಿ ಗುರುತಿಸಲ್ಪಟ್ಟ ಮಾನವ ಹಕ್ಕು."

**ವಾಸ್ತವ ಸಂಗತಿ**

ವಾಸ್ತವ ಸಂಗತಿಯೆಂದರೆ 'ಗುಲಾಮಗಿರಿ ನಿರ್ಮೂಲನ'ವು ವಿಶ್ವದ ಸರಕಾರಗಳ ವಾರ್ಷಿಕ ಯೋಜನಾ ಪಟ್ಟಿಗಳಲ್ಲಿ ಸ್ಥಾನ ಪಡೆಯುವುದೇ ಇಲ್ಲ. ಅದರ ನಿರ್ಮೂಲನಕ್ಕೆ ಇಂತಿಷ್ಟು ಹಣ ಎಂದು ಪ್ರತಿವರ್ಷ ತೆಗೆದಿರಿಸುವುದಿಲ್ಲ. ಸರಕಾರಗಳ ಮಾತಿರಲಿ, ವಿಶ್ವಸಂಸ್ಥೆಯೇ ಗುಲಾಮಗಿರಿ ನಿರ್ಮೂಲನಾ ಯೋಜನೆಗಳತ್ತ ಸರಿಯಾಗಿ ಗಮನಹರಿಸುವುದಿಲ್ಲ. ಸತ್ಯಸಂಗತಿ ಎಂದರೆ ವಿಶ್ವಸಂಸ್ಥೆಯ 'ಗುಲಾಮಗಿರಿ ನಿರ್ಮೂಲನಾ ಕ್ರಿಯಾ ತಂಡ'ವೇ ದುರ್ಬಲವಾಗಿದೆ. ಅದಕ್ಕೆ ಕಾರ್ಯ ನಿರ್ವಹಿಸಲು ಬೇಕಾದಷ್ಟು ಸಿಬ್ಬಂದಿಯಿಲ್ಲ. ಜೊತೆಗೆ ಹಣದ ಕೊರತೆಯೂ ಕಾಡುತ್ತಲಿದೆ. ಮಾನವ ಹಕ್ಕುಗಳ ಕುರಿತಾದ ವಿಶ್ವಸಂಸ್ಥೆಯ ಆಯೋಗವೂ ಕೂಡ ಗುಲಾಮಗಿರಿ ನಿರ್ಮೂಲನಾ ಕಾರ್ಯಗಳಲ್ಲಿ ಸಕ್ರಿಯವಾಗಿ, ಕಟ್ಟುನಿಟ್ಟಾಗಿ, ಕಾಯ್ದೆಬದ್ಧವಾಗಿ, ವಿಶ್ವಸನೀಯವಾಗಿ ತನ್ನನ್ನು ತೊಡಗಿಸಿಕೊಳ್ಳುವುದಿಲ್ಲ ಎಂಬ ಆರೋಪವೂ ಇದೆ. ಇದರಲ್ಲಿ ಸತ್ಯಾಂಶ ಇಲ್ಲ ಎನ್ನಲಾಗದು. ಈ ಕ್ರಿಯಾತಂಡ ಗುಲಾಮಗಿರಿ ಕುರಿತು ಸಿದ್ಧಪಡಿಸುವ ಅತಿ ಭಯಾನಕ ವರದಿಗಳನ್ನು ವಿಶ್ವಮಾನವ ಹಕ್ಕುಗಳ ಆಯೋಗ ಸಾರ್ವಜನಿಕವಾಗಿ ಚರ್ಚಿಸುವುದೇ ಇಲ್ಲ ಎಂಬ ಕೂಗೂ ಇದೆ. ಹಾಗೆಯೇ ವಿಶ್ವಸಂಸ್ಥೆಯ ಮಹಾಸಭೆ (ಜನರಲ್ ಅಸೆಂಬ್ಲಿ) ಗುಲಾಮಗಿರಿಯನ್ನು ಕುರಿತು ಚರ್ಚಿಸುವುದೇ ಇಲ್ಲ. ಯಾಕೆಂದರೆ ಗುಲಾಮಗಿರಿಯ ಚರ್ಚೆಯು ಅದರ ಸದಸ್ಯ ರಾಷ್ಟ್ರಗಳಲ್ಲೇ ಕೆಲವು ರಾಷ್ಟ್ರಗಳಿಗೆ ಅಸಹನೀಯವಾಗುತ್ತದೆ. ಯಾಕೆಂದರೆ ಆ ರಾಷ್ಟ್ರಗಳು ಗುಲಾಮಗಿರಿಯನ್ನು ತಮ್ಮ ಅನುಕೂಲಕ್ಕಾಗಿ ಜೀವಂತವಾಗಿರಿಸಿಕೊಂಡು ಬರುತ್ತಿರುವ ರಾಷ್ಟ್ರಗಳು ! ವಿಚಿತ್ರವಾದರೂ ಇದು ಸತ್ಯ. ಜಗತ್ತಿನ ಮುಂದುವರಿದ, ಶ್ರೀಮಂತ ರಾಷ್ಟ್ರಗಳೇ ಈ ಅಪರಾಧಿಗಳು !! ಅಮಾನವೀಯ ಪದ್ಧತಿಯಾದ ಗುಲಾಮಗಿರಿಯನ್ನು ವಿವಿಧ ರೂಪಗಳಲ್ಲಿ ಇನ್ನೂ ಜೀವಂತವಾಗಿಟ್ಟಿರುವ ಈ ಅಪರಾಧೀ ದೇಶಗಳಿಗೆ ಆದೇಶ ನೀಡುವ, ಶಿಕ್ಷೆ ಕೊಡುವ, ಆರ್ಥಿಕ ದಿಗ್ಬಂಧನ ಹೇರುವ ತಾಕತ್ತು ವಿಶ್ವಸಂಸ್ಥೆಗೆ ಇಲ್ಲ. ಯಾಕೆಂದರೆ ವಿಶ್ವಸಂಸ್ಥೆಯ ಅಸ್ತಿತ್ವ ಇರುವುದೇ ಅಮೆರಿಕದಂತಹ ಶ್ರೀಮಂತ, ಬಲಾಢ್ಯ ರಾಷ್ಟ್ರಗಳ ಕೈಯಲ್ಲಿ. ಇಂತಹುದೇ ಅಪರಾಧವನ್ನು ಜಗತ್ತಿನ ಬೇರಾವುದೇ ಚಿಕ್ಕ ದುರ್ಬಲ ರಾಷ್ಟ್ರ ಮಾಡಿದ್ದರೆ ಅದರ ಮೇಲೆ ವಿಶ್ವಸಂಸ್ಥೆ ಆರ್ಥಿಕ ದಿಗ್ಬಂಧನ ಹೇರುತ್ತಿತ್ತು. ಯಾಕೆಂದರೆ ಈ ಹಿರಿಯಣ್ಣ ದೇಶಗಳು ವಿಶ್ವಸಂಸ್ಥೆಯ ಮೇಲೆ ಒತ್ತಡ ತರುತ್ತಿದ್ದವು. ಆದರೆ ಈಗ ಇರುವ ಅಂತಿಮ ಸತ್ಯವೆಂದರೆ ಗುಲಾಮಗಿರಿ ಹಿಂದೆಯೂ ಇತ್ತು, ಈಗಲೂ ಇದೆ, ಮುಂದೆಯೂ ಇರುತ್ತದೆ. ಅದರ ಸ್ವರೂಪಗಳು ಮಾತ್ರ ಬದಲಾವಣೆ ಆಗುತ್ತಿರುತ್ತವೆ. ಇದರ ಅಳಿವು–ಉಳಿವು ವಿಶ್ವದ ರಾಜಕೀಯ ಇಚ್ಛಾಶಕ್ತಿಯನ್ನು ಅವಲಂಬಿಸಿದೆ. ಗುಲಾಮರು ವಿಶ್ವದ ರಾಜಕೀಯ ಚದುರಂಗದಾಟದ ದಾಳಗಳಾಗಿ ಯಜಮಾನನ ಕೈಗೊಂಬೆಯಾಗಿ ಚಲಾವಣೆ ಆಗುತ್ತಲಿದ್ದಾರೆ. ಇದು ಶ್ರೇಷ್ಠ ಮಾನವ ಜನ್ಮಕ್ಕೆ ಬಂದ, ಮಾನವನೇ ಮಾನವನನ್ನು ನಡೆಸಿಕೊಂಡು ಬರುತ್ತಿರುವ ಹೀನಾಯವಾದ ಪದ್ಧತಿಗಳಲ್ಲಿ ಒಂದು.


**ಎನ್. ಆರ್. ಪಾಟೀಲ**
ಹಿಂಡಲಗಾ, ಬೆಳಗಾವಿ




## ಎರಡು ಕಲ್ಲುಗಳ ಒಂದು ಕವಿತೆ

ಕಾವ್ಯಲೋಕ

ನಾವು ಜೊತೆಯಾಗಿದ್ದೆವು
ಎಷ್ಟೋ ಕಾಲದಿಂದ
ಹೊಂದಿಕೊಂಡು ಪ್ರೀತಿ ಹೊದ್ದುಕೊಂಡು

ಉಳಿ ಸುತ್ತಿಗೆಯ ನಿರ್ದಯಿಯೊಬ್ಬ
ನೆತ್ತಿಯ ಮೇಲೆ ಬಾರಿಸಿ
ಎತ್ತಿಕೊಂಡ
ಉಳಿದುಕೊಂಡ ನಾನು ಒಂಟಿ ಒಬ್ಬಂಟಿ

ಸುತ್ತಿಗೆಯ ಪ್ರಹಾರ ಉಳಿಯ ಪೆಟ್ಟು
ಹೊಟ್ಟೆ ನೆತ್ತಿ ಎದೆ
ಭಗ...
ಕಲ್ಲುಗಳ ಸೊಲ್ಲಿಗೆ ಧ್ವನಿಯೆ ಇಲ್ಲ
ನಾನಿಲ್ಲೇ ಅಳುತ್ತಿದ್ದೇನೆ

ಶಿಲ್ಪಿಯ ಬೆವರು
ಶಿಲೆಯ ಕಣ್ಣೀರು ಒಂದಾಗಿ ಬೆರೆತು
ಯಾವ ಕಲ್ಯಾಣಿ ಸೇರಿತೋ

ಆ ಕಲ್ಲೀಗ ಗರ್ಭಗುಡಿಯಲಿ
ಪ್ರಾಣ ಪ್ರತಿಷ್ಠಾಪನೆ
ದೇವರಾಗಲು ಅವೆಷ್ಟು ಉಳಿಪೆಟ್ಟು

ನನ್ನನ್ಯಾರೊ ಎತ್ತಿ
ಹೊರ ಕಟ್ಟೆಯ ಮೇಲಿಟ್ಟರು
ಎಣ್ಣೆ ಹುಯ್ದು
ದೀಪ ಹಚ್ಚಿಟ್ಟರು

ಕಣ್ಣು ಮೂಗಿಲ್ಲದ ಕರಿದುಂಡಿ
ಉಳಿ ಪೆಟ್ಟಿಲ್ಲದ
ನಾ ಯಾವ ದೇವರು
ಯಾರ ದೇವರು...?

ಅವನಲ್ಲಿ ವಿಗ್ರಹ
ನಾನಿಲ್ಲಿ ವಿರಹಿ
ಎಷ್ಟು ಕಾಲವಾಯಿತು...


**ಲಿಂಗರಾಜ ಸೊಟ್ಟಪ್ಪನವರ**
'ರೇಣುಕಾ ನಿಲಯ',
ಕಾಳೆ ಬಿಲ್ಡಿಂಗ್,
ವಿದ್ಯಾನಗರ (ಪಶ್ಚಿಮ)
ಹಾವೇರಿ – ೫೮೧ ೧೧೦





# ನಾವು ಪಡೆದ ಸ್ವಾತಂತ್ರ್ಯ

**ಸ್ವಾತಂತ್ರ್ಯದ ಕುರಿತು ಸ್ವಾತಂತ್ರ್ಯ ಹೋರಾಟದಲ್ಲಿ ನೇರ ಭಾಗವಹಿಸಿದ ಹಲವಾರು ಹೋರಾಟಗಾರರನ್ನು 'ಹೊಸತು' ಈ ಹಿಂದೆ ಸಂದರ್ಶಿಸಿದೆ. ಅವರ ಅನುಭವ, ಆಶಯಗಳನ್ನು ಪ್ರಕಟಿಸಿದೆ. ಈ ಬಾರಿ ಸ್ವಾತಂತ್ರ್ಯವನ್ನು ಪಡೆದವರ ಅಭಿಪ್ರಾಯಗಳನ್ನು ಸಾಂಕೇತಿಕವಾಗಿ ನಾಲ್ಕು ಯುವ ಜನರಿಂದ ಪಡೆದು 'ನಾವು ಪಡೆದ ಸ್ವಾತಂತ್ರ್ಯ' ಎಂಬ ತಲೆ ಬರಹದಡಿ ಪ್ರಕಟಿಸಲಾಗಿದೆ.**

**ನಾಲ್ಕು ವಿಭಿನ್ನ ವಲಯದಿಂದ ವಿಭಿನ್ನ ನೆಲೆಯಿಂದ ಬಂದ ಈ ಸ್ವಾತಂತ್ರ್ಯದ ಫಲಾನುಭವಿಗಳು ಸ್ವಾತಂತ್ರ್ಯದ ಕುರಿತು ತಮ್ಮ ಅಭಿಪ್ರಾಯಗಳನ್ನು ಮಂಡಿಸಿದ್ದಾರೆ. ಬರಹಗಾರ ಪೀರಭಾಷ, ದಲಿತ ಬರಹಗಾರ ಡಾ॥ ಸಿದ್ರಾಮ ಕಾರಣಿಕ, ಪತ್ರಕರ್ತೆ ಡಾ॥ ಮಂಜುಶ್ರೀ ಎಂ. ಕಡಕೋಳ, ಪ್ರಗತಿಪರ ಚಿಂತಕ ತೇಜ ಸಚಿನ್ ಪೂಜಾರಿ ಈ ನಾಲ್ಕು ಯುವ ಚೇತನಗಳು ಸ್ವಾತಂತ್ರ್ಯದ ತೀವ್ರ ಅವಶ್ಯಕತೆ ಇರುವ ವಲಯದಿಂದ ಬಂದವರು. ತಮ್ಮ ಅಭಿಪ್ರಾಯ ಹಂಚಿಕೊಂಡಿದ್ದಕ್ಕೆ ಅವರಿಗೆ ವಂದನೆಗಳು.**

*–ಸಂ.*

## ಅಜಗರ ಮತ್ತು ಕಾಳಿಂಗಗಳ ನಡುವೆ ಹೆಳವನ ಪಾಡು

**೧. ಭಾರತದ ಸ್ವಾತಂತ್ರ್ಯ ಚಳುವಳಿಯನ್ನು ವರ್ತಮಾನದ ನೆಲೆಯಿಂದ ಪುನರವಲೋಕನ ಮಾಡಿದಾಗ ಏನೆನ್ನಿಸುತ್ತದೆ ?**

ಬ್ರಿಟಿಷರನ್ನು ಆಳುವ ಸ್ಥಾನದಿಂದ ತೆರವುಗೊಳಿಸುವುದು 'ಸ್ವಾತಂತ್ರ್ಯ' ಚಳುವಳಿಯ ಸಾಮಾನ್ಯ ಉದ್ದೇಶವಾಗಿತ್ತಷ್ಟೆ. ಆಶಯಮಾತ್ರವಾಗಿದ್ದ ಸ್ವಾತಂತ್ರ್ಯದ, ಪರಿಕಲ್ಪನೆ ಮತ್ತು ಪಥಕ್ರಮಗಳಲ್ಲಿ ವೈರುಧ್ಯಗಳಿದ್ದವು. ಹಾಗೆಂದೇ ಬ್ರಿಟಿಷರನ್ನು ತೆರವುಗೊಳಿಸುವ ಸಾಮಾನ್ಯ ಉದ್ದೇಶ ಈಡೇರಿತೇ ಹೊರತು ಸ್ವಾತಂತ್ರ್ಯದ ಆಶಯವು ದೇಶವನ್ನಾಳುವ ಹೊಸ ಒಕ್ಕೂಟದ ಆಡಳಿತದಲ್ಲಿ ಅವಗಣನೆಗೀಡಾಯಿತು. ಈ ಹಿನ್ನೆಲೆಯಲ್ಲಿ ಸ್ವಾತಂತ್ರ್ಯ ಚಳುವಳಿ ಎಂಬ ಏಕಾತ್ಮಕವಾದ ಗ್ರಹಿಕೆಯ ಬದಲಾಗಿ ಅದನ್ನು ವಸಾಹತುಶಾಹಿ ವಿರೋಧಿ ಚಳುವಳಿಯಾಗಿ ಗುರುತಿಸುವುದೇ ಸರಿ ಎನಿಸುತ್ತದೆ. ಹಾಗೆ ನೋಡಿದರೆ ದೇಶದ ಜನತೆ ಕಲ್ಪಿಸಿಕೊಂಡಿದ್ದ ಸ್ವಾತಂತ್ರ್ಯವೇ ಬೇರೆ. ಅಂತಹ ಸ್ವಾತಂತ್ರ್ಯದ ದರ್ಶನವಿದ್ದದ್ದು ಅಂಬೇಡ್ಕರ್ ಅವರ ಚಿಂತನೆಗಳಲ್ಲಿ ಮತ್ತು ತಾತ್ವಿಕ ನಿರ್ದಿಷ್ಟತೆಯಿದ್ದದ್ದು ಕಮ್ಯುನಿಸ್ಟರಲ್ಲಿ. ಆದರೆ ನೈಜತೆಯನ್ನು ಕ್ರಿಯಾಸಾಧ್ಯಗೊಳ್ಳದಂತೆ ಮಾಡುವಲ್ಲಿ ಆಳುವ ವರ್ಗಗಳು ಸಫಲವಾದ ದುರಂತ 'ಸ್ವಾತಂತ್ರ್ಯೋತ್ತರ' ಭಾರತದ ಒಟ್ಟು ಅನುಭವ ಎನ್ನುವುದಾದರೆ ಅದರ ಬೇರುಗಳಿರುವುದೇ 'ಸ್ವಾತಂತ್ರ್ಯ ಚಳುವಳಿ' ಎಂದು ನಂಬಿಸಲಾದ ಆ ಕಾರ್ಯತಂತ್ರದಲ್ಲಿ ಎನಿಸುತ್ತದೆ.

**೨. ಸ್ವಾತಂತ್ರ್ಯೋತ್ತರ ಭಾರತ ಕುರಿತು ನಿಮ್ಮ ವಿಶ್ಲೇಷಣೆ ಏನು ?**

ಈ ಅವಧಿಯಲ್ಲಿ ಸಹಜವಾಗಿಯೇ ಗಾಂಧಿವಾದ ಅಪ್ರಸ್ತುತವಾಯ್ತು. ಪ್ರಜ್ಞಾಪೂರ್ವಕವಾಗಿಯೇ ಅಂಬೇಡ್ಕರರ ಪ್ರಸ್ತಾವನೆಗಳನ್ನು ಅವಗಣಿಸಲಾಯ್ತು. ಮೊಟ್ಟಮೊದಲ ವಿರೋಧ ಪಕ್ಷವಾಗಿದ್ದ ಕಮ್ಯುನಿಸ್ಟರು ಆ ಬಳಿಕ ವಿಭಜಿಸಲ್ಪಟ್ಟಿದ್ದು, ಪ್ರಭುತ್ವಕ್ಕೆ ಪ್ರತಿರೋಧ ಶಕ್ತಿಯಾಗಿದ್ದ ಜನತಂತ್ರವಾದದ ವಿಭಜನೆಯಾಗಿ ಮಾರ್ಪಟ್ಟಿತು. ಮುಂದೆ ನಡೆದದ್ದೆಲ್ಲಾ ಪ್ರಭುತ್ವದ ನಿರಾತಂಕದ ನಡಿಗೆಯೆ. ಬ್ರಿಟಿಷ್ ವಸಾಹತುಶಾಹಿಯ ನೇರ ಆಡಳಿತದಿಂದ ಮುಕ್ತವಾಗಿ, ಅಮೆರಿಕ ನೇತೃತ್ವದ ಸಾಮ್ರಾಜ್ಯಶಾಹಿಯ ತೆರೆಮರೆಯ ನಿರ್ದೇಶನದಲ್ಲಿ ಸ್ವಾತಂತ್ರ್ಯ ಮತ್ತು ಪ್ರಜಾಪ್ರಭುತ್ವದ ಪರಿಕಲ್ಪನೆಗಳು ಬಂಡವಾಳಶಾಹಿ ದೃಷ್ಟಿಕೋನದಿಂದ ನಿರ್ವಚಿಸಲ್ಪಟ್ಟವು. ಅವೆಲ್ಲದರ ಒಟ್ಟು ಪರಿಣಾಮವೇ ಈ ಹೊತ್ತಿನ ಜನಭಾರತ ಮತ್ತು ಪ್ರಭುತ್ವ .

**೩. ಭಾರತದ ಪ್ರಧಾನ ಮಂತ್ರಿಯಾಗಿ ನರೇಂದ್ರ ಮೋದಿ ಸರಕಾರ ಆಡಳಿತ ನಡೆಸುತ್ತಿರುವ ಹೊತ್ತಿನಲ್ಲಿ ಈ ದೇಶದ ಸ್ವಾತಂತ್ರ್ಯ ಮತ್ತು ಪ್ರಜಾಪ್ರಭುತ್ವದ ಕುರಿತು ನಿಮ್ಮ ಅಭಿಪ್ರಾಯವೇನು ?**

ಆರ್ಥಿಕ ನೀತಿಗಳ ನೆಲೆಯಿಂದ ವಿಶ್ಲೇಷಿಸುವುದಾದರೆ ನರೇಂದ್ರ ಮೋದಿ, ನೆಹರೂರವರ ಪ್ರಥಮ ಉತ್ತರಾಧಿಕಾರಿಯಾಗಿ ಚಾರಿತ್ರಿಕವಾಗಿ ಪರಿಗಣಿಸಲ್ಪಡುತ್ತಾರೆ. ಮ. ಮೋ. ಸಿಂಗ್‌ವರೆಗಿನ ಉಳಿದೆಲ್ಲ ಪ್ರಧಾನಿಗಳು ನೆಹರೂ ಅನುಯಾಯಿಗಳು ಮಾತ್ರವಾಗಿದ್ದವರು. ಹಾಗಾಗಿ ಅಭಿವೃದ್ಧಿಯ ದೃಷ್ಟಿಕೋನ, ಮಹಾಯೋಜನೆಗಳ ರೂಪುರೇಷೆ, ಅಂತಾರಾಷ್ಟ್ರೀಯತೆಯ

ಆಸಕ್ತಿ ಇವೆಲ್ಲವುಗಳ ಹಿನ್ನೆಲೆಯಲ್ಲಿ ನನಗನಿಸುವಂತೆ ಮೋದಿಯೇ ನೆಹರೂವಿನ ನೈಜ ಉತ್ತರಾಧಿಕಾರಿ. ಇನ್ನು ಹಿಂದುತ್ವ ಎನ್ನುವುದೇ ಒಂದು ರಾಜಕಾರಣ ಎಂಬುದನ್ನು ಅರಿತವರಿಗೆ ನಾಗಪುರದ ಪ್ರಯೋಗಾಲಯವು ಮೋದಿ ಹೆಸರಿನ ಉಪಗ್ರಹವನ್ನು ಸಮರ್ಥವಾಗಿ ಕಕ್ಷೆಗೆ ಸೇರಿಸಿದೆ ಎಂಬುದು ತಿಳಿಯುತ್ತದೆ.

ಆರ್. ಎಸ್. ಎಸ್. ಸ್ಥಾಪನೆಯಾಗಿ ನೂರು ವರ್ಷ ಸಮೀಪಿಸುತ್ತಿರುವಾಗ ಅದರ ಹುಟ್ಟು ಮತ್ತು ಬೆಳವಣಿಗೆಯನ್ನು ಭಾರತದ ಸಾಂಸ್ಕೃತಿಕ – ಆರ್ಥಿಕ ಜಂಟಿ ನೆಲೆಗಳಿಂದ ವಿಶ್ಲೇಷಣೆಗೊಳಪಡಿಸಲು ಸಾಧ್ಯವಾಗಬೇಕು. ಇವೆರಡನ್ನೂ ಪ್ರತ್ಯೇಕಗೊಳಿಸಿ, ಇಲ್ಲವೇ ಭಾರತೀಯ ವಾಸ್ತವದಲ್ಲಿ ಒಂದನ್ನು ಪ್ರಧಾನವಾಗಿ, ಇನ್ನೊಂದನ್ನು ಅನುಷಂಗಿಕವಾಗಿ ವಿಶ್ಲೇಷಿಸುವ ಕ್ರಮವನ್ನು ಬದಲಿಸಿಕೊಳ್ಳಬೇಕಿದೆ, ಇಲ್ಲವೇ ಸರಿಪಡಿಸಿಕೊಳ್ಳಬೇಕಿದೆ. ಆರ್. ಎಸ್. ಎಸ್.ನ ಹುದ್ದರಿ ಪ್ರಧಾನಿಯಾಗುವುದರ ನಿರ್ಧಾರಕ ಅಂಶಗಳು ತುರ್ತುಪರಿಸ್ಥಿತಿ ಮತ್ತು ಆ ಪೂರ್ವದ ರಾಜಕೀಯ ಸಂದರ್ಭಗಳಲ್ಲೇ ಇವೆ. ಅಂತೆಯೇ ಸಾಂಸ್ಕೃತಿಕ ರಾಷ್ಟ್ರೀಯತಾವಾದದ ಪ್ರಾಯೋಗಿಕ ವಿಕಾಸವು ಭಾರತವನ್ನು ಗತದ ಜರ್ಮನಿಯನ್ನೋ, ವರ್ತಮಾನದ ಇರಾಕನ್ನೋ ಮಾಡಬಾರದು ಎಂಬುದಾದರೆ ವೈಜ್ಞಾನಿಕ ಸಮಾಜವಾದದ ಜ್ಞಾನಶಿಸ್ತು ಭಾರತೀಯ ವಾಸ್ತವದ ನೆಲೆಯಲ್ಲಿ ಕ್ರಿಯಾರೂಪಕ್ಕಿಳಿಯಬೇಕಿದೆ. ಹೀಗಾದಾಗ ಮಾತ್ರ ಸಾಮ್ರಾಜ್ಯಶಾಹಿಯ ಏಜೆಂಟರಾಗುತ್ತಿರುವ ಮತೀಯ ರಾಷ್ಟ್ರೀಯತಾವಾದಿಗಳಿಂದ ದುಡಿವ – ಬಡ ಸಮುದಾಯಗಳನ್ನು ರಕ್ಷಿಸಲು ಸಾಧ್ಯ.

**೪. ಇಂತಹ ಸಂದರ್ಭದಲ್ಲಿ ಜನಚಳುವಳಿಗಳ ಮುಂದಿರುವ ಸವಾಲುಗಳೇನು ?**

ಈಗಿನ ಪ್ರಜಾಪ್ರಭುತ್ವದ ಸ್ವರೂಪವೇ ನಮ್ಮೆದುರಿನ ದೊಡ್ಡ ಸವಾಲು. ಈ ಪ್ರಜಾಪ್ರಭುತ್ವ ವ್ಯವಸ್ಥೆಯನ್ನು ಇದ್ದಂತೆಯೇ ಒಪ್ಪಿ ಅದರೊಂದಿಗೆ ಅನುಸಂಧಾನಗೈಯುವ, ಇಲ್ಲವೇ ಇಡಿಯಾಗಿ ನಿರಾಕರಿಸಿ ನೇರ ಮುಖಾಮುಖಿಯಾಗುವ ಕ್ರಮಗಳೆರಡರಲ್ಲೂ ತೊಡಕುಗಳಿವೆ. ಚಳುವಳಿಯ ನೆಲೆಯಿಂದ ಸಂಸದೀಯ ಭಾಗಿದಾರಿಕೆ ಸಾಧ್ಯವಾದರೆ ಅದರಿಂದ ಒಳಿತಾಗಬಹುದು. ಆದರೆ, ಚಳುವಳಿಯ ಆದ್ಯತೆಯೇ ಎರಡನೆಯದಾಗಿ ಪರಿಗಣಿಸುವ ಸಂಸದೀಯ ಆಸಕ್ತಿ ಚಳುವಳಿ ರಾಜಕಾರಣದ ಇರುವ ಬೇರುಗಳನ್ನೂ ಸಡಿಲಿಸಬಲ್ಲದು ಮತ್ತು ಕೆಡಹಬಲ್ಲದು. ಭಾರತದ ಯಾವುದೇ ರಾಜಕೀಯ ಸಂಘಟನೆ ಚುನಾವಣಾ ರಾಜಕಾರಣದಲ್ಲಿ ವಹಿಸಿದ ಆಸಕ್ತಿ, ನಿಭಾಯಿಸಿದ ಪಾತ್ರ, ಪಡೆದದ್ದು–ಕಳಕೊಂಡದ್ದನ್ನು ಪುನರ್ಮಾಪನಕ್ಕೆ ಒಳಪಡಿಸಬೇಕು. ಮತ್ತು ಎಂದಿಗಿಂತ ಈ ಸಂದರ್ಭದಲ್ಲಿ ಚುನಾವಣಾ ರಾಜಕಾರಣವನ್ನು ಅಂತರದಲ್ಲಿಟ್ಟು ಗಂಭೀರವಾಗಿ ಜನತೆಯೊಂದಿಗೆ ಬಾಳದೇ ಹೋದರೆ ಚಳುವಳಿಗಳು ಬದುಕುಳಿಯಲಾರವು ಕೂಡ. ಇನ್ನು ಅಭಿವೃದ್ಧಿಯನ್ನು ವ್ಯಾಖ್ಯಾನಿಸುವಲ್ಲಿನ ಸಮಸ್ಯೆಯಂತೂ ಇದ್ದೇ ಇದೆ. ಬಂಡವಾಳವನ್ನೇ ವಿರೋಧಿಸಬೇಕೋ ಅಥವಾ ಅದು ಯಾರ ಕೈಯಲ್ಲಿ ಇರಬೇಕು ಎಂಬುದಷ್ಟೇ ಮುಖ್ಯವಾಗಬೇಕೋ ಎಂಬಂತಹ ಪ್ರಶ್ನೆಗಳಿಗೆ ಉತ್ತರ ಕೊಡುವ ಸಂದರ್ಭವನ್ನು ಪ್ರಭುತ್ವಶಕ್ತಿಗಳು ಹುಟ್ಟುಹಾಕಿವೆ. ಅಂತೆಯೇ ವರ್ಗಚಳುವಳಿಯು ಜಾತಿ ಪ್ರಶ್ನೆಯನ್ನು ಬಗೆಹರಿಸಿಕೊಂಡಿದೆ ಎಂದು ಈವರೆಗೂ ನಿಚ್ಚಳಗೊಳ್ಳದಿರುವುದೂ ಮರೆಮಾಚುವ ಸಂಗತಿಯೇನಲ್ಲ.

**೫. ವರ್ತಮಾನದ ಸಂದರ್ಭದ ಕೋಮುವಾದದ ಸ್ವರೂಪದ ಬಗ್ಗೆ ಏನನ್ನಿಸುತ್ತದೆ ?**

ಭಾರತದ ಚರಿತ್ರೆಯಲ್ಲಿ ಪ್ರಜಾಪ್ರಭುತ್ವವೆಂಬ ಆಧುನಿಕ ಪರಿಕಲ್ಪನೆ ಕೋಮುವಾದದ ಬಗಲಿನಲ್ಲೇ ಬೆಳೆದು ಬಂದಿರುವಂಥಾದ್ದು. ಕಳೆದ ಶತಮಾನದ ಆರಂಭದಲ್ಲಿಯೇ ಹುಟ್ಟಿದ ಕೋಮುವಾದವು ಸ್ವಾತಂತ್ರ್ಯದ ಘೋಷಣೆಯ ಪ್ರತಿಧ್ವನಿಯೇ ಎಂಬಂತೆ ಮತೀಯ ಹಿಂಸೆಯನ್ನು ಹುಟ್ಟುಹಾಕಿದೆ. ಆದರಿವತ್ತು ಕೋಮು ಚಳುವಳಿಯ ಉತ್ಪನ್ನವಾದ ನಾಯಕತ್ವವೇ ದೇಶವನ್ನಾಳುತ್ತಿರುವ ಹಿನ್ನೆಲೆಯಲ್ಲಿ ಇದರ ಹೊಸ ಸ್ವರೂಪವನ್ನು ಅಂದಾಜಿಸಬೇಕಿದೆ. ಇರಾಕ್–ಅಫ್ಘಾನ್‌ಗಳಲ್ಲಿ ತಲೆ ಎತ್ತಿರುವ ಮೂಲಭೂತವಾದಿ ಬೆಳವಣಿಗೆಗಳ ಹಿನ್ನೆಲೆಯಲ್ಲಿ ಧರ್ಮನಿರಪೇಕ್ಷ ಪರ್ಯಾಯದ ರಚನೆ ಮತ್ತು ಕಾರ್ಯಕ್ಷಮತೆಯನ್ನು ಸಮಕಾಲೀನಗೊಳಿಸಬೇಕಿದೆ. ಇಷ್ಟನ್ನು ಹೇಳುತ್ತಿರುವ ಹೊತ್ತಿನಲ್ಲಿ, ಅಜಗರ ಮತ್ತು ಕಾಳಿಂಗಗಳ ನಡುವೆ ಸಿಕ್ಕಿಬಿದ್ದ ಹೆಳವನ ಚಿತ್ರ ನನ್ನ ಕಣ್ಣಮುಂದಿದೆ. ಅದು ರೆಪ್ಪೆ ಬಿಚ್ಚಿದರೂ ಕಾಣದು, ಕಣ್ಣು ಮುಚ್ಚಿದರೂ ಮರೆಯಾಗದು.

ಬಿ. ಪೀರ್‌ಬಾಷ
ಜೆ. ಪಿ. ನಗರ, ಕರಟಗಿ, ಗಂಗಾವತಿ ತಾಲೂಕು, ಕೊಪ್ಪಳ ಜಿಲ್ಲೆ – ೫೮೩ ೨೨೯

## ಬಂಗಲೆ ಸೇರಿದ ಮಂದಿ ಗುಡಿಸಲು ಮರೆತರು !

**ಹೊಸತು** : ದಲಿತ ಯುವ ಬರಹಗಾರರಾಗಿ ನಾವು ಪಡೆದ ಸ್ವಾತಂತ್ರ್ಯವನ್ನು ಹೇಗೆ ವಿಶ್ಲೇಷಿಸುತ್ತೀರಿ ?

**ಸಿದ್ಧರಾಮ ಕಾರಣಿಕ** : ಭಾರತ ಬ್ರಿಟಿಷ್ ಆಡಳಿತದಿಂದ ಬಿಡುಗಡೆಗೊಂಡು ದೇಶಿಯ ಆಡಳಿತಗಾರರ ಅಧೀನಕ್ಕೆ ಸಿಲುಕಿ ಇತಿಹಾಸದಲ್ಲಿ ದಾಖಲಾಗುವಲ್ಲಿ ದಾಪುಗಾಲು ಇಡುತ್ತಿದೆ ಎಂಬ ಮಾತು ವಾಸ್ತವದ ಹಿಡಿತಕ್ಕೆ ಸಿಗಲಾರದ ಕಲ್ಪನೆ ಮಾತ್ರ. ಗಾಂಧೀ ಪ್ರಣೀತ ತತ್ವಗಳು ಸ್ವತಂತ್ರ ಭಾರತದಲ್ಲಿ ಕೇವಲ ವೇದಿಕೆಯ ಭಾಷಣಗಳಾಗಿ ಮಾತ್ರ ಚಾಲ್ತಿಯಲ್ಲಿವೆ. ಅಂಬೇಡ್ಕರ್ ವಿಚಾರಧಾರೆಗಳೂ ಕೂಡ ಇಂದು ಮೂಲೆ ಸೇರುತ್ತವೆ. 'ಯಾರಿಗೆ ಬಂತು; ಎಲ್ಲಿಗೆ ಬಂತು ಸ್ವಾತಂತ್ರ್ಯ' ಎಂದು ಕೂಗಿದ, ಹಾಡಿದ ಮಂದಿಯೆಲ್ಲ ಇತಿಹಾಸವನ್ನು ಮರೆತುಬಿಟ್ಟಿದ್ದಾರೆ ಅಥವಾ ಮರೆತಂತೆ ನಾಟಕವನ್ನಾಡುತ್ತಿದ್ದಾರೆ. ಇನ್ನೂ ಕೆಲವರು 'ಬಿಡ್ರಿ, ಊರ ಉಸಾಬರಿ ನಮಗ್ಯಾಕೆ' ಎಂದುಕೊಂಡು ಮುಸುಕೆಳೆದುಕೊಂಡು ಮಲಗಿಬಿಟ್ಟಿದ್ದಾರೆ ಅಥವಾ ಮಲಗಿಕೊಂಡಂತೆ ನಾಟಕವಾಡುತ್ತಿದ್ದಾರೆ. ಹಾಗಾದರೆ ಸ್ವತಂತ್ರ ಭಾರತದಲ್ಲಿ ಬದಲಾವಣೆ ಎನ್ನುವುದು ಆಗಿದೆಯೇ ಎಂದರೆ 'ಹೌದೌದು' ಎಂದು ತಲೆಯಾಡಿಸುವ ಭಟ್ಟಂಗಿಗಳೂ 'ಇಲ್ಲವೇ ಇಲ್ಲ' ಎಂದು ತಕರಾರು ತೆಗೆದು ದೊಡ್ಡ ಧ್ವನಿಯಲ್ಲಿ ವೇದಿಕೆ ಕುಟ್ಟುವ ಎಡಬಿಡಂಗಿಗಳೂ ನಮ್ಮ ನಡುವೆ ಇದ್ದಾರೆ.

ಭಾರತಕ್ಕೆ ಸ್ವಾತಂತ್ರ್ಯ ಸಿಕ್ಕಿ ಇಷ್ಟು ವರ್ಷಗಳಾದರೂ ವಾಸ್ತವ ವಿಚಾರವನ್ನು ವಿಶ್ಲೇಷಣೆ ಮಾಡುವ, ವಾಸ್ತವದ ಬದುಕನ್ನು ಅರ್ಥೈಸುವ ಪ್ರಯತ್ನಗಳು ಹೆಚ್ಚು–ಕಡಿಮೆ ಇಂದು ತಲೆಮರೆಸಿಕೊಂಡಿವೆ. ಅಧಿಕಾರ, ಆಡಳಿತದ ತೆವಲಿಗೆ ಜೊಲ್ಲು ಸುರಿಸುವ ನಾಯಕರು ಬರೀ ಬಾಲವನ್ನಾಡಿಸುವ ಗುಂಗಿನಲ್ಲೇ ಬಿದ್ದುಕೊಂಡಿದ್ದಾರೆ. ಸಾಮಾನ್ಯರ ಬದುಕು ಬೀದಿಗೆ ಬಿದ್ದಿದೆ; ದಲಿತರ ಬದುಕು ದೆಸೆ ತಪ್ಪಿದೆ.

**ಹೊ** : ಸಿಕ್ಕ ಸ್ವಾತಂತ್ರ್ಯವನ್ನು ಪಡೆಯುವಲ್ಲಿ ದಲಿತರ ಪಾತ್ರವೇನು ?

ಸಿ. **ಕಾ**.: ದಲಿತ ಅಸ್ಮಿತೆಯನ್ನು ಅರಿತುಕೊಂಡು ದಲಿತ ಬದುಕನ್ನು ಹಸನಾಗಿಸುವ ಮನಸ್ಸುಗಳಿಗೆ ಇಂದು ಬರ ಬಿದ್ದಿದೆ. ಡಾ॥ ಬಾಬಾಸಾಹೇಬ ಅಂಬೇಡ್ಕರ್ ಅವರನ್ನು ಉಸಿರಾಗಿಸಿಕೊಳ್ಳದ ಜನ ಕೇವಲ ಅವರ ಹೆಸರನ್ನು ಬಳಸಿಕೊಂಡು ಕವಲು ಹಾದಿಯಲ್ಲಿ ತೆವಳುತ್ತಿದ್ದಾರೆ. ಅಕ್ಷರ ಕಲಿತರೂ ಅರಿವಿನ ಪರಿಧಿ ತೆರೆದುಕೊಳ್ಳಲಿಲ್ಲ. ಮೀಸಲಾತಿಯ ಬಗ್ಗೆ ಅಪಸ್ವರ ಇಂದಿಗೂ ಕೇಳಿಬರುತ್ತಿದೆ. ದಲಿತರ ಮೇಲೆ ಶೋಷಣೆ, ಅನ್ಯಾಯ, ಅತ್ಯಾಚಾರ ಇಂದಿಗೂ ನಿರಂತರವಾಗಿವೆ. ಎಲ್ಲವೂ ಬದಲಾಗಿದೆ; ದಲಿತರ ಮೇಲಿನ ಶೋಷಣೆ ಕೂಡ ರೂಪ ಬದಲಾಯಿಸಿ ಕೊಂಡಿದೆ. ಕೂಡಿಬಾಳುವ ಇರಾದೆಯನ್ನೇ ಮರೆತು ಬಿಟ್ಟಿರುವ ದಲಿತ ಶಕ್ತಿ ಇಂದು ನಿಜವಾದ ಅರ್ಥದಲ್ಲಿ ಛಿದ್ರವಾಗಿದೆ. ಇದಕ್ಕೆಲ್ಲ ಕಾರಣಗಳನ್ನು ಬೇರೆಕಡೆ ಹುಡುಕುವ ಅವಶ್ಯಕತೆ ಇಲ್ಲ. ಇಂದಿಗೂ ಹೇಳಿದ್ದನ್ನೇ ಹೇಳಿ ವೇದಿಕೆಯ ವೀರರಾಗುವ ಅವಶ್ಯಕತೆಯಿಲ್ಲ.

ದಲಿತರಲ್ಲಿ ನಾನು ಮೂರು ಬಗೆಯಾಗಿ ವಿಂಗಡಿಸುತ್ತೇನೆ; ಬಲಿತ ದಲಿತರು, ದರಿದ್ರ ದಲಿತರು ಮತ್ತು ಸಾಮಾನ್ಯ ದಲಿತರು. ಡಾ॥ ಬಾಬಾಸಾಹೇಬ ಅಂಬೇಡ್ಕರ್ ಅವರ ಹೋರಾಟದ ಫಲವಾಗಿ ದಕ್ಕಿದ ಅವಕಾಶಗಳನ್ನು ಬಳಸಿಕೊಂಡು ಹೊಸ ಹಾದಿ ತುಳಿದ ಬಹಳಷ್ಟು ಮಂದಿ ಹಿಂತಿರುಗಿ ನೋಡುವ ಜವಾಬ್ದಾರಿಯಿಂದ ಬಹುದೂರ ಹೋಗಿದ್ದಾರೆ. ತಾನು, ತನ್ನ ಕುಟುಂಬ ಚೆನ್ನಾಗಿದ್ದರೆ ಸಾಕು ಎನ್ನುವಂತೆ ಸಮಾಜದ ಆಗು–ಹೋಗುಗಳಿಗೆ ಬೆನ್ನು ಮಾಡಿ ನಿಂತಿದ್ದಾರೆ. ಇವರನ್ನೇ ನಾನು ಬಲಿತ ದಲಿತರು ಎನ್ನುವುದು. ಇನ್ನೂ ಕೆಲವು ದಲಿತರಿದ್ದಾರೆ, ಅವರಿಗೆ ವಿಸ್ತಾರವಾದ ಅರಿವಾಗಲಿ, ಸಮಾಜದ ಬಗ್ಗೆ ನಿಜವಾದ ಕಳಕಳಿಯಾಗಲಿ ಇಲ್ಲ. ದಲಿತ ಹೋರಾಟ ಮತ್ತು ಸಂಘಟನೆಗಳನ್ನು ತಮ್ಮ ಹೊಟ್ಟೆಪಾಡಿನ ವೃತ್ತಿಯನ್ನಾಗಿಸಿಕೊಂಡು ಯಾರೋ ಬಿಸಾಕುವ ಬಿಸ್ಕಿಟಿಗೆ ಬಾಲ ಅಲ್ಲಾಡಿಸುತ್ತ



ಬದುಕುತ್ತಿದ್ದಾರೆ. ಇಂಥವರನ್ನು ದರಿದ್ರ ದಲಿತರು ಎನ್ನದೇ ಬೇರೆ ಏನೆನ್ನಬೇಕು ? ಈ ಎರಡೂ ಪ್ರಕಾರದ ದಲಿತರ ನಡುವೆ ನಿಜವಾದ ಸಾಮಾನ್ಯ ದಲಿತರು ಮೊದಲು ಎಲ್ಲಿದ್ದರೋ ಅಲ್ಲಿಯೇ ಇದ್ದಾರೆ. ಬಲಿತ ದಲಿತರಿಂದಲೂ ದರಿದ್ರ ದಲಿತರಿಂದಲೂ ಮತ್ತು ಸಾಮಾಜಿಕ ವಾತಾವರಣದಿಂದಲೂ ಅವರು ತ್ರಸ್ತರಾಗಿದ್ದಾರೆ.

**ಹೊ :** ಪ್ರಸ್ತುತ ಸಂದರ್ಭದಲ್ಲಿ ದಲಿತ ಚಳುವಳಿಯ ಜವಾಬ್ದಾರಿಯೇನು ?

**ಸಿ. ಕಾ. :** ಇಲ್ಲಿಯವರಿಗೆ ಕಲಿತು, ಒಳ್ಳೆಯ ಹುದ್ದೆಗಳಲ್ಲಿ ವಿರಾಜಮಾನವಾಗಿ ಗತ್ತುಗಾರಿಕೆಯನ್ನು ಗೊತ್ತುಗುರಿಯಿಲ್ಲದೇ ಮೆರೆಸುತ್ತಿರುವ ಪರರನ್ನು ಬಿಡಿ, ದಲಿತರಾದವರು ಏನು ಮಾಡುತ್ತಿದ್ದಾರೆ ? ಇಂದಿಗೂ ಈ ಬಲಿತ ದಲಿತರು ಮತ್ತು ದರಿದ್ರ ದಲಿತರು ಮೇಲ್ಜಾತಿ ಎನ್ನಿಸಿಕೊಂಡವರ ಪಾದ ತೊಳೆದುಕೊಂಡು ತಮ್ಮನ್ನು ತಾವು ಕೃತಾರ್ಥರಾಗುತ್ತಿದ್ದಾರೆ. ಜನನಾಯಕನಾದ ಒಬ್ಬ ದಲಿತ ರಾಜಕಾರಣಿ, ಬಸವಣ್ಣನ ದೇವಾಲಯದೊಳಗೇ ಪ್ರವೇಶ ಮಾಡುವುದಿಲ್ಲ; ತಾನು ಕೆಳಜಾತಿಯವ, ಹೊರಗೇ ಇರುತ್ತೇನೆ ಎನ್ನುತ್ತಾನೆ. ಯಾರೋ ಒಬ್ಬ ದಲಿತ ಅಧಿಕಾರಿ, ಕೋಮುವಾದಿ ಮುಖಂಡನೊಬ್ಬನನ್ನು ಆಧುನಿಕ ಬಸವಣ್ಣ, ಆಧುನಿಕ ಅಂಬೇಡ್ಕರ್ ಎಂದು ಹೊಗಳುತ್ತಾನೆ ! ಅಂದರೆ ಅವರು ಎಷ್ಟೊಂದು ಗುಲಾಮಿತನವನ್ನು ಮೈಗೂಡಿಸಿ ಕೊಂಡಿದ್ದಾರೆ ಎಂಬುದನ್ನು ಅರ್ಥ ಮಾಡಿಕೊಳ್ಳಬೇಕು. ಅವರಿಗೆ ಅವರ ಅಧಿಕಾರ, ಗದ್ದುಗೆ ಮಾತ್ರ ಮುಖ್ಯ; ಇಂಥವರೇ ಹೀಗೆ ಮಾಡಿದಾಗ ಹಿಂದಿರುವ ಅಪಾರ ಸಾಮಾನ್ಯ ದಲಿತರು ಏನು ಮಾಡಬೇಕು ? 'ಗುಡಿಸಲುಗಳು ಗುಡುಗುತ್ತಿವೆ; ಬಂಗಲೆಗಳು ನಡುಗುತ್ತಿವೆ' ಎಂದವರೇ ಬಂಗಲೆ ಸೇರಿದ ಮೇಲೆ ಗುಡಿಸಲುಗಳನ್ನು ಮರೆತರು !

ಇವರನ್ನೆಲ್ಲ ಬಿಟ್ಟು ನಿಜವಾದ ದಲಿತ ಕಾಳಜಿ ಇರುವವರು, ಡಾ॥ ಬಾಬಾಸಾಹೇಬ ಅಂಬೇಡ್ಕರ್ ಅವರನ್ನು ಸರಿಯಾಗಿ ಗ್ರಹಿಸಿದವರು, ತಳಮೂಲದ ಅರಿವನ್ನು ಇಟ್ಟುಕೊಂಡವರು ಮುಂದೆ ಬಂದು ಬಲಿತ ದಲಿತರನ್ನೂ ದರಿದ್ರ ದಲಿತರನ್ನೂ ಸರಿದಾರಿಗೆ ತರುವ ಪ್ರಯತ್ನ ಮಾಡಬೇಕು. ಇಲ್ಲವೇ ಅವರನ್ನೆಲ್ಲ ಅವರ ಪಾಡಿಗೆ ಬಿಟ್ಟು ಪರ್ಯಾಯವಾದ ದಲಿತಶಕ್ತಿಯನ್ನು ಹುಟ್ಟುಹಾಕಿ (ಹಳೆಯದು ಮರುಕಳಿಸದಂತೆ) ಡಾ॥ ಬಾಬಾಸಾಹೇಬ ಅಂಬೇಡ್ಕರ್ ಅವರು ಕಂಡ ಕನಸನ್ನು ನನಸು ಮಾಡುವತ್ತ ದಿಟ್ಟ ಹೆಜ್ಜೆ ಇಡಬೇಕು. ಅಂದಾಗ ಮಾತ್ರ ಏನಾದರೂ ಬದಲಾವಣೆ ನಿರೀಕ್ಷಿಸಬಹುದು. ಇದು ಕೋಮುವಾದ ರಾಜಕೀಯ ಬಲ ಪಡೆದ ಸಂದರ್ಭದಲ್ಲಿ ಆಗಬೇಕಾದ ಆದ್ಯತೆಯ ಕೆಲಸ. ಸಿಕ್ಕ ಸ್ವಾತಂತ್ರ್ಯವನ್ನು ಪಡೆಯಲು ದಲಿತರು ಕ್ರಮಿಸಬೇಕಾದ ಕಠಿಣ ದಾರಿ.

**ಡಾ॥ ಸಿದ್ರಾಮ ಕಾರಣಿಕ**
ಸುಹಾಸಿನಿ, ೯ನೇ ಮುಖ್ಯರಸ್ತೆ, ಕಲ್ಯಾಣನಗರ, ಧಾರವಾಡ.

## ಇಲ್ಲಿ ಸ್ವಾತಂತ್ರ್ಯ 'ಸೆರೆ'ಯಾಗಿದೆ

ಪ್ರತಿ ಮಧ್ಯಾಹ್ನ ಮೂರೂವರೆ ಹೊತ್ತಿಗೆ ಕಂಪ್ಯೂಟರ್ ಮುಂದೆ ಕೂತು ಸುದ್ದಿಯನ್ನು ಟೈಪ್ ಮಾಡುವಾಗ ನನಗೆ ಗೊತ್ತಿಲ್ಲದಂತೆಯೇ ನನ್ನ ಕೈಗಳು ನಡುಗುತ್ತವೆ. ಮನಸ್ಸು ತಳಮಳಕ್ಕೊಳಗಾಗುತ್ತದೆ. ಮೂಲ ಸುದ್ದಿಯ ಕಾಪಿಗಳನ್ನು ಹುಡುಕುವಾಗ "ದೇವರೇ, ಇವತ್ತಾದರೂ ಅಂಥ ಸುದ್ದಿ ಬಾರದಿರಲಿ" ಎಂದು ಬೇಡಿಕೊಳ್ಳುತ್ತೇನೆ. ಆದರೆ, ದೇವರು ನಿಜಕ್ಕೂ ಕರುಣಾಮಯಿ ಅಲ್ಲ ಹಾಗೂ ಅವನು ಇಲ್ಲವೇ ಇಲ್ಲ ಎಂದು ನನಗೆ ಮರುಕ್ಷಣವೇ ಗೊತ್ತಾಗುತ್ತದೆ. ಸುದ್ದಿಸಂಸ್ಥೆಯೊಂದರ ಕಾಪಿಯಲ್ಲಿ 'ಬದಾಯೂಂನಲ್ಲಿ ಮತ್ತೆ ದಲಿತ ಬಾಲಕಿಯರ ಮೇಲೆ ಸಾಮೂಹಿಕ ಅತ್ಯಾಚಾರ', 'ಪತಿಯಿಂದಲೇ ಪತ್ನಿ ಮೇಲೆ ಅತ್ಯಾಚಾರಕ್ಕೆ ಕುಮ್ಮಕ್ಕು', 'ಮರ್ಯಾದೆಗೇಡು ಹತ್ಯೆಗೆ ಯುವತಿ ಬಲಿ' ಎಂಬಂತಹ ಸುದ್ದಿಗಳು ಮೂಡತೊಡಗುತ್ತವೆ. ಈ ಸುದ್ದಿಗಳನ್ನು ಅನುವಾದಿಸುವಾಗ ನನ್ನ ಮನಸ್ಸು ಮತ್ತೆಮತ್ತೆ ಕುದಿಯತೊಡಗುತ್ತದೆ. ಸಿಟ್ಟಿನಿಂದಲೇ ಕೀಬೋರ್ಡ್ ಮೇಲೆ ಕುಟ್ಟತೊಡಗುತ್ತೇನೆ, ಅಸಹಾಯಕತೆಯಿಂದ.

ಸ್ವಾತಂತ್ರ್ಯ ಪಡೆದ ಸಂದರ್ಭದಲ್ಲಿ ನಮಗೆ ಎಷ್ಟೊಂದು ಕನಸಿತ್ತು , ಎಷ್ಟೊಂದು ನಿರೀಕ್ಷೆಗಳಿದ್ದವು ! ಸರ್ವರಿಗೂ ಸಮಬಾಳು, ಸಮಪಾಲು ಎನ್ನುವ ಧ್ಯೇಯವಾಕ್ಯ ಕೆಲವೇ ವರ್ಷಗಳಲ್ಲಿ ನನಸಾಗಿ ಎಲ್ಲರ ಬದುಕು ಹಸನಾಗುತ್ತದೆ ಎಂದುಕೊಂಡಿದ್ದೆವು. ಆದರೆ, ಸ್ವಾತಂತ್ರ್ಯ ದೊರೆತು ೬೭ ವರುಷಗಳ ಬಳಿಕ ನಮ್ಮನ್ನು ನಾವೇ ಆತ್ಮಾವಲೋಕನ ಮಾಡಿಕೊಂಡಾಗ, ಸಂತಸಕ್ಕಿಂತ ನಿರಾಶೆಯೇ ಹೆಚ್ಚಾಗಿ ಗೋಚರಿಸುತ್ತದೆ. ಹೆಣ್ಣಿನ ವಿಷಯದಲ್ಲಿ ನಮಗೆ ಸ್ವಾತಂತ್ರ್ಯ ದೊರೆತಿದೆ ಎನ್ನುವುದಕ್ಕಿಂತ ಅವಳ ವಿಷಯದಲ್ಲಿ ಸ್ವಾತಂತ್ರ್ಯ ಇನ್ನೂ 'ಸೆರೆ'ಯಾಗಿದೆ ಎಂಬುದೇ ಸೂಕ್ತ.

ಸಂವಿಧಾನ ರೂಪುಗೊಂಡ ದಿನಗಳಲ್ಲಿ ದೇಶದ ಅಭಿವೃದ್ಧಿಗೆ ಭದ್ರ ಬುನಾದಿ ಹಾಕುವ ಹೊಸ ಹೊಸ ಯೋಜನೆಗಳು ರೂಪುಗೊಂಡಿದ್ದವು. ಆ ಯೋಜನೆಗಳ ಮೂಲಕ ಇನ್ನೇನು ನಾವು ಸರ್ವರೀತಿಯಲ್ಲೂ ಅಭಿವೃದ್ಧಿ ಸಾಧಿಸಿಯೇ ಬಿಡುತ್ತೇವೆ ಎಂಬ ಒಣ ಜಂಭವೂ ಮೂಡಿತ್ತು. ಹಾಗಾದರೆ ಅಭಿವೃದ್ಧಿ ಆಗಿಲ್ಲವೇ ? ಅಭಿವೃದ್ಧಿ ಆಗಿದೆ, ನಿಜ. ಆದರೆ ಹೆಣ್ಣಿನ ವಿಷಯದಲ್ಲಿ ಅಲ್ಲ. ಅದು ಆಗಿರುವುದು ಬಂಡವಾಳಶಾಹಿಗಳ ವಿಷಯದಲ್ಲಿ, ಪುರುಷ ರಾಜಕಾರಣದ ವಿಷಯದಲ್ಲಿ, ಮತ್ತೆ ಮತ್ತೆ ಸಂಪ್ರದಾಯವನ್ನು ಪುನರುಜ್ಜೀವನಗೊಳಿಸುವ ಮನಸ್ಸುಗಳ ವಿಷಯದಲ್ಲಿ. ಹಾಗಾದರೆ ಅಭಿವೃದ್ಧಿ ಅನ್ನೋದು ಅಂತರಾಳದಲ್ಲಿ ಅಷ್ಟೊಂದು ಪಕ್ಷಪಾತಿಯೇ ? ಅದು ಹೆಣ್ಣಿನ ವಿಷಯದಲ್ಲಿ ಅಷ್ಟೊಂದು ಕ್ರೂರಿಯೇ ? ಅಭಿವೃದ್ಧಿಗೆ ತಾಯ್ತನದ ಅಂತಃಕರಣ ಇಲ್ಲವೇ ?

– ಈ ಪ್ರಶ್ನೆಗಳಿಗೆ ಉತ್ತರ ನಮ್ಮ ಕಣ್ಣೆದುರಿಗೇ ಢಾಳಾಗಿ ಗೋಚರಿಸುತ್ತದೆ. ಅದೂ ಸಕಾರಾತ್ಮಕವಾಗಿ ಅಲ್ಲ, ನಕಾರಾತ್ಮಕವಾಗಿ. ಹಾಗಾದರೆ ನಿಜವಾದ ಅಭಿವೃದ್ಧಿ ಎಂದರೇನು ?

ಖ್ಯಾತ ಅರ್ಥಶಾಸ್ತ್ರಜ್ಞ ಅಮರ್ತ್ಯ ಸೇನ್ ಹೇಳುತ್ತಾರೆ : "ಅಭಿವೃದ್ಧಿಯು ಆರ್ಥಿಕತೆಯ ಸಮೃದ್ಧಿಗಿಂತ ಮಹಿಳೆಯರನ್ನೂ ಸೇರಿಸಿಕೊಂಡು ಜನರ ಬದುಕಿನ ಸಮೃದ್ಧತೆಗೆ ಸಂಬಂಧಿಸಿದ ಸಂಗತಿ. ಅದು ಸಮಾನತೆಯ, ಸಾಮಾಜಿಕ ನ್ಯಾಯದ ಸಂಗತಿ"

ಭಾರತೀಯ ಸಮಾಜದಲ್ಲಿ ಹೆಣ್ಣನ್ನು ಪ್ರಕೃತಿಗೆ ಸಂವಾದಿಯನ್ನಾಗಿ ಮಾಡಿ ಅವಳಿಗೆ ತನ್ನದೇ ಆದ ಸಾರ್ವಜನಿಕ ವ್ಯಕ್ತಿತ್ವವೊಂದನ್ನು ರೂಪಿಸಿಕೊಳ್ಳಲು



ಅವಕಾಶವನ್ನೇ ನೀಡಿಲ್ಲ. ಇದು ಅನೇಕ ಬಗೆಯ ಲಿಂಗತಾರತಮ್ಯಗಳಿಗೆ ಕಾರಣವಾಗಿದೆ. ಹಾಗಾಗಿ, ಹೆಣ್ಣು ಆರ್ಥಿಕವಾಗಿ ಸ್ವಾತಂತ್ರ್ಯ ಪಡೆದರೂ ಸಾಮಾಜಿಕವಾಗಿ ಅವಳಿಗಿನ್ನೂ ಸ್ವತಂತ್ರ ಹಾದಿ ದೊರೆತಿಲ್ಲ. ಜಾಗತೀಕರಣ ನೀತಿಯ ಫಲವಾಗಿ ಅವಳಿಂದು ಡಾಕ್ಟರ್, ಎಂಜಿನಿಯರ್, ವಿಮಾನದ ಪೈಲಟ್ ಸಹ ಆಗಬಹುದು. ಆದರೆ, ಅದೂ ಕೂಡ ಪುರುಷ ಪ್ರಧಾನ ಯಾಜಮಾನ್ಯ, ಸಾಂಸ್ಕೃತಿಕ ಚೌಕಟ್ಟಿನಲ್ಲಿ ನಡೆದರೆ ಮಾತ್ರ. ಸಮಾಜ ಅವಳನ್ನು ಎಲ್ಲಿಯವರೆಗೆ ಕೇವಲ ಫಲಾನುಭವಿಯನ್ನಾಗಿ, ಉಪಭೋಗಿಯನ್ನಾಗಿ ನೋಡುತ್ತದೋ ಅಲ್ಲಿಯವರೆಗೆ ಅವಳಿಗೆ ಅಭಿವೃದ್ಧಿಯ ಚಾಲಕ ಶಕ್ತಿ ದೊರೆಯದು. ಎಲ್ಲಿಯವರೆಗೆ ಮಹಿಳೆಯ ಬದುಕನ್ನು ಇತರರು ಉತ್ತಮಪಡಿಸುತ್ತಿರುತ್ತಾರೋ ಅಲ್ಲಿಯವರೆಗೆ ಅವಳಿಗೆ ತನ್ನ ಬದುಕನ್ನು ತಾನೇ ಉತ್ತಮಪಡಿಸಿಕೊಳ್ಳಲು ಸಾಧ್ಯವಾಗದು. ಮಹಿಳೆ ತನ್ನ ಸ್ವಸಾಮರ್ಥ್ಯದಿಂದ ತನ್ನ ಬದುಕನ್ನು ಉತ್ತಮಪಡಿಸಿಕೊಳ್ಳಲು ಸಾಧ್ಯವಾದಾಗ ಮಾತ್ರ ನಿಜವಾದ ಸಬಲೀಕರಣ ಸಾಧ್ಯ. ಈ ಸಬಲೀಕರಣದ ಮೊದಲ ಮೆಟ್ಟಿಲಿರುವುದು ನಮ್ಮ ಶಿಕ್ಷಣ ವ್ಯವಸ್ಥೆಯಲ್ಲಿ.

ಆದರೆ, ಇಂದಿಗೂ ನಮ್ಮಲ್ಲಿ ಶೇಕಡ ನೂರಕ್ಕೆ ನೂರರಷ್ಟು ಬಾಲಕಿಯರು ಶಾಲೆಯ ಮೆಟ್ಟಿಲೇರಲು ಸಾಧ್ಯವಾಗುತ್ತಿಲ್ಲ. ಮಗ ಫೇಲಾದರೂ ಆತ ಮತ್ತೆ ಮತ್ತೆ ಪರೀಕ್ಷೆ ಬರೆದು ಪಾಸಾಗಲಿ ಎಂದು ಪೋಷಕರು ಆತನನ್ನು ಶಾಲೆಗೆ ಕಳುಹಿಸುತ್ತಾರೆ. ಆದರೆ, ಮಗಳು ಪಾಸಾದರೂ ಅವಳಿಗಿನ್ನು ಓದು ಸಾಕು ಎನ್ನುವ ಪಾಲಕರೇ ಹೆಚ್ಚು. ಇಂದಿಗೂ ನಮ್ಮ ಹಳ್ಳಿಗಳಲ್ಲಿ ಎಸ್ಸೆಸ್ಸೆಲ್ಸಿ ತನಕ ಓದಿರುವ ಬಾಲಕಿಯರು ಸಿಗುವುದು ಕಡಿಮೆ. ಹೆಚ್ಚಿನ ಓದಿಗೆ ಬೇರೆ ಊರಿಗೆ ಹೋಗಬೇಕು, ಮಗಳು ಮೈನೆರೆದಿದ್ದಾಳೆ, ಅವಳು ಓದಿ ನಮ್ಮನ್ನು ಸಾಕೋದು ಅಷ್ಟೇ ಇದೆ, ಮಗನಾದರೆ ಮುಂದೆ ಹೆತ್ತವರನ್ನು ನೋಡ್ಕೊತಾನೆ – ಎಂಬ ನಂಬಿಕೆಗಳು ಹೆಣ್ಣಿನ ಶಿಕ್ಷಣದ ಹಕ್ಕಿಗೆ ಮುಳುವಾಗುತ್ತವೆ. ಇವೆಲ್ಲದರ ನಡುವೆ ಹೆತ್ತವರು ಧೈರ್ಯ ಮಾಡಿ ಮಗಳನ್ನು ಓದಿಸಲು ಬೇರೆ ಊರಿಗೆ ಕಳುಹಿಸಲು ನಿರ್ಧರಿಸಿದರೂ, ಅವಳು ಮನೆಗೆ ಸುರಕ್ಷಿತವಾಗಿ ತಲುಪುತ್ತಾಳೆಂಬ ನಂಬಿಕೆ ಇಲ್ಲ. ಉದಾಹರಣೆಗೆ, ಕುಂದಾಪುರ ತಾಲ್ಲೂಕಿನ ಬೈಂದೂರು ಗ್ರಾಮದ ೧೭ ವರ್ಷದ ರತ್ನಾ ಕೊಠಾರಿ ಕಾಲೇಜಿಗೆ ಹೋಗಿ ವಾಪಸ್ ಬರುವಾಗ ನಾಪತ್ತೆಯಾಗಿದ್ದಳು. ಆದರೆ, ಅವಳು ಪತ್ತೆಯಾಗಿದ್ದು ಕೊಳೆತ ಶವವಾಗಿ !

ಸ್ವಾತಂತ್ರ್ಯ ದೊರೆತು ೬೭ ವರುಷಗಳು ಗತಿಸಿದ ನಂತರವೂ ನಮ್ಮ ಹೆಣ್ಣುಮಕ್ಕಳು ನಡುರಾತ್ರಿಯ ಮಾತು ಇರಲಿ, ಹಾಡುಹಗಲೇ ಸುರಕ್ಷಿತವಾಗಿರಲು ಸಾಧ್ಯವಿಲ್ಲದಂಥ ವಾತಾವರಣದಲ್ಲಿ ನಾವು ಬದುಕುತ್ತಿರುವುದು ನಿಜಕ್ಕೂ ದುರಂತ.

ಸೌಜನ್ಯ, ರತ್ನಾ ಕೊಠಾರಿಯಂತಹ ಹೆಣ್ಣುಮಕ್ಕಳು ಒಂದೆಡೆ ಅಪಹರಣಕ್ಕೊಳಗಾಗಿ, ಅತ್ಯಾಚಾರಕ್ಕೀಡಾಗಿ ಕೊಲೆಯಾದರೆ, ಮತ್ತೆ ಕೆಲ ಹೆಣ್ಣುಮಕ್ಕಳು ಹೇಳಹೆಸರಿಲ್ಲದಂತೆ ಕಾಣೆಯಾಗುತ್ತಾರೆ. ಹೀಗೆ ಕಡಿಮೆಯಾಗಿರುವ ಮಹಿಳೆಯರನ್ನು ಅಮರ್ತ್ಯ ಸೇನ್ 'ಮಿಸ್ಸಿಂಗ್ ವುಮೆನ್' ಎಂದು ಕರೆಯುತ್ತಾರೆ. ಕರ್ನಾಟಕದಲ್ಲಿ ೨೦೧೧ರಲ್ಲಿ ಹೀಗೆ ಕಾಣೆಯಾದ ಮಹಿಳೆಯರ ಸಂಖ್ಯೆ ಸುಮಾರು ೯ ಲಕ್ಷ.

ಮಲೆನಾಡಿನ ಹೆಣ್ಣುಮಕ್ಕಳ ಕಥೆ ಹೀಗಾದರೆ, ಇನ್ನು ಬಯಲುಸೀಮೆಯ ಹೆಣ್ಣುಮಕ್ಕಳ ಕಥೆಯೇ ಬೇರೆ. ದಾವಣಗೆರೆ ಜಿಲ್ಲೆ ಹರಪನಹಳ್ಳಿ ತಾಲ್ಲೂಕಿನಲ್ಲಿ ೧೦ನೇ ತರಗತಿ ಪಾಸಾಗಿದ್ದ ಬಾಲಕಿಯೊಬ್ಬಳು, ಅಕ್ಷರಸ್ಥರ ಸಮ್ಮುಖದಲ್ಲೇ ದೇವದಾಸಿಯಾಗುತ್ತಾಳೆ. ಇದನ್ನು ದೇವದಾಸಿ ವಿಮೋಚನಾ ಸಂಘಟನೆಯವರು ಗಮನಕ್ಕೆ ತಂದರೂ ಪೊಲೀಸರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಅಧಿಕಾರಿಗಳು ಮೂಕಪ್ರೇಕ್ಷಕರಾಗಿ ನಿಲ್ಲುತ್ತಾರೆ. ಹಾಗಾದರೆ ಹೆಣ್ಣಿಗೆ ಸಾಮಾಜಿಕ ಅನಿಷ್ಟಗಳಿಂದ ನಿಜಕ್ಕೂ ಬಿಡುಗಡೆ ದೊರೆತಿದೆಯೇ ?

ಇದು ಅಲ್ಪಸ್ವಲ್ಪ ಕಲಿತ ಹೆಣ್ಣುಮಕ್ಕಳ ಕಥೆಯಾದರೆ, ಇನ್ನು ಉನ್ನತ ಶಿಕ್ಷಣ ಪಡೆದ ಮಹಿಳೆಯರ ಕಥೆಯೇನೂ ಸುಖಕರವಾಗಿಲ್ಲ. ಆರ್ಥಿಕ ಸ್ವಾವಲಂಬನೆ ಅವಳಿಗೆ ಆಯ್ಕೆ, ಅಭಿವ್ಯಕ್ತಿ ಸ್ವಾತಂತ್ರ್ಯಗಳನ್ನು ನೀಡಿದೆಯಾದರೂ, ಅವಳಿಗಿನ್ನೂ ಸ್ವಂತ ನಿರ್ಧಾರ ತೆಗೆದುಕೊಳ್ಳುವ ಅವಕಾಶ ದಕ್ಕಿಲ್ಲವೆಂದೇ ಹೇಳಬಹುದು. ಕಚೇರಿಯಿರಲಿ, ಮನೆಯಿರಲಿ ಅವಳು ಇನ್ನೂ ಸ್ವತಂತ್ರವಾಗಿ ತೀರ್ಮಾನ ಕೈಗೊಳ್ಳುವ ಹಂತಕ್ಕೆ ತಲುಪಿಲ್ಲ. ಸಮಾಜ, ಸಂಸ್ಕೃತಿ, ಕೌಟುಂಬಿಕ ಮರ್ಯಾದೆಯ ಚೌಕಟ್ಟಿನಲ್ಲಿ ಇಂದಿಗೂ ಉನ್ನತಮಟ್ಟದ ಮಹಿಳಾ ಅಧಿಕಾರಿಗಳು (ಆಕೆ ಐಎಎಸ್, ಐಪಿಎಸ್ ಏನೇ ಆಗಿರಲಿ) ಸನಾತನ ಸಂಸ್ಕೃತಿಯ ವಕ್ತಾರಂತೆಯೇ ಕಾಣಿಸಿಕೊಳ್ಳುವುದರಲ್ಲಿ ಸುರಕ್ಷತೆ ಅನುಭವಿಸುತ್ತಾರೆ. ಶಾಸಕರೊಬ್ಬರ ಪತ್ನಿಯೊಬ್ಬರು ವೈದ್ಯೆ. ಆಸ್ಪತ್ರೆಯಲ್ಲಿ ಬಿಡುವಿಲ್ಲದ ಕೆಲಸಗಳ ಮಧ್ಯೆಯೂ ಆಕೆ ಮನೆಯಲ್ಲಿ ತಾನೇ ಅಡುಗೆ ಮಾಡಿ, ಗಂಡ ಮತ್ತು ಬೆಳೆದು ದೊಡ್ಡವರಾಗಿರುವ ತಮ್ಮ ಮಕ್ಕಳಿಗೆ ಬಡಿಸುತ್ತಾರೆ. ಯಾಕೆ ಹೀಗೆ ? ನಿಮಗೆ ಕಷ್ಟವಾಗುವುದಿಲ್ಲವೇ ? ಎಂದು ಪ್ರಶ್ನಿಸಿದರೆ, "ಕಷ್ಟ ಆಗುತ್ತೆ. ಆದರೆ, ನಮ್ಮತ್ತೆ ಮನೆಯಲ್ಲಿ ಸೊಸೆಯೇ ಅಡುಗೆ ಮಾಡ್ಬೇಕು ಅನ್ನೋ ನಿಯಮ. ಗಂಡಮಕ್ಕಳಿಗೆ ಅಡುಗೆ ಮಾಡಿಲ್ಲ ಅಂದರೆ ನನಗೇ ಗಿಲ್ಟ್ ಕಾಡುತ್ತೆ" ಎಂದು ಉತ್ತರಿಸುತ್ತಾರೆ ಅವರು.



ನಾನು ಮೊದಲೇ ನಿಮ್ಮ ಕೈ ನೋಡಿದ್ದರೆ, ಚುನಾವಣೆಗೆ ನಿಲ್ಲುವುದು ಬೇಡಾಂತ ಬುದ್ಧಿ ಹೇಳುತ್ತಿದ್ದೆ ಸಾರ್...!

ಹೆಣ್ಣು ಎಷ್ಟೇ ಓದಿದ್ದರೂ, ಎಷ್ಟೇ ಉನ್ನತ ಹುದ್ದೆಯಲ್ಲಿದ್ದರೂ, ಅವಳಿಗೆ ಎಷ್ಟೇ ಕಷ್ಟವಿದ್ದರೂ ಆಕೆಯೇ ಗಂಡ, ಮಕ್ಕಳಿಗೆ ಅಡುಗೆ ಮಾಡಿ ಬಡಿಸಬೇಕು ಎನ್ನುವ ನಂಬಿಕೆ ಸಮಾಜದಲ್ಲಿ ಎಷ್ಟೊಂದು ಆಳವಾಗಿ ಬೇರೂರಿದೆ ಎಂದರೆ, ಅದನ್ನು ಮಾಡದಿದ್ದಲ್ಲಿ ಹೆಣ್ಣು ಮಾನಸಿಕವಾಗಿ ಕುಗ್ಗಿಹೋಗುವ, ಗಿಲ್ಟ್ ಹೊಂದುವ ಪರಿಸರವನ್ನು ರೂಪಿಸಲಾಗಿದೆ. ಇಲ್ಲಿ ಕೇರಿಂಗ್, ಪಾಲನೆ–ಪೋಷಣೆ ಕೇವಲ ಹೆಣ್ಣಿನ ಜವಾಬ್ದಾರಿಯಾಗಿರುವುದರಿಂದ ಅದು ಲಿಂಗತಾರತಮ್ಯದ ಮೂಲ ಕಾರಣವಾಗಿದೆ. ಪಾಲನೆ–ಪೋಷಣೆಯ, ಕೇರಿಂಗ್ ಗುಣವನ್ನು ಪುರುಷರೂ ರೂಢಿಸಿಕೊಂಡಾಗ, ಸಂಪಾದನೆಯ ಗುಣವನ್ನು ಮಹಿಳೆಯರು ರೂಢಿಸಿಕೊಂಡಾಗ ಮಾತ್ರ ಅಸಮಾನತೆಯ ಮೂಲ ಕಾರಣವನ್ನು ಕಿತ್ತೆಸೆಯಲು ಸಾಧ್ಯವಾದೀತು. ಮುಖ್ಯವಾದ ವಿಷಯವೆಂದರೆ, ಮಹಿಳೆ ಸಂಪಾದಿಸುವ ಗುಣ ಬೆಳೆಸಿಕೊಂಡರೂ ಅದನ್ನು ರಾಷ್ಟ್ರೀಯ ವರಮಾನದಲ್ಲಿ ಪರಿಗಣಿಸುವಂತಾದಾಗ ಮಾತ್ರ ಆಕೆ ಅಭಿವೃದ್ಧಿಯ ಚಾಲನಾ ಶಕ್ತಿಯಾಗಿ ಗುರುತಿಸಲ್ಪಡುತ್ತಾಳೆ.

೧೯೫೦ರಲ್ಲಿ ಜಾರಿಗೆ ಬಂದ ಭಾರತ ಸಂವಿಧಾನವು ಹಲವಾರು ಮೂಲಭೂತ ಹಕ್ಕುಗಳನ್ನು ಭಾರತದ ಪ್ರಜೆಗಳಿಗೆ ಕೊಟ್ಟಿತ್ತು. ಅವುಗಳಲ್ಲಿ ಮುಖ್ಯವಾದುವೆಂದರೆ : ಸ್ವಾತಂತ್ರ್ಯ, ಸಮಾನತೆ, ಬದುಕುವ ಹಕ್ಕು ಮತ್ತು ಲಿಂಗ ಸಮಾನತೆ. ಪ್ರಗತಿಪರ, ಸಮಾಜವಾದಿ, ಪ್ರಜಾಪ್ರಭುತ್ವವಾದಿ ರಾಷ್ಟ್ರವನ್ನು ಕಟ್ಟುವ ಕನಸನ್ನು ಅಂದಿನ ನಾಯಕರು ಕಂಡಿದ್ದರು. ಅದನ್ನು ನನಸು ಮಾಡಲು ಪಣ ತೊಟ್ಟು ಸಂವಿಧಾನವನ್ನು ರೂಪಿಸಿದ್ದರು. ಆದರೆ, ಇಂದು ಸಂವಿಧಾನದ ಮೂಲ ಆಶೋತ್ತರಗಳಿಗೇ ತಿಲಾಂಜಲಿ ನೀಡುವ ಘಟನೆಗಳು ನಡೆಯುತ್ತಿವೆ.

ಇತ್ತೀಚೆಗಷ್ಟೇ ವಿಶ್ವ ಆರೋಗ್ಯ ಸಂಸ್ಥೆ ನೀಡಿರುವ ವರದಿಯಲ್ಲಿ ಭಾರತದಲ್ಲಿ ೫ ವರ್ಷದೊಳಗಿನ ಮಗು ಮತ್ತು ತಾಯಂದಿರ ಮರಣ ಸಂಖ್ಯೆ ಇಡೀ ಜಗತ್ತಿನಲ್ಲೇ ಹೆಚ್ಚಾಗಿದೆ. ಅಷ್ಟೇ ಅಲ್ಲ, ಅಪೌಷ್ಟಿಕತೆ ಮತ್ತು ರಕ್ತಹೀನತೆಯಿಂದ ಬಳಲುವ ಮಹಿಳೆಯರ ಸಂಖ್ಯೆಯೂ ನಮ್ಮಲ್ಲಿ ಹೆಚ್ಚಿದೆ. ಅದರಲ್ಲೂ ದೇಶದ ಶೇಕಡ ೩೫ರಿಂದ ೪೦ರಷ್ಟು ಗರ್ಭಿಣಿಯರು ರಕ್ತಹೀನತೆಯಿಂದ ಬಳಲುತ್ತಾರೆ ಎಂದು ವರದಿಯೊಂದರ ಅಂಕಿಅಂಶಗಳೇ ತಿಳಿಸುತ್ತವೆ.

ಸ್ವಾತಂತ್ರ್ಯ ಪಡೆದು ೬೭ ವರ್ಷಗಳಾದರೂ ದೇಶದ ಜನಸಂಖ್ಯೆಯ ಅರ್ಧದಷ್ಟಿರುವ ಮಹಿಳೆಯರ ಆರೋಗ್ಯದಲ್ಲಿ ಗಣನೀಯವಾಗಿ ಸುಧಾರಣೆಯಾಗ ಬೇಕಿತ್ತು. ಆದರೆ, ದಿನೇದಿನೇ ಅನಾರೋಗ್ಯದಿಂದ ಬಳಲುತ್ತಿರುವ ಮಹಿಳೆಯರ ಸಂಖ್ಯೆ ಗಣನೀಯವಾಗಿ ಏರುತ್ತಿರುವುದು ಮಹಿಳಾ ವಿರೋಧಿ ಅಭಿವೃದ್ಧಿ ಮೀಮಾಂಸೆಗೆ ಹಿಡಿದ ಕನ್ನಡಿಯಾಗಿದೆ. ಮಹಿಳೆಯರ ದೈಹಿಕ–ಮಾನಸಿಕ ಆರೋಗ್ಯ ಸಂವರ್ಧಿಸುವ ಕಾರ್ಯಕ್ರಮಗಳನ್ನು ರೂಪಿಸಬೇಕಾದ ಸರ್ಕಾರವು ಸರ್ದಾರ್ ವಲ್ಲಭಭಾಯಿ ಪಟೇಲ್ ಅವರ ಮೂರ್ತಿ ಸ್ಥಾಪನೆಗೆ ಬಜೆಟ್‌ನಲ್ಲಿ ರೂ. ೨೦೦ ಕೋಟಿ ಮೀಸಲಿಟ್ಟು, ಮಹಿಳಾ ಅಭಿವೃದ್ಧಿಗೆ ಕೇವಲ ರೂ. ೧೦೦ ಕೋಟಿ ಮೀಸಲಿಡುವ ಮೂಲಕ ಮಹಿಳೆ ಎರಡನೇ ದರ್ಜೆ

ಪ್ರಜೆಯೆಂದು ಘಂಟಾಘೋಷವಾಗಿ ಸಾರುತ್ತದೆ. ಪ್ರಜಾಪ್ರಭುತ್ವದ ಮೂಲ ಆಶಯಗಳಿಗೆ ತದ್ವಿರುದ್ಧವಾಗಿ ಆಳುವ ಸರ್ಕಾರಗಳೇ ಲಿಂಗ ತಾರತಮ್ಯ ನೀತಿಗಳನ್ನು ಕಣ್ಣಿಗೆ ರಾಚುವಂತೆ ರೂಪಿಸುತ್ತಿರುವಾಗ ನಿಜಕ್ಕೂ ಮಹಿಳೆಗೆ ಸ್ವಾತಂತ್ರ್ಯ ದಕ್ಕಿಲ್ಲವೆಂದೇ ಹೇಳಬಹುದು. ಹಾಗಾಗಿ, ಅವಳಿಗಿನ್ನೂ ನಿಜದ ನೆಲೆಯ ಸ್ವಾತಂತ್ರ್ಯವು ಮರೀಚಿಕೆಯಾಗಿ, ಪುರುಷ ಯಾಜಮಾನ್ಯ ಆಡಳಿತದಲ್ಲಿ 'ಸೆರೆ'ಯಾಗಿ ಇದೆಯೆಂದೇ ಹೇಳಬೇಕಾಗುತ್ತದೆ. ಅವಳ ಬಿಡುಗಡೆಯ ಹಾದಿಯನ್ನು ಅವಳೇ ಕಂಡುಕೊಳ್ಳುವ ತನಕ ನಮ್ಮ ಸ್ವಾತಂತ್ರ್ಯಕ್ಕೆ ಅರ್ಥ ದೊರೆಯದು.

**ಡಾ|| ಮಂಜುಶ್ರೀ ಎಂ. ಕಡಕೋಳ**
ಪತ್ರಕರ್ತೆ, ನಂ. ೭, ಮೊದಲನೇ ಮಹಡಿ, ೧೫ನೇ ಅಡ್ಡರಸ್ತೆ
೪ನೇ ಮುಖ್ಯರಸ್ತೆ, ಸಂಪಂಗಿರಾಮನಗರ, ಬೆಂಗಳೂರು – ೫೬೦ ೦೨೭

# ಸ್ವಾತಂತ್ರ್ಯವನ್ನು ನಿಜಾರ್ಥದಲ್ಲಿ ಜನಪರಗೊಳಿಸಬೇಕಿದೆ

ಸ್ವಾತಂತ್ರ್ಯ ಅನ್ನೋದು ಒಂದು ಅತ್ಯಂತ ಸಹಜ ಸ್ಥಿತಿ. ಧರೆಯ ಮೇಲಿನ ಅಷ್ಟೂ ಜೀವಿಗಳು ಮೂಲತಃ ಸ್ವತಂತ್ರವೇ. ಆದರೆ ಅವುಗಳನ್ನು ಬಾಹ್ಯ ಶಕ್ತಿಯೊಂದು ತನ್ನ ಅಧೀನಕ್ಕೆ ಒಳಪಡಿಸುವಂತಹ ಕ್ರಿಯೆ ಮಾತ್ರ ಪ್ರಕೃತಿ ನಿಯಮಗಳಿಗೆ ವಿರುದ್ಧವಾದ ಒಂದು ಕೃತ್ರಿಮ ಆಚರಣೆಯಾಗಿರುತ್ತದೆ. ಸಹಜ ಸ್ವಾತಂತ್ರ್ಯದ ಸ್ಥಿತಿಯು ಜೀವಿಗಳ ಅಸ್ತಿತ್ವದ ಪರಿಪೂರ್ಣತೆಗೆ ಅನಿವಾರ್ಯವಾದ ಒಂದು ಅವಶ್ಯಕತೆಯಾಗಿರುತ್ತದೆ. ಹೀಗಾಗಿ ತಮ್ಮ ಸಹಜತೆಗೆ ವಿರುದ್ಧವಾಗಿ 'ಹೇರಲ್ಪಟ್ಟ' ಕಟ್ಟುಪಾಡುಗಳನ್ನು ಧಿಕ್ಕರಿಸಿ ಮತ್ತೆ ಮತ್ತೆ ಸ್ವಾತಂತ್ರ್ಯದ ಪಥಕ್ಕೆ ಹೊರಳಲು ಮನುಷ್ಯನೂ ಸೇರಿದಂತೆ ಸೃಷ್ಟಿಯ ಅಷ್ಟೂ ಜೀವಿಗಳು ಚಡಪಡಿಸುತ್ತಲೇ ಇರುತ್ತವೆ.

ಭಾರತದ ಸ್ವಾತಂತ್ರ್ಯ ಆಂದೋಲನವೂ ಕೂಡ ಕೃತ್ರಿಮತೆಯಿಂದ ಸಹಜತೆಯೆಡೆಗಿನ ಚಲನೆಯನ್ನು ಪ್ರತಿನಿಧಿಸುತ್ತದೆ. ಬ್ರಿಟಿಷ್ ಪ್ರಭುತ್ವವು ಹೇರಿದ್ದ ವಸಾಹತುಶಾಹಿ ಅಧೀನತೆಯ ವಿರುದ್ಧ ಸೃಷ್ಟಿಯಾದ ಪ್ರತಿರೋಧದ ವಿವಿಧ ಕವಲುಗಳು ಸ್ವಾತಂತ್ರ್ಯ ಎಂಬುದು ನಿಗ್ರಹಿಸಲಾಗದ ಒಂದು ಜೈವಿಕ ವಾಂಛೆ ಎಂಬುದನ್ನು ಸಾಬೀತು ಪಡಿಸಿದ್ದವು. ಇದು ಸ್ವಾತಂತ್ರ್ಯವನ್ನು ಒಂದು ಘಟನೆಯಾಗಿ ಸ್ವೀಕರಿಸದೆ ಪ್ರಕ್ರಿಯೆಯಾಗಿ ಗ್ರಹಿಸಬೇಕು ಎಂಬ ಅಂಶವನ್ನು ಸ್ಪಷ್ಟಪಡಿಸುತ್ತದೆ. ಏಕೆಂದರೆ, ಜೀವಪರಿಸರದಲ್ಲಿ ವಿವಿಧ ಘಟಕಗಳ ನಡುವಣ ಸಂಕೀರ್ಣ ಸಂಬಂಧಗಳು ಮತ್ತೆ ಮತ್ತೆ ಸಹಜ ಸ್ವಾತಂತ್ರ್ಯದ ನಿರಂತರತೆಗೆ ಅಡ್ಡಿ, ಆತಂಕಗಳನ್ನು ಸೃಷ್ಟಿಸುತ್ತಲೇ ಇರುತ್ತವೆ.

ವಸಾಹತುಶಾಹಿ ಪ್ರಭುತ್ವದ ವಿರುದ್ಧ ಭಾರತದಲ್ಲಿ ನಡೆದ ಪ್ರತಿರೋಧ ಪುರೋಗಾಮಿ ನೆಲೆಯಲ್ಲಿ ರೂಪುಗೊಂಡ ಒಂದು ಪ್ರಬಲ ಜನಾಂದೋಲನವಾಗಿತ್ತು. ಆಧುನಿಕ ಜಗತ್ತಿನಲ್ಲಿ ಆಗಷ್ಟೇ ಪ್ರವರ್ಧಮಾನಕ್ಕೆ ಬರುತ್ತಿದ್ದ ಪ್ರಗತಿಪರ ಚಿಂತನೆಗಳು ಸ್ವಾತಂತ್ರ್ಯ ಹೋರಾಟದ ಪ್ರೇರಕ ಅಂಶಗಳಾಗಿದ್ದವು. ಸಮಾಜವಾದ, ರಾಷ್ಟ್ರೀಯತೆ, ಪ್ರಜಾಪ್ರಭುತ್ವ, ಸ್ವಾತಂತ್ರ್ಯ, ಸಮಾನತೆ, ಹಕ್ಕುಗಳು ಇವೇ ಮೊದಲಾದ ರಾಜಕೀಯ ಸಿದ್ಧಾಂತಗಳು ಜನರಲ್ಲಿ ಹೊಸ ಚೈತನ್ಯ ತುಂಬಿದ್ದವು. ಒಂದೆಡೆ, ಬ್ರಿಟಿಷ್ ವ್ಯವಸ್ಥೆ ಹೇರಿದ್ದ ವರ್ತಮಾನದ ಕೃತ್ರಿಮತೆಯಿಂದ ವಿಮೋಚನೆ. ಇನ್ನೊಂದೆಡೆ, ಪಡೆಯಲಿರುವ ಸಹಜ ಸ್ವಾತಂತ್ರ್ಯದ ನಿರ್ವಹಣೆಯ ಚಿಂತನೆಗಳು – ಇವೆರಡೂ ಕ್ರಿಯೆಗಳು ಏಕಕಾಲದಲ್ಲಿ ನಡೆಯುತ್ತಿದ್ದುದು ಸ್ವಾತಂತ್ರ್ಯದ ಖಾತರಿಗೆ, ಅದರ ನಿರಂತರತೆಗೆ ಅನಿವಾರ್ಯವಾಗಿದ್ದ ವೇದಿಕೆಯನ್ನು ಸಿದ್ಧಪಡಿಸಿದ್ದವು.

ಸ್ವಾತಂತ್ರ್ಯ ಗಳಿಕೆಯ ತರುವಾಯದಲ್ಲಿ ಇಡೀ ಆಂದೋಲನವು ಮಥಿಸಿದ್ದ ಆಶಯಗಳನ್ನು ಮುಂದಿನ ಪೀಳಿಗೆಗೆ ವರ್ಗಾಯಿಸುವ ಪ್ರಕ್ರಿಯೆಯಲ್ಲಿ ಅಂದಿನ ನಾಯಕತ್ವವು ಸಾಧಿಸಿದ ಯಶಸ್ಸು ಬಹಳ ಮಹತ್ವವಾದದ್ದು. ಅಂತಹ ಐತಿಹಾಸಿಕ ಪ್ರಯತ್ನಗಳ, ಪರಿಶ್ರಮದ ಮೂರ್ತರೂಪವೇ ಸಂವಿಧಾನ. ಸ್ವಾತಂತ್ರ್ಯ ಹೋರಾಟವನ್ನು ಮುನ್ನಡೆಸಿದ್ದ ಸಮಾನತೆ, ಮುಕ್ತತೆ ಹಾಗೂ ನ್ಯಾಯದ ಆಶಯಗಳ ಸಾಧನೆಗೆ ಪೂರಕವಾದ ಚೌಕಟ್ಟನ್ನು ಸಂವಿಧಾನವು ಒದಗಿಸಿದೆ. ಈ ನೆಲೆಯಲ್ಲಿ ಅದು ವರ್ತಮಾನದ ಸಾಧನೆಗಳ ಮೌಲ್ಯಮಾಪನದ ಮಹತ್ವದ ಮಾನದಂಡವೂ ಆಗಿದೆ.

*　　*　　*

ಸ್ವಾತಂತ್ರ್ಯವನ್ನು ಗಳಿಸಿ ಇಂದಿಗೆ ಹಲವು ದಶಕಗಳೇ ಕಳೆದಿವೆ. ಇಂತಹ ಸಂದರ್ಭದಲ್ಲಿ ಅದರ ನಿರ್ವಹಣೆಯ ಕುರಿತಂತೆ ಸಹಜವಾಗಿಯೇ ಹಲವು ಪ್ರಶ್ನೆಗಳು ಮೂಡಿಬರುತ್ತವೆ. ಅಂದಿನ ಕನಸುಗಳು ಹಾಗೂ ಇಂದಿನ ವಾಸ್ತವ ಇವೆರಡರ ಸಮೀಕರಣದಲ್ಲಿ ಗುರಿ–ಸಾಧನೆಯ ಸಂಬಂಧಗಳಿವೆಯೆ ? ಸ್ವಾತಂತ್ರ್ಯ ಆಂದೋಲನವನ್ನು ಮುನ್ನಡೆಸಿದ್ದ ಒಂದು ಪೀಳಿಗೆಯ ಪ್ರಜ್ಞಾ ಸ್ವರೂಪಿ ಸಂವಿಧಾನದ ಉದಾತ್ತ ಆಶಯಗಳು ಆಚರಣೆಗೆ ಬಂದಿವೆಯೆ ? ಅಥವಾ ಪರಾಧೀನತೆಯ ಕೃತ್ರಿಮ ಲಕ್ಷಣಗಳು ಮರೆಯಾಗಿ ಅದರ ಸ್ಥಾನದಲ್ಲಿ ಸಹಜ ಸ್ವಾತಂತ್ರ್ಯವು ಪ್ರತಿಷ್ಠಾಪನೆಯಾಗಿದೆಯೆ ? ಇಂತಹ ಪ್ರಶ್ನೆಗಳು ಮುಂದಣ ಹೆಜ್ಜೆಗಳನ್ನು ಅರಿಯಲು ಅವಶ್ಯಕ.

ಭಾರತದ ಸ್ವಾತಂತ್ರ್ಯ ಆಂದೋಲನದ ಮುಖ್ಯವಾಹಿನಿಯ ಚಿಂತನೆ ಇದ್ದದ್ದು ವ್ಯವಸ್ಥಾತ್ಮಕ ಬದಲಾವಣೆಯ ಬಗ್ಗೆ. ಹೋರಾಟದ ಆರಂಭದಲ್ಲಿ ಕೇವಲ ರಾಜಕೀಯ ಸ್ವಾತಂತ್ರ್ಯದ ಕುರಿತಂತೆ ನಿರ್ದಿಷ್ಟತೆಯಿದ್ದರೆ, ಇಪ್ಪತ್ತನೆಯ ಶತಮಾನದ ಆದಿ ಭಾಗದಲ್ಲಿ ಸಮಾಜವಾದಿಗಳ ಪ್ರಭಾವದಿಂದ ಆರ್ಥಿಕ ಸ್ವಾತಂತ್ರ್ಯದ ಅಂಶಗಳೂ ಸೇರ್ಪಡೆಯಾದವು. ಜೊತೆಗೆ ಮುಖ್ಯವಾಹಿನಿಯ ಜನಾಂದೋಲನದ ಎಕ್ಸ್ಕ್ಲೂಸಿವಿಟಿಯ ವಿರುದ್ಧ ಟೀಕೆಯ ರೂಪದಲ್ಲಿ ಅಂಬೇಡ್ಕರ್, ನಾರಾಯಣಗುರು ಮೊದಲಾದ ಚಿಂತಕರ ಅವಿರತ ಪ್ರಯತ್ನಗಳ ಫಲವಾಗಿ ಸಾಮಾಜಿಕ ವಿಮೋಚನೆಯ ಅಂಶಗಳೂ ಕೂಡ ಸ್ವಾತಂತ್ರ್ಯದ ಬಗೆಗಿನ ಚರ್ಚೆಗಳಲ್ಲಿ ಸೇರಿಕೊಂಡವು. ಈ ಮೂರೂ ಧಾರೆಯ ವ್ಯವಸ್ಥಾತ್ಮಕ ಬದಲಾವಣೆಗಳು ಸಂಗಮಿಸಿದ್ದು ಸಂವಿಧಾನ ರಚನೆಯಲ್ಲಿ. ಅದು ಈಗ ಇತಿಹಾಸ.

ಆದರೆ ಪ್ರಸ್ತುತ ವರ್ತಮಾನದ ಬಹಳ ಮಹತ್ವದ ಪ್ರಶ್ನೆ ನಮ್ಮ ವ್ಯವಸ್ಥೆ ತನಗೆ ಪ್ರದತ್ತವಾಗಿರುವ ಸ್ವಾತಂತ್ರ್ಯವನ್ನು ಯಾವ ರೀತಿಯಾಗಿ ನಿರ್ವಹಿಸಿದೆ ಎಂಬುದು. ಇಲ್ಲಿ ಮೇಲುನೋಟಕ್ಕೆ ಬಹಳ ಉತ್ತೇಜಕ ಅಂಶಗಳು ಕಾಣಸಿಗುತ್ತವೆ. ಅವೆಂದರೆ, ರಾಜಕೀಯವಾಗಿ ಭಾರತ ವಿಶ್ವದ ಅತೀ ದೊಡ್ಡ ಪ್ರಜಾಪ್ರಭುತ್ವ ಇರುವ ರಾಷ್ಟ್ರ. ಅದು ಏಶಿಯಾ, ಲ್ಯಾಟಿನ್ ಅಮೆರಿಕಾ ಹಾಗೂ ಆಫ್ರಿಕಾದ ರಾಷ್ಟ್ರಗಳಲ್ಲಿ ಕಂಡುಬರುವಂತಹ ರಾಜಕೀಯ ಅಸ್ಥಿರತೆಗಳಿಂದ ಮುಕ್ತವಾಗಿದೆ. ಚುನಾವಣೆಗಳು ಮತ್ತು ಅಧಿಕಾರದ ವರ್ಗಾವಣೆ ಸುಗಮವಾಗಿ ನಡೆಯುತ್ತವೆ. ಪ್ರಜಾಸತ್ತಾತ್ಮಕ ಸಂಸ್ಥೆಗಳು ಪ್ರಬುದ್ಧವಾಗಿ ಬೆಳೆದಿವೆ. ಹಾಗೆಯೇ ಅರ್ಥವ್ಯವಸ್ಥೆಯೂ ಸಹ ಭಾರತದ್ದು ಟ್ರಿಲಿಯನ್ ಡಾಲರ್ ಅರ್ಥವ್ಯವಸ್ಥೆ. ವಿಶ್ವದ, ಪ್ರಭಾವಿ ಪ್ರವರ್ಧಮಾನಕ್ಕೆ ಬರುತ್ತಿರುವ ರಾಷ್ಟ್ರ. ಇಂತಹ ಇನ್ನೂ ಹಲವು ವಿಶೇಷಣೆಗಳು ಮುಖ್ಯವಾಹಿನಿಯ ಮಾಧ್ಯಮಗಳಲ್ಲಿ ದಂಡಿಯಾಗಿ ಸಿಗುತ್ತವೆ.

ದುರದೃಷ್ಟವಶಾತ್ ವಾಸ್ತವದಲ್ಲಿ ಈ ಎಲ್ಲಾ ಅಂಶಗಳು ಪ್ರತಿನಿಧಿಸುವುದು ಕೇವಲ ಅರ್ಧಸತ್ಯವನ್ನಷ್ಟೆ. ಮತ್ತು ಅದನ್ನೇ ಮುಂದಿಟ್ಟುಕೊಂಡು "ಭಾರತ ಪ್ರಕಾಶಿಸುತ್ತಿದೆ" ಎಂದೋ ಅಥವಾ "ಭಾರತ ನಿರ್ಮಾಣವಾಗುತ್ತಿದೆ" ಎಂದು ಬೊಬ್ಬಿಡುವ ಪಂಥಗಳೂ ನಮ್ಮಲ್ಲಿವೆ. ಅವುಗಳಿಗೆ ಅದು ಅನಿವಾರ್ಯ ಕೂಡ. ಆದರೆ ಅಂತಹ ಪಿತೂರಿಗಳು ನಿರ್ಮಿಸಿದ ಬಣ್ಣದ ಪರದೆಯನ್ನು ಸರಿಸಿ ನೋಡಿದಾಗ ಕಂಡುಬರುವ ಚಿತ್ರಣವೇ ಭಿನ್ನವಾದದ್ದು. ಸಂವಿಧಾನದ ಆಶಯದ ವ್ಯವಸ್ಥೆಗೆ



ವಿರುದ್ಧವಾಗಿ ಎದ್ದುನಿಂತ ಪ್ರತಿವ್ಯವಸ್ಥೆಗಳು ಅಲ್ಲಿ ನಮಗೆ ಕಾಣಸಿಗುತ್ತವೆ. ಭ್ರಷ್ಟತೆ, ದೌರ್ಜನ್ಯಗಳಿಂದ ಕೂಡಿದ ಅಸಹಜತೆಯು ಎದುರಾಗುತ್ತದೆ. ಪ್ರತಿ ವ್ಯವಸ್ಥೆಗಳ ಪಿತೂರಿಗಳ ವ್ಯಾಪ್ತಿಯ ಪರಿಚಯವಾಗುತ್ತದೆ. ಪ್ರಜಾಪ್ರಭುತ್ವವು ಕಾರ್ಪೊರೇಟ್ ಸ್ವರೂಪ ಪಡೆದುಕೊಂಡ ಸೂಚನೆಗಳು ನಮಗೆ ಕಾಣಸಿಗುತ್ತವೆ.

ನಲವತ್ತೇಳರ ಸ್ವಾತಂತ್ರ್ಯದ ಪೂರ್ಣ ಸಾಕ್ಷಾತ್ಕಾರದ ಹಾದಿಯಲ್ಲಿ ಅಡ್ಡಲಾಗಿ ನಿಂತಿರುವುದು ಕಾರ್ಪೊರೇಟ್ ವ್ಯವಸ್ಥೆ. ವ್ಯಕ್ತಿಯ ಜೀವನದ ಅಷ್ಟೂ ಕ್ಷೇತ್ರಗಳನ್ನು ವ್ಯಾಪಿಸುತ್ತ, ನಿಯಂತ್ರಿಸುತ್ತ ಅದು ಇಡೀ ವ್ಯವಸ್ಥೆಯನ್ನು ತನ್ನ ಅಂಕೆಗೆ ತೆಗೆದುಕೊಳ್ಳುತ್ತಿದೆ. ಭ್ರಮೆಗಳನ್ನು ಸೃಷ್ಟಿಸುತ್ತಲೇ ಅವುಗಳನ್ನೇ ವಾಸ್ತವವೆಂಬಂತೆ ಬಿಂಬಿಸಿ ವ್ಯಕ್ತಿ ಹಾಗೂ ಸಮುದಾಯ ಗಳನ್ನು ಹಿಡಿತದಲ್ಲಿಟ್ಟುಕೊಳ್ಳುವ ಅದರ ಕ್ರಮ ಪೂರ್ಣ ಸ್ವಾತಂತ್ರ್ಯದ ಸಾಧನೆಗೆ ತದ್ವಿರುದ್ಧವಾದದ್ದು.

ಯಾವುದೇ ವ್ಯವಸ್ಥೆಯ ಸ್ವಾತಂತ್ರ್ಯೋತ್ತರ ಕಾಲಘಟ್ಟದ ಬಹುಮುಖ್ಯ ಚಟುವಟಿಕೆಯು 'ಅಭಿವೃದ್ಧಿ' ಆಗಿರುತ್ತದೆ. ಅದು ಗಳಿಕೆಯಾದ ಸ್ವಾತಂತ್ರ್ಯದ ನಿರಂತರತೆಗೆ ಅನಿವಾರ್ಯವಾದ ಕ್ರಿಯೆಯಾಗಿರುತ್ತದೆ. ಆದರೆ ಭಾರತದಲ್ಲಿ ಕಾರ್ಪೊರೇಟ್ ವ್ಯವಸ್ಥೆ 'ಅಭಿವೃದ್ಧಿ'ಯ ಪರಿಕಲ್ಪನೆಯನ್ನೇ ಹೈಜ್ಯಾಕ್ ಮಾಡಿದೆ. ಒಂದೆಡೆ ಬಡವರ ಭೂಮಿ, ಪರಿಸರ, ಸಂಸ್ಕೃತಿ ಹಾಗೂ ಶ್ರಮ ಮೊದಲಾದವುಗಳನ್ನು ಆಕ್ರಮಿಸುತ್ತಿದ್ದರೆ ಇನ್ನೊಂದೆಡೆ ಅವರ ಏಳಿಗೆಗೆ ಅವಶ್ಯಕವಾಗಿರುವ ಶಿಕ್ಷಣ, ಉದ್ಯೋಗ ಅಥವಾ ಆರೋಗ್ಯದ ಹಕ್ಕುಗಳು ಮತ್ತು ಸಬ್ಸಿಡಿಯೇ ಮೊದಲಾದ ಕಲ್ಯಾಣ ಕಾರ್ಯಕ್ರಮಗಳನ್ನು ಆರ್ಥಿಕ ಅಪಚಾರ, ಅನ್‌ಎಕಾನಾಮಿಕ್ ಎಂಬುದಾಗಿ ಚಿತ್ರಿಸಿ, ಇನ್ನಿಲ್ಲದ ಅಪಪ್ರಚಾರ ನೀಡಿ ಅವುಗಳ ನಿಲುಗಡೆಗೆ ಲಾಬಿ ನಡೆಸುತ್ತಿದೆ. ಮಾತ್ರವಲ್ಲದೆ, ಅಂತಹ ಎಲ್ಲಾ ಸೇವೆಗಳ ಪೂರೈಕೆಗೆ ತನ್ನನ್ನೇ ನಿಯೋಜಿಸುವಂತೆ ಒತ್ತಡ ಹೇರುತ್ತಿದೆ. ಫೈವ್ ಸ್ಟಾರ್ ಸ್ಕೂಲು, ಆಸ್ಪತ್ರೆ ಮೊದಲಾದವುಗಳನ್ನು ನಿರ್ಮಿಸಿ ಬಡವರನ್ನು ಹೊರಗಿಡುವ ಕುತಂತ್ರ ಅದಕ್ಕೆ ಯಾವತ್ತೋ ಸಿದ್ಧಿಸಿಬಿಟ್ಟಿದೆ.

ಕಾರ್ಪೊರೇಟ್ ವ್ಯವಸ್ಥೆಯ ತಾಕತ್ತಿನ ಮೂಲವೆಂದರೆ ಅದರ ರಾಜಕಾರಣ ಹಾಗೂ ಮಾಧ್ಯಮ ಕ್ಷೇತ್ರದ ಮೇಲೆ ಅದು ಹೊಂದಿರುವ ನಿಯಂತ್ರಣ. ರಾಜಕಾರಣ ನೀತಿಯು ರೂಪಣಾ ಘಟಕವಾದರೆ ಮಾಧ್ಯಮವು ಅಂತಹ ನೀತಿಗಳ ಅನುಷ್ಠಾನಕ್ಕೆ ಕಾರಣವಾಗುವ ಒತ್ತಡ ಹೇರುವ ಮೂಲಕ ಜನಾಭಿಪ್ರಾಯವನ್ನು ಸಂಚಯಿಸುವ ಮಹತ್ವದ ಅಂಗವಾಗಿದೆ. ಇವೆರಡನ್ನೂ ತನ್ನ ಅಂಕೆಯಲ್ಲಿಟ್ಟುಕೊಂಡು ಕಾರ್ಪೊರೇಟ್ ವಲಯವು ಮುನ್ನಡೆಯುತ್ತಿದೆ. ನೀರಾ ರಾಡಿಯಾ ಟೇಪುಗಳು ಅಥವಾ ಕಳೆದ ಲೋಕಸಭಾ ಚುನಾವಣೆಯಲ್ಲಿ ಅದು ವ್ಯಯಿಸಿದ ಹಣ ಮತ್ತು ನೆಟ್‌ವರ್ಕ್ ೧೮ ಮಾಧ್ಯಮ ಸಮೂಹದಲ್ಲಿ ಅಂಬಾನಿ ನೇತೃತ್ವದ ರಿಲಯನ್ಸ್ ಉದ್ಯಮದ ಹೂಡಿಕೆ ಮೊದಲಾದ ಇತ್ತೀಚಿನ ವಿದ್ಯಮಾನಗಳು ಅಂತಹ ಪ್ರವೃತ್ತಿಗಳನ್ನೇ ಸಂಕೇತಿಸುತ್ತದೆ. ಇದು ವ್ಯಕ್ತಿಯ ಧ್ವನಿ ಹಾಗೂ ಕ್ರಿಯೆಯ ಶಕ್ತಿಯನ್ನು ಪೂರ್ಣವಾಗಿ ಮಿತಗೊಳಿಸುತ್ತದೆ.



ವ್ಯಕ್ತಿಸ್ವಾತಂತ್ರ್ಯದ ದಮನದ ಕಾರ್ಯದಲ್ಲಿ ಕಾರ್ಪೊರೇಟ್ ವ್ಯವಸ್ಥೆಗೆ ಪೂರಕವಾಗಿ ಕಾರ್ಯ ನಿರ್ವಹಿಸುತ್ತಿರುವುದು ಸಾಂಸ್ಕೃತಿಕ ಯಜಮಾನಿಕೆ. ಧರ್ಮವನ್ನಾಶ್ರಯಿಸಿ ಬೆಳೆಯುತ್ತಿರುವ ಅದು ಮತಮಾನ್ಯಗಳ ಮೂಲಕ, ತೀವ್ರವಾದಿ ಧರ್ಮರಕ್ಷಕ ಸಂಘಟನೆಗಳ ಮೂಲಕ ಸಮಾಜದ ನಡಾವಳಿಯಲ್ಲಿ ಪ್ರತಿಗಾಮಿತ್ವವನ್ನು ಅನುಷ್ಠಾನಕ್ಕೆ ತರುತ್ತಿದೆ. ಒಂದೆಡೆ ಅದು ಜನಗಳ ಆಯ್ಕೆಯ ಸ್ವಾತಂತ್ರ್ಯವನ್ನು ನಿಯಂತ್ರಿಸುತ್ತಿದ್ದರೆ, ಇನ್ನೊಂದೆಡೆ ಅನ್ಯ ಆಚರಣೆಗಳಲ್ಲಿ ಶತ್ರುವಿನ ಛಾಯೆಯನ್ನು ಸೃಷ್ಟಿಸಿ, ಆ ಮೂಲಕ ಬಡಜನರನ್ನು ಪ್ರಚೋದಿಸಿ ಹಿಂಸೆಗಿಳಿಯುವಂತೆ ಮಾಡುತ್ತಿದೆ. ಹೆಚ್ಚುತ್ತಿರುವ ನೈತಿಕ ಪೊಲೀಸಿಂಗ್ ಅಥವಾ ಮರ್ಯಾದಾ ಹತ್ಯೆಯಂತಹ ಪ್ರಕರಣಗಳು ಸಾಂಸ್ಕೃತಿಕ ಯಜಮಾನಿಕೆಯು ವರ್ತಮಾನದಲ್ಲಿ ಬಲಗೊಳ್ಳುತ್ತಿರುವುದನ್ನು ಸಂಕೇತಿಸುತ್ತಿವೆ.

* * *

ನಲವತ್ತೇಳರ ವಿದ್ಯಮಾನದ ಫಲವಾಗಿ ನಮಗೆ ದೊರಕಿದ್ದು ಕೇವಲ ರಾಜಕೀಯ ಸ್ವಾತಂತ್ರ್ಯ. ಅದನ್ನೇ ಮಾಧ್ಯಮವಾಗಿಟ್ಟುಕೊಂಡು ಆರ್ಥಿಕ ಹಾಗೂ ಸಾಮಾಜಿಕ ವಿಮೋಚನೆಯನ್ನು ಸಾಧಿಸುವ ಚೌಕಟ್ಟನ್ನು ನಮಗೆ ನಮ್ಮ ಸಂವಿಧಾನವು ದಯಪಾಲಿಸಿದೆ. ಜೊತೆಗೆ, ಅಂತಹ ಹಾದಿಯಲ್ಲಿ ಎದುರಾಗುವ ಅಷ್ಟೂ ಅಡ್ಡಿ ಆತಂಕಗಳನ್ನು ಪ್ರತಿರೋಧಿಸಲು ಸ್ವಾತಂತ್ರ್ಯ ಆಂದೋಲನವು ಸತ್ಯಾಗ್ರಹ, ಸಹಕಾರ ಮತ್ತು ಕಾನೂನುಭಂಗದಂತಹ ಅಹಿಂಸಾತ್ಮಕ ಮಾರ್ಗಗಳನ್ನೂ ನಮಗೆ ಬಳುವಳಿಯಾಗಿ ನೀಡಿದೆ. ತುರ್ತುಪರಿಸ್ಥಿತಿಯಂತಹ ಕಠಿಣ ಸನ್ನಿವೇಶಗಳಲ್ಲಿ ಅವು ಯಶಸ್ವಿಯೂ ಆಗಿವೆ. ಆದರೆ ಇತ್ತೀಚಿನ ದಿನಗಳಲ್ಲಿ ಪ್ರಭುತ್ವ ಹಾಗೂ ಕಾರ್ಪೊರೇಟ್ ವ್ಯವಸ್ಥೆಯ ತಂತ್ರಗಳ ಫಲವಾಗಿ ಅಂತಹ ಪ್ರತಿರೋಧದ ಮಾರ್ಗಗಳೇ ಅಸಹಜ ಎನ್ನುವಂತಹ ವಾತಾವರಣ ಸೃಷ್ಟಿಯಾಗಿದೆ. ಅರವಿಂದ್ ಕೇಜ್ರಿವಾಲ್ ಮತ್ತವರ ಆಪ್ ಪಕ್ಷದ ನೇತೃತ್ವದಲ್ಲಿ ನಡೆಯುತ್ತಿದ್ದ ಪ್ರತಿಭಟನೆಗಳನ್ನು ಮುಖ್ಯವಾಹಿನಿಯ ವಿಮರ್ಶೆ ಗ್ರಹಿಸುತ್ತಿದ್ದ ಕ್ರಮವು ಆಘಾತವನ್ನುಂಟುಮಾಡುವಂತಹದು. ಧರಣಿ, ಕ್ರಾಂತಿಕಾರಿ ...ಮೊದಲಾದ ಪದಗಳೇ ಸಾಮಾಜಿಕ ಮಾಧ್ಯಮಗಳಲ್ಲಿ ಅಪಹಾಸ್ಯದ ವಸ್ತುಗಳಾಗಿ ಬಳಕೆಯಾಗ ತೊಡಗಿದ್ದು ಆತಂಕಕಾರಿಯಾದ ಬೆಳವಣಿಗೆ. ಒಂದಿಡೀ ಪೀಳಿಗೆಯ ಉಸಿರಾಗಿದ್ದ ಪ್ರತಿರೋಧ ಇಂದು ನ್ಯೂಸೆನ್ಸ್ ಅನ್ನುವ ಆಳಕ್ಕೆ ಇಳಿದಿರುವುದು ಮುಂಬರುವ ಕೆಟ್ಟ ದಿನಗಳಿಗೆ ಸೂಚನೆ. ಇದಕ್ಕೆ ಪೂರಕವಾಗಿ ಗುಪ್ತಚರ ಇಲಾಖೆಗಳು ಅಣುಸ್ಥಾವರ ಸಂತ್ರಸ್ತರ ಹಕ್ಕುಗಳಾಗಿ ಹೋರಾಡುತ್ತಿದ್ದ ಗ್ರೀನ್‌ಪೀಸ್ ಮೊದಲಾದ ಸರಕಾರೇತರ ಸಂಘಟನೆಗಳ ವಿರುದ್ಧ ಕಾನೂನು ಕ್ರಮಗಳಿಗೆ ಸಲಹೆ ನೀಡಿದ ವರದಿಗಳು ಪ್ರತಿರೋಧವನ್ನೇ ಹತ್ತಿಕ್ಕುವ ಲಾಬಿಯ ಆಳ ಅಗಲಗಳನ್ನು ಪರಿಚಯಿಸುತ್ತವೆ.

ಇಂತಹ ವಿಷಮ ಸನ್ನಿವೇಶದಲ್ಲಿ ಸ್ವಾತಂತ್ರ್ಯವನ್ನು ಪುನರ್‌ಸ್ಥಾಪಿಸುವ, ಗಟ್ಟಿಗೊಳಿಸುವ, ಅದರ ವ್ಯಾಪ್ತಿಯನ್ನು ವಿಸ್ತರಿಸುವ ದಿಕ್ಕಿನಲ್ಲಿ ನಾವು ಗಂಭೀರವಾಗಿ ಯೋಚಿಸಬೇಕಾಗಿದೆ. ಹೊಸ ಕಾಲದಲ್ಲಿ ಪ್ರತಿರೋಧದ ಹೊಸ ನುಡಿಗಟ್ಟುಗಳು, ಹೊಸ ಮಾರ್ಗಗಳನ್ನು ಅನ್ವೇಷಿಸಬೇಕಾಗಿದೆ. ಸಾಮಾಜಿಕ ಮಾಧ್ಯಮಗಳಂತಹ ನೂತನ ವಾಸ್ತವಗಳು ಇಲ್ಲಿ ಮಹತ್ವದ ಪಾತ್ರ ವಹಿಸುತ್ತವೆ. ದೇಶದ ಡೆಮಾಗ್ರಫಿಕ್ ನೆಲೆಯಲ್ಲಿ ಹೊಸ ಸ್ಥಿತ್ಯಂತರಗಳು ದಾಖಲಾಗುತ್ತಿರುವ ಇಂದಿನ ಸಂದರ್ಭದಲ್ಲಿ ಪ್ರಗತಿಪರ ಚಿಂತನೆಗಳು ವಿಶ್ವವಿದ್ಯಾಲಯಗಳ, ಅಕಾಡೆಮಿ ಪೀಠಗಳ ಹೊಸ್ತಿಲು ದಾಟಿ ಬರಬೇಕಿದೆ. ಚಳವಳಿಗೆ ಶಕ್ತಿ ನೀಡಬಲ್ಲ ದೇಶದ ಇತಿಹಾಸದಲ್ಲೇ ಹಿಂದೆಂದಿಗಿಂತಲೂ ದೊಡ್ಡದಾದ ಯುವ ಸಮೂಹವು ಇಂತಹ ಎಲ್ಲ ಪ್ರಕ್ರಿಯೆಗಳಲ್ಲಿ ಸಕ್ರಿಯವಾಗಿ ಭಾಗಿಯಾಗಬೇಕಿದೆ.


**ತೇಜ ಸಚಿನ್ ಪೂಜಾರಿ**
ಸಿ–೬೦, ಆರ್.ಬಿ.ಐ. ಸ್ಟಾಫ್ ಕ್ವಾರ್ಟರ್ಸ್, ಆರ್.ಪಿ.ಸಿ. ಲೇಔಟ್
ವಿಜಯನಗರ, ಬೆಂಗಳೂರು – ೫೬೦ ೦೪೦


## ಕತ್ತಲೆ ಯಾರಿಗೆ ?

ಮುಸ್ಸಂಜೆ ಹೊತ್ತಲ್ಲಿ
ಪೂಜೆಯ ಕೋಣೆಯೊಳಗೆ
ಇಡುಗಿದ್ದ ಕತ್ತಲ ಕಂಡು
ಅಯ್ಯೋ ಪ್ರಮಾದವಾಯಿತೇ
ಪಾಪ ದೇವರು
ಕತ್ತಲಲ್ಲಿದ್ದಾನೆಂದು
ಲೊಚಗುಡುತ ಮುಚ್ಚಟೆಯಿಂದ
ತುಪ್ಪದ ದೀಪವ
ಬೆಳಗಿಸುವ ಮಂದಿಗೆ
ಗೊತ್ತಿಲ್ಲ ತಾವಿರುವುದು
ಕತ್ತಲೆಯಲಿ ಎಂದು !


**ವೈ. ಕೆ. ಸಂಧ್ಯಾ ಶರ್ಮ**
ಬೆಂಗಳೂರು




ಚರಣ, ಚೇತನ ಇಬ್ಬರೂ ಅಪಘಾತಕ್ಕೊಳಗಾಗಿದ್ದಾರೆ. ಚರಣನಿಗೆ ಮೆದುಳಿನ ಭಾಗಕ್ಕೆ ತುಂಬ ಡ್ಯಾಮೇಜ್ ಆಗಿರುವುದರಿಂದ ಶಸ್ತ್ರಚಿಕಿತ್ಸೆಯನ್ನು ಮಾಡಲೇಬೇಕು. ಮಾಡದಿದ್ದರೆ ಅವನು ಬದುಕುವುದಿಲ್ಲ. ಚೇತನ್ ಅಸಾಧಾರಣ ಬುದ್ಧಿವಂತ. ಅವನಾಗಲೇ ತನ್ನ ಕೊನೆಯುಸಿರೆಳೆಯುತ್ತಿರುವುದರಿಂದ ಅವನ ನೆನಪಿನ ಕೋಶಗಳನ್ನು ಬೇರ್ಪಡಿಸಿ ಅವುಗಳನ್ನು ಕೂಡಲೇ ತನ್ನ ಮಗ ಚರಣನ ಮೆದುಳಿಗೆ ವರ್ಗಾಯಿಸಲು ಇದೊಂದು ಒಳ್ಳೆಯ ಅವಕಾಶ.

# ಅದಲು ಬದಲು

## (ಒಂದು ಕಾಲ್ಪನಿಕ ಕಥೆ)

**ವಿ. ಗಣೇಶ್**

**ಡಾ॥** ಕಾರ್ತಿಕ್ ಮತ್ತು ಅವಿನಾಶ್ ತುಂಬ ಆತ್ಮೀಯ ಗೆಳೆಯರು. ಬಾಲ್ಯದಿಂದಲೂ ಒಟ್ಟಿಗೇ ಬೆಳೆದಿದ್ದುದರಿಂದ ಅವರಿಬ್ಬರಲ್ಲಿ ಒಂದು ತೆರನಾದ ಅಳಿಸಲಾರದ ನಂಟು ಏರ್ಪಟ್ಟಿತ್ತು. ಅವಿನಾಶ್ ಮೂಲತಃ ಹಳ್ಳಿಯಿಂದ ಬಂದವನು. ಅವರಿಬ್ಬರ ಜಾತಿ, ಪಂಗಡ ಪದ್ಧತಿಗಳು ಬೇರೆ ಬೇರೆಯಾದರೂ ಅವರ ಗೆಳೆತನ ಹೇಗೆ ಬೆಳೆದು ಹೆಮ್ಮರವಾಯಿತೆಂಬುದು ತುಂಬ ಆಶ್ಚರ್ಯದ ಸಂಗತಿಯೆಂದೇ ಹೇಳಬಹುದು.

ಕಾರ್ತಿಕನಿಗೆ ವಿಜ್ಞಾನದ ವಿಷಯದಲ್ಲಿ ತುಂಬ ಆಸಕ್ತಿಯಿದ್ದುದರಿಂದ ಓದುತ್ತಾ ಓದುತ್ತಾ ಒಬ್ಬ ಹೆಸರಾಂತ ವೈದ್ಯನಾದ. ಆದರೆ ಅವಿನಾಶನಿಗೂ ವಿಜ್ಞಾನಕ್ಕೂ ಎಣ್ಣೆ ಸೀಗೆ. ಹಾಗಾಗಿ ಅವನು ಕಲಾ ವಿಭಾಗವನ್ನು ಆರಿಸಿಕೊಂಡು, ಕಾನೂನು ಪದವಿಯನ್ನು ಪಡೆದು ಹೆಸರಾಂತ ನ್ಯಾಯವಾದಿಯಾದ. ಇಬ್ಬರೂ ತಮ್ಮ ತಮ್ಮ ರಂಗಗಳಲ್ಲಿ ಮೇಲುಮೇಲಕ್ಕೇರುತ್ತಿದ್ದರೂ ಅವರ ಗೆಳೆತನದ ನಂಟು ಮಾತ್ರ ಸಾಸಿವೆ ಕಾಳಿನಷ್ಟೂ ಕಡಿಮೆಯಾಗಿರಲಿಲ್ಲ. ಅಂತೆಯೇ ಅವರ ಮಕ್ಕಳುಗಳಾದ ಚರಣ ಮತ್ತು ಚೇತನ ಕೂಡ ಆತ್ಮೀಯ ಗೆಳೆಯರಾಗಿದ್ದರು. ಬಾಲ್ಯದಿಂದಲೂ ಇಬ್ಬರೂ ಜೊತೆ ಜೊತೆಯಾಗಿಯೇ ಓದುತ್ತಾ ಬಂದಿದ್ದರು.

ಕಾರ್ತಿಕನ ಒಬ್ಬನೇ ಮಗನಾದ ಚರಣ ಓದುವುದರಲ್ಲಿ ಅಷ್ಟೇನೂ ಚಾಣಾಕ್ಷನಾಗಿರಲಿಲ್ಲ. ಅವನನ್ನು ಓದಿಸಿ ತನ್ನಂತೆ ಡಾಕ್ಟರನ್ನಾಗಿ ಮಾಡಬೇಕು ಎಂಬ ಕಾರ್ತಿಕನ ಆಸೆ ಕೈಗೂಡುವಂತಿರಲಿಲ್ಲ. ಆದರೆ ಅವಿನಾಶನ ಮಗನಾದ ಚೇತನ ಅಸಾಧ್ಯ ಬುದ್ಧಿವಂತನಾಗಿದ್ದ. ಇವರಿಬ್ಬರೂ ತಮ್ಮ ತಮ್ಮ ಪದವಿ ಪರೀಕ್ಷೆಗಳನ್ನು ಮುಗಿಸಿ ಐ. ಎ. ಎಸ್. ಪರೀಕ್ಷೆಗಳನ್ನು ತೆಗೆದುಕೊಂಡಿದ್ದರು. ಇಬ್ಬರೂ ಆ ಪರೀಕ್ಷೆಗಳಿಗೆ ಸಿದ್ಧತೆ ಮಾಡಿಕೊಳ್ಳಲು ಖಾಸಗಿಯಾಗಿ ಪಾಠಕ್ಕೆ ಹೋಗುತ್ತಿದ್ದವರು, ಒಂದು ಹೆಸರಾಂತ ಹಾಸ್ಟೆಲಿನಲ್ಲಿದ್ದರು.

ಚೇತನನು ಪರೀಕ್ಷೆಯಲ್ಲಿ ಉತ್ತೀರ್ಣನಾಗಿ ಒಬ್ಬ ಉತ್ತಮ ಅಧಿಕಾರಿಯಾಗುವುದರಲ್ಲಿ ಯಾವ ಸಂಶಯವೂ ಇರಲಿಲ್ಲ. ಆದರೆ ಚರಣ ಮಾತ್ರ ತನ್ನ ಪರೀಕ್ಷೆಯನ್ನು ತಂದೆಯ ಒತ್ತಾಯಕ್ಕಾಗಿ ತೆಗೆದುಕೊಂಡಿದ್ದ. ಪರೀಕ್ಷೆಗೆ ಇನ್ನೂ ಸ್ವಲ್ಪ ಕಾಲಾವಕಾಶ ಇದ್ದುದರಿಂದ ಒಂದೆರಡು ದಿನಗಳ ಮಟ್ಟಿಗೆ ಇಬ್ಬರೂ ಮನೆಗೆ ಬಂದಿದ್ದರು.

ಡಾ॥ ಕಾರ್ತಿಕ್ ಹೊಸದಾಗಿ ಕಾಂಟೆಸಾ ಕಾರನ್ನು ತೆಗೆದುಕೊಂಡುದುದರಿಂದ ಹತ್ತಿರದಲ್ಲಿರುವ ಕೊಡಚಾದ್ರಿ ಬೆಟ್ಟಕ್ಕೆ ಪಿಕ್ನಿಕ್ ಹೋಗಿಬರಲು ಚರಣ ಮತ್ತು ಚೇತನರಿಬ್ಬರೂ ತೀರ್ಮಾನಿಸಿದರು. ಬೇಡಬೇಡವೆಂದರೂ ಕೇಳದೆ, ಕಾಡಿಬೇಡಿ ಹೊಸದಾಗಿ ಖರೀದಿಸಿದ ಕಾರ್ತಿಕನ ಹೊಸ ಕಾಂಟೆಸಾ ಕಾರನ್ನೇ ತೆಗೆದುಕೊಂಡು ಹೊರಟೇಬಿಟ್ಟರು. "ಡ್ರೈವರ್‌ನನ್ನಾದರೂ ಕರೆದುಕೊಂಡು ಹೋಗಿ" ಎಂದರೂ ಕೇಳದೆ ತಾವಿಬ್ಬರೇ ಕಾರನ್ನು ಓಡಿಸಿಕೊಂಡು ಹೋಗಿದ್ದರು.

ಕೊಡಚಾದ್ರಿ ಒಂದು ದಟ್ಟವಾದ ಅರಣ್ಯ ಪ್ರದೇಶದ ಮಧ್ಯದಲ್ಲಿರುವ ಭಾರೀ ಎತ್ತರದಲ್ಲಿರುವ ಒಂದು ಸುಂದರವಾದ ಬೆಟ್ಟ. ಅದರ ಮೇಲಕ್ಕೆ ಹತ್ತಿಹೋದರೆ ಸೂರ್ಯಾಸ್ತದ ಮತ್ತು ಸೂರ್ಯೋದಯದ ಎರಡೂ ಸೊಬಗನ್ನು ನೋಡಬಹುದು. ಈ ಬೆಟ್ಟದ ಮೇಲೇರಲು ಕಾಲು ನಡಿಗೆಯಲ್ಲಾದರೂ ಹೋಗಬಹುದು ಅಥವಾ ವಾಹನವನ್ನು ತೆಗೆದುಕೊಂಡಾದರೂ ಹೋಗಬಹುದು. ದಿನಕ್ಕೆ ಸುಮಾರು ೨೦ರಿಂದ ೨೫ ಬಾಡಿಗೆ ವಾಹನಗಳು ನೂರಾರು ಜನರನ್ನು ಹೊತ್ತು ಬೆಟ್ಟದ ಮೇಲಕ್ಕೆ ಹೋಗಿಬರುತ್ತವೆ. ರಸ್ತೆ ಕಿರಿದಾಗಿರುವುದರಿಂದ ಹಾಗೂ ತುಂಬ ತಿರುವುಗಳಿರುವುದರಿಂದ ಅನುಭವವಿಲ್ಲದೇ ಇರುವ ಖಾಸಗಿ ವಾಹನಗಳನ್ನು ಓಡಿಸುವುದು ಸ್ವಲ್ಪ ದುಸ್ಸಾಹಸವೇ ಸರಿ. ಸ್ವಂತ ವಾಹನದಲ್ಲಿ ಬಂದವರೂ ಕೂಡ ಬೆಟ್ಟದ ಬುಡದಲ್ಲಿಯೇ ತಮ್ಮ ವಾಹನಗಳನ್ನು ಬಿಟ್ಟು ಬಾಡಿಗೆ ವಾಹನಗಳಲ್ಲಿ ಹೋಗಿ ಕೊಡಚಾದ್ರಿ ಬೆಟ್ಟದ ಸೊಬಗನ್ನು ವೀಕ್ಷಿಸಿ ಬರುವುದು ವಾಡಿಕೆ.

ಬೆಟ್ಟದ ಬುಡವನ್ನು ತಲುಪಿದಾಗ ಈ ಗೆಳೆಯರನ್ನು ಬಾಡಿಗೆ ವಾಹನದವರು 'ಬನ್ನಿ, ಬನ್ನಿ' ಎಂದು ಕರೆಯುತ್ತಿದ್ದರೂ ಕಿವಿಗೊಡದೆ ತಮ್ಮ ಸ್ವಂತ ವಾಹನದಲ್ಲಿಯೇ ಬೆಟ್ಟವನ್ನು ಏರಲು ತೀರ್ಮಾನಿಸಿದರು. ಬೆಟ್ಟ ಹತ್ತುವಾಗ 'ಇದೇನು ರಸ್ತೆಯಲ್ಲಿ ಚಲಿಸುತ್ತಿದ್ದೇವೆಯೋ, ಕಲ್ಲುಬಂಡೆಗಳ ಮಧ್ಯೆಯೇ ಚಲಿಸುತ್ತಿದ್ದೇವೆಯೋ ಅಥವಾ ಆಕಾಶದಲ್ಲಿ ಚಲಿಸುತ್ತಿದ್ದೇವೆಯೋ' ಎಂಬ ಅನುಮಾನ ಬರುವಂತಿತ್ತು. ಡ್ರೈವ್ ಮಾಡುವಾಗ ಕಾರು ಇನ್ನೇನು ಮಗುಚಿ ಬಿದ್ದುಬಿಡುತ್ತದೆಯೋ ಎನ್ನುವಷ್ಟರ ಮಟ್ಟಿಗೆ ವಾಲುತ್ತಿತ್ತು. ಒಂದು ಸಂದರ್ಭದಲ್ಲಂತೂ ಎದುರುಗಡೆಯಿಂದ ಬರುವ ವಾಹನಕ್ಕೆ

ಕಾವ್ಯಲೋಕ

# ಅಪ್ಪ : ಒಳ–ಹೊರಗೆ



ದಿನರಾತ್ರಿ
ನನ್ನಪ್ಪನ ಸಿಡುಕಗಳನೆಲ್ಲ
ಸಿವುಡುಗಟ್ಟಿ

ಊದುಗೊಳವೆಯಲಿಟ್ಟು
ಗಾಳಿ ಊದುತ್ತಾಳೆ – ನನ್ನವ್ವ
ಧಗಧಗನೆ ಉರಿದು

ಅನ್ನ ಬೇಯುವ ನೆಪದಲ್ಲಿ
ಸುಟ್ಟು ಬೂದಿಯಾಗುವವು ಸಿಟ್ಟುಗಳೆಲ್ಲ

ತಟ್ಟೆಯ ಮುಂದೆ
ಮಗುವಿನಂಥ ತಂದೆ
ತುತ್ತು ಮೆಲ್ಲುವಾಗ

ಸತ್ತ ಸಿಟ್ಟಿನ ಬೂದಿ
ನಗುತ್ತದೆ ಒಳಗೊಳಗೆ
ಹೊಗೆಯಾಡುತ್ತದೆ ಒಳ–ಹೊರಗೆ

ಈಗೀಗ ಅಪ್ಪನಿಗೆ ಸಿಟ್ಟು ಬರುವದಿಲ್ಲ
ಹಟ ಮಾಡುವದಿಲ್ಲ
ತಟ್ಟೆಯಲಿ ಅನ್ನವಿರುವಾಗಲೆ ಕೈತೊಳೆಯುವದಿಲ್ಲ

ನಸುಬೆಳಕಿನಲಿ
ಅವ್ವ ಬೂದಿ ಚೆಲ್ಲುತ್ತಾಳೆ ಹೊರಗೆ
ಯಾರೂ ಇಲ್ಲದ್ದ ನೋಡಿ
ಬೂದಿ ಕದ್ದ ಚಂದ್ರನ
ಅಂಗಿಗೆ ಇಂದಿಗೂ ಅದೇ ಬಣ್ಣ

ಮಲಗಿದ್ದಾನೆ ಅಪ್ಪ
ಮಗುವಿನಂತೆ ಒಳಗೆ
ತಣ್ಣಗೆ.

**ಪ್ರವೀಣಕುಮಾರ ದೈವಜ್ಞಾಚಾರ್ಯ, ಶಿಕ್ಷಕರು**
# ೪/೪೧೨, ರಾಯಪ್ಪ ಕಾಂಪೌಂಡ್
ಅಂಚೆ : ಹೂವಿನಹಡಗಲಿ – ೫೮೩ ೨೧೯
ಬಳ್ಳಾರಿ ಜಿಲ್ಲೆ

ಬಡಿದು ಭಾರೀ ಅಪಘಾತವಾಗುವಂತಹುದು ಕೂದಲೆಳೆಯ ಅಂತರದಲ್ಲಿ ಪಾರಾಯಿತು. ಅಂತೂ ಹೇಗೂ ಕಷ್ಟಪಟ್ಟು ಬೆಟ್ಟದ ತುದಿಯನ್ನು ತಲುಪುವ ಹೊತ್ತಿಗೆ ಸುಮಾರು ಮಧ್ಯಾಹ್ನವೇ ಆಗಿತ್ತು.

ಅಲ್ಲಿರುವ ಗುಹೆಗಳು, ಸೂರ್ಯನನ್ನೇ ಮರೆ ಮಾಚುವ ದಟ್ಟವಾದ ಕಾಡುಗಳು, ಓಡಾಡುತ್ತಿರುವ ನವಿಲು, ಮೊಲ, ಜಿಂಕೆ ಮೊದಲಾದ ಪ್ರಾಣಿ ಪಕ್ಷಿಗಳ ನಲಿದಾಟ, ಬೆಟ್ಟದ ಕಣಿವೆಗಳಲ್ಲಿ ಪ್ರಪಾತದಂತೆ ಧುಮುಕುವ ಜರಿಗಳ ಸಮ್ಮೋಹಕ ದೃಶ್ಯಗಳು, ಹಲಸು, ಮಾವು, ತೇಗ, ಹೊನ್ನೆ, ಬೀಟೆ ಮುಂತಾದ ಭಾರೀ ಗಾತ್ರದ ಮರಗಳ ಸಾಲು, ಒಂದೇ ಎರಡೇ... ಎಷ್ಟು ನೋಡಿದರೂ ಅಲ್ಲಿನ ರಮ್ಯತೆಗೆ ಕೊನೆಯೇ ಇಲ್ಲ. ಇಡೀ ದಿನ ಅಲ್ಲಿಯ ಸೊಬಗನ್ನು ಮನಸಾರೆ ಅನುಭವಿಸಿದ ಗೆಳೆಯರಿಬ್ಬರು ಸೂರ್ಯಾಸ್ತಮದ ಸಮಯದ ತನಕ ತಿರುಗಿದರು. ಸೂರ್ಯನ ಬಿಂಬ ಸಮುದ್ರದಲ್ಲಿ ಕಂತುವ ರಮಣೀಯ ನೋಟವನ್ನು ಸವಿದ ನಂತರ ಬೆಟ್ಟದಿಂದ ಇಳಿಯಲು ಪ್ರಾರಂಭಿಸಿದರು.

ಮೊದಲೇ ಕಲ್ಲುಬಂಡೆಗಳ ರಾಶಿ ಅದರ ಮಧ್ಯೆ ತುಂಬ ಕಿರಿದಾದ ತಿರುವುಗಳು. ಕತ್ತಲೆಯಾಗುತ್ತಾ ಬಂದುದರಿಂದ ರಸ್ತೆಯೂ ಕೂಡ ಸರಿಯಾಗಿ ಕಾಣಿಸುತ್ತಿರಲಿಲ್ಲ. ಯೌವನದ ಹುರುಪು ಬೇರೆ. ನೋಡನೋಡುತ್ತಿದ್ದಂತೆ ವೇಗವಾಗಿ ಇಳಿಯುತ್ತಿದ್ದ ಇವರ ವಾಹನ ತಿರುವಲ್ಲಿದ್ದ ದೊಡ್ಡ ಬಂಡೆಯೊಂದಕ್ಕೆ ಡಿಕ್ಕಿ ಹೊಡೆದು ಸುಮಾರು ಆರೇಳು ಅಡಿ ಪ್ರಪಾತಕ್ಕೆ ಧುಮುಕಿಯೇಬಿಟ್ಟಿತು. ಏನಾಯಿತು ಎಂದು ಯೋಚಿಸುವುದರೊಳಗೆ ಗೆಳೆಯರಿಬ್ಬರೂ ಆ ಅಪಘಾತದಿಂದ ಸಾವು ಬದುಕಿನೊಡನೆ ಹೋರಾಡು ವಂತಹ ಅಪಾಯದ ಸ್ಥಿತಿಯನ್ನು ತಲುಪಿದ್ದರು. ಅನಾಥರಾಗಿ ಆ ಬೆಟ್ಟದ ಮಧ್ಯೆ ಬಿದ್ದಿದ್ದ ಅವರನ್ನು ಯಾರೋ ಪ್ರಯಾಣಿಕರು ಗಮನಿಸಿ ಪೋಷಕರಿಗೆ ಮಾಹಿತಿ ಕೊಟ್ಟರು.

ಚರಣ ನಿಧಾನವಾಗಿ ಚೇತರಿಸಿಕೊಳ್ಳುತ್ತಿದ್ದರೂ ಚೇತನನ ಪರಿಸ್ಥಿತಿ ಮಾತ್ರ ತುಂಬ ಗಂಭೀರವಾಗಿಯೇ ಇತ್ತು. ಚೇತನನಿಗೆ ತಲೆಗೆ ಬಲವಾದ ಹೊಡೆತ ಬಿದ್ದುದರಿಂದ ಸಾವು ಬದುಕಿನ ಜೊತೆಗೆ ಹೋರಾಡುತ್ತಿದ್ದ. ಡಾ॥ ಕಾರ್ತಿಕ್‌ನ ಜೊತೆಯಲ್ಲಿ ಡಾ॥ ಸಂಗಮ್ ಮತ್ತು ಅನೇಕ ಹಿರಿಯ ವೈದ್ಯರುಗಳು ತಮ್ಮೆಲ್ಲ ಪ್ರಯತ್ನಗಳನ್ನು ಕ್ರೋಡೀಕರಿಸಿ ಮಕ್ಕಳ ಜೀವ ಉಳಿಸಲು ಸತತವಾಗಿ ಪ್ರಯತ್ನಪಡುತ್ತಿದ್ದರು.

“ಅಯ್ಯೋ ! ಎಂತಹ ಭೀಕರ ಅಪಘಾತ, ನನ್ನ ಮಗ ಬದುಕುತ್ತಾನೋ ಇಲ್ಲವೋ ?” ಎನ್ನುತ್ತ, ಆಪರೇಶನ್ ಥಿಯೇಟರ್‌ನ ಹೊರಗಡೆ ಅತ್ತಿಂದಿತ್ತ ಓಡಾಡುತ್ತ ಚೇತನನ ತಂದೆ ಅವಿನಾಶರವರು ವಿಲವಿಲ ಒದ್ದಾಡುತ್ತಿದ್ದರು. ಏಕೆಂದರೆ ಚೇತನನಿಗೆ ತುಂಬ ಪೆಟ್ಟಾಗಿ ಸಾವು ಬದುಕಿನ ಮಧ್ಯೆ ಹೋರಾಡುತ್ತಿದ್ದ.

ಹಠಾತ್ತನೆ ಶಸ್ತ್ರಚಿಕಿತ್ಸಾ ಕೊಠಡಿಯ ಬಾಗಿಲು ತೆರೆಯಿತು. ಡಾ॥ ಸಂಗಮ್ ಗದ್ಗದ ಕಂಠದಿಂದ, “ಚೇತನನ ತಂದೆ ಎಲ್ಲಿ ?” ಎಂದು ಕೇಳಿದರು. ಅವಿನಾಶ್ ಮುಂದಕ್ಕೆ ನುಗ್ಗುತ್ತಾ, “ಡಾಕ್ಟರೇ, ನನ್ನ ಮಗ ಚೆನ್ನಾಗಿದ್ದಾನಾ ? ದಯವಿಟ್ಟು ಅವನನ್ನು ಬದುಕಿಸಿ” ಎಂದು ಗೋಗರೆಯತೊಡಗಿದರು.

"ಕ್ಷಮಿಸಿ, ನಾವು ಮಾಡುವ ಪ್ರಯತ್ನವನ್ನೆಲ್ಲಾ ಮಾಡಿದೆವು. ಆದರೆ ಅವನನ್ನು ಬದುಕಿಸಲು ಸಾಧ್ಯವಾಗಲಿಲ್ಲ." ಇಂತಹ ಸಂದರ್ಭಗಳಲ್ಲಿ ಎಲ್ಲಾ ವೈದ್ಯರೂ ಗಂಭೀರ ವಾಣಿಯಲ್ಲಿ ಹೇಳುವಂತೆ ಡಾ॥ ಸಂಗಮ್ ತಿಳಿಸಿದರು. ಡಾ॥ ಕಾರ್ತಿಕ್ ಮತ್ತು ಡಾ॥ ಸಂಗಮ್ ಸಾಕಷ್ಟು ಪ್ರಯತ್ನಪಟ್ಟರೂ ಕೂಡ ಚೇತನನನ್ನು ಉಳಿಸಿಕೊಳ್ಳಲು ಸಾಧ್ಯವಾಗಲೇ ಇಲ್ಲ. ಜೊತೆಯಲ್ಲಿ ಸಪ್ಪೆಮುಖ ಹಾಕಿಕೊಂಡ ಡಾ॥ ಕಾರ್ತಿಕ್ ಕೂಡ ಹೊರಬಂದರು. ಅವರ ಮಗ ಚರಣ ಸಾವಿನ ದವಡೆಯಿಂದ ಪಾರಾಗಿದ್ದರೂ ಕೂಡ ಚೇತನನನ್ನು ಕಾಪಾಡಲಾಗದುದಕ್ಕೆ ಅವರ ಮುಖದಲ್ಲಿ ನೋವು ಎದ್ದು ಕಾಣುತ್ತಿತ್ತು. ಮಗನ ಸಾವಿನ ವಿಷಯವನ್ನು ತಿಳಿದು ಅಲ್ಲೇ ಕುಸಿದುಬಿದ್ದ ಅವಿನಾಶನನ್ನು ಸಮಾಧಾನ ಪಡಿಸುವುದರಲ್ಲಿ ಸಾಕು ಸಾಕಾಗಿ ಹೋಯಿತು.

ಒಂದು ವಾರದ ನಂತರ ಚರಣ ಗುಣಮುಖನಾಗಿ ಮನೆಗೆ ಬಂದ. ಆದರೆ ತನ್ನ ಪ್ರಾಣಸ್ನೇಹಿತ ಚೇತನನ ಆಕಸ್ಮಿಕ ಸಾವು ಅವನನ್ನು ಅಧೀರನನ್ನಾಗಿ ಮಾಡಿತ್ತು. 'ತಾನೇ ಅವನನ್ನು ಒತ್ತಾಯ ಮಾಡಿ ಕೊಡಚಾದ್ರಿಗೆ ಕರೆದುಕೊಂಡು ಹೋದುದು. ಒಂದು ರೀತಿಯಲ್ಲಿ ಅವನ ಸಾವಿಗೆ ತಾನೇ ಕಾರಣನಾದೆನೋ ಏನೋ' ಎಂಬ ನೋವು ಅವನನ್ನು ಇರಿಯುತ್ತಿತ್ತು. ತಂದೆಯನ್ನು ನೋಡಿದಾಗ ಅವನ ದುಃಖ ತಡೆಯಲಾಗಲಿಲ್ಲ.

"ಅಪ್ಪಾ, ಅಪ್ಪಾ, ನನ್ನ ಸ್ನೇಹಿತ ಚೇತನ ಇನ್ನಿಲ್ಲ. ಅವನನ್ನು ನಾನೇ ಕೊಂದೆ, ನಾನು ತುಂಬ ಪಾಪಿ, ಅವನಿಲ್ಲದೆ ನನಗೆ ಬದುಕಲು ಸಾಧ್ಯವಿಲ್ಲ" ಎನ್ನುತ್ತಾ ಅಪ್ಪನನ್ನು ಅಪ್ಪಿಕೊಂಡು 'ಗೋಳೋ' ಎಂದು ಅಳತೊಡಗಿದ.

"ಧೈರ್ಯ ತಂದುಕೋ ಮಗು, ಎಲ್ಲ ವಿಧಿಯ ನಿಯಮ. ನಮ್ಮ ಕೈಯಲ್ಲಿ ಏನಿದೆ ? ವಿಧಿಯ ಆಟಕ್ಕೆ ಯಾರೂ ಕಾರಣರಲ್ಲ. ನಾನೂ ಮತ್ತು ಡಾ॥ ಸಂಗಮ್ ಸಾಕಷ್ಟು ಪ್ರಯತ್ನ ಮಾಡಿದೆವು. ಆದರೆ ಅವನನ್ನು ಉಳಿಸಿಕೊಳ್ಳಲಾಗಲಿಲ್ಲ" ಎಂದು ಮಗನನ್ನು ಸಮಾಧಾನಪಡಿಸಿದರು.

"ಈಗ ನೀನು ಅಳುತ್ತಾ ಕುಳಿತರೆ ಸತ್ತವನು ವಾಪಾಸು ಬರುತ್ತಾನೆಯೇ ?, ಮುಂದೆ ನೀನು ನಿನ್ನ ಗುರಿಯನ್ನು ಸಾಧಿಸುವುದು ಮುಖ್ಯ. ಇನ್ನೆರಡು ದಿನಗಳಲ್ಲಿ ನಿನ್ನ ಪರೀಕ್ಷೆ ಪ್ರಾರಂಭವಾಗುತ್ತದೆ. ತಕ್ಷಣವೇ ನೀನು ಹಾಸ್ಟೆಲಿಗೆ ಹೊರಡು" ಎಂದರು.

"ಇಲ್ಲ ಅಪ್ಪ ಇಲ್ಲ. ನಾನು ಯಾವ ಪರೀಕ್ಷೆಗೂ ಹೋಗುವುದಿಲ್ಲ. ಚೇತನ ಇಲ್ಲದೆ ನಾನು ಹೇಗೆ ತಯಾರಾಗಲಿ ? ಅವನಿದ್ದಾನೆ ಎಂಬ ಧೈರ್ಯ ದಿಂದಲೇ ನಾನು ಪರೀಕ್ಷೆ ಕಟ್ಟಿದ್ದೆ. ಈಗ ನನಗೆ ಪರೀಕ್ಷೆ ಪಾಸುಮಾಡಲು ಖಂಡಿತ ಸಾಧ್ಯವಾಗುವುದಿಲ್ಲ. ನಾನು ಯಾವ ಪರೀಕ್ಷೆಗೂ ಹೋಗುವುದಿಲ್ಲ. ದಯವಿಟ್ಟು ಕ್ಷಮಿಸಿ" ಎನ್ನುತ್ತ ರೋದಿಸತೊಡಗಿದ.

"ಇಲ್ಲ ಚರಣ್ ಇಲ್ಲ. ನೀನು ಈ ಬಾರಿ ಖಂಡಿತವಾಗಿಯೂ ಪಾಸುಮಾಡುತ್ತೀಯ. ಅದರಲ್ಲಿ ಅನುಮಾನವೇ ಇಲ್ಲ. ಗೀತೆಯಲ್ಲಿ ಹೇಳುವಂತೆ 'ಕರ್ಮಣ್ಯೇ ವಾಧಿಕಾರಸ್ತೇ ಮಾ ಫಲೇಶು ಕದಾಚನಃ', ಪ್ರಯತ್ನ ನಮ್ಮದು ಜಯಾಪಜಯ ಗಳನ್ನು ಭಗವಂತನಿಗೆ ಬಿಡು" ಎನ್ನುತ್ತ ಡಾ॥ ಕಾರ್ತಿಕ್ ಅವನನ್ನು ಒತ್ತಾಯಪೂರ್ವಕವಾಗಿ ಹಾಸ್ಟೆಲ್‌ಗೆ ಕಳುಹಿಸಿದರು.

ಅಂದು ಭಾನುವಾರ. ಪೇಪರ್ ಹಂಚುವ ಹುಡುಗ ಅದಾಗಲೇ ಪೇಪರನ್ನು ಬಾಗಿಲಿನತ್ತ ಎಸೆದು ಹೋಗಿದ್ದ. ಬಾಗಿಲಿಗೆ ನೀರು ಹಾಕಲು ಬಂದಿದ್ದ ಡಾ॥ ಕಾರ್ತಿಕನ ಪತ್ನಿ ಸುಗಂಧಿ ಪೇಪರಿನಲ್ಲಿ ತನ್ನ ಮಗನ ಚಿತ್ರವನ್ನು ನೋಡಿ ಆಶ್ಚರ್ಯಚಕಿತಳಾದಳು. ಪೇಪರನ್ನು ಹಾಗೇ ಹಿಡಿದುಕೊಂಡು ಓಡುತ್ತಾ, "ನೋಡಿ ಕಾರ್ತಿಕ್, ಐ. ಎ. ಎಸ್. ಪರೀಕ್ಷೆಯಲ್ಲಿ ನಮ್ಮ ಮಗ ಪ್ರಥಮ ರ್‍ಯಾಂಕ್ ಗಳಿಸಿದ್ದಾನೆ. ಪೇಪರಿನಲ್ಲಿ ಅವನ ಫೋಟೋ ಬಂದಿದೆ." ಎನ್ನುತ್ತಾ ಕುಣಿದಾಡತೊಡಗಿದಳು.

"ಅವನು ನನ್ನ ಮಗನಲ್ಲವೇ ? ಪ್ರಥಮ ರ್‍ಯಾಂಕ್ ಬಂದೇಬರುತ್ತಾನೆಂದು ನನಗೆ ಖಾತ್ರಿಯಿತ್ತು." ಕಾರ್ತಿಕ್ ಏನೂ ಆಶ್ಚರ್ಯವಾಗದವನಂತೆ ಹಾಗೂ ಇದರ ಬಗ್ಗೆ ಆಗಲೇ ಅರಿವಿದ್ದವನಂತೆ ನುಡಿದ.

"ನಮ್ಮ ಮಗನ ವಿಷಯ ನಮಗೆ ಗೊತ್ತಿಲ್ಲವೇ ? ಎಲ್ಲೋ ಮುದ್ರಣದ ದೋಷವಿರಬೇಕು. ಅವನು ಪ್ರಥಮ ರ್‍ಯಾಂಕ್ ಬರಲು ಸಾಧ್ಯವೇ ಇಲ್ಲ" ಸಂತೋಷವಾದರೂ ಸುಗಂಧಿ ತನ್ನ ಅನುಮಾನವನ್ನು ವ್ಯಕ್ತಪಡಿಸಿದಳು.

"ಅದರಲ್ಲಿ ಬಂದಿರುವುದು ನೂರಕ್ಕೆ ನೂರರಷ್ಟು ಸತ್ಯ. ಅದರಲ್ಲಿ ನನಗೆ ಅನುಮಾನವೇ ಇಲ್ಲ" ಎಂದು ಕಾರ್ತಿಕ್ ಹೇಳುತ್ತಿರುವಾಗ ಒಳಗಡೆ ಟೆಲಿಫೋನ್ ಬಾರಿಸತೊಡಗಿತು. ಅತ್ತಕಡೆಯಿಂದ ಹಾಸ್ಟೆಲಿನ ವಾರ್ಡನ್‌ರವರು ಮಾತನಾಡುತ್ತಿದ್ದರು. ಚರಣ ಐ. ಎ. ಎಸ್. ಪರೀಕ್ಷೆಯಲ್ಲಿ ಪ್ರಥಮ ರ್‍ಯಾಂಕ್ ಗಳಿಸಿದ ವಿಷಯವನ್ನು ತಿಳಿಸುತ್ತಾ ಶುಭಾಷಯಗಳನ್ನು ಹೇಳುತ್ತಿದ್ದರು. ತಮ್ಮ ಮಗನಿಗೆ 'ಫೋನ್ ಕೊಡಿ' ಎಂದಾಗ, ಅವನಾಗಲೇ ಹಾಸ್ಟೆಲನ್ನು ಬಿಟ್ಟಿರುವು ದಾಗಿಯೂ ಅವನ ಗೆಳೆಯರೆಲ್ಲರೂ ಅವನಿಗಾಗಿ ಕಾಯುತ್ತಿರುವುದಾಗಿಯೂ ತಿಳಿಸಿದರು.

ಈಗ ಡಾ॥ ಕಾರ್ತಿಕರವರಿಗೆ ಸ್ವಲ್ಪ ದಿಗಿಲಾಗ ತೊಡಗಿತು. 'ಚರಣ ಹಾಸ್ಟೆಲ್‌ನಲ್ಲಿಯೂ ಇಲ್ಲ, ಮನೆಗೂ ಬಂದಿಲ್ಲ, ಹಾಗಾದರೆ ಎಲ್ಲಿಗೆ ಹೋಗಿದ್ದಾನೆ ? ಫಲಿತಾಂಶದ ವಿಷಯವನ್ನು ತಮಗೆ ತಿಳಿಸುವುದು ಬೇಡವೇ ?' ಎಂದು ಚಿಂತಿಸತೊಡಗಿದರು.

ಇವರಿಬ್ಬರ ಸಂಭಾಷಣೆಗಳನ್ನು ಕೇಳುತ್ತಿದ್ದ ಸುಗಂಧಿ ಭಯದಿಂದ ಹೌಹಾರಿದಳು. "ಅಯ್ಯೋ, ನನಗೆ ಭಯವಾಗುತ್ತಿದೆ. ಚರಣ ಎಲ್ಲಿ ಹೋದ ? ಅವನನ್ನು ಹುಡುಕುವ ವ್ಯವಸ್ಥೆ ಮಾಡಿ. ಪೊಲೀಸಿಗಾದರೂ ಕಂಪ್ಲೇಂಟ್ ಕೊಡಿ" ಎನ್ನುತ್ತಾ ಕೂಗಾಡತೊಡಗಿದಳು.

'ಮಗ ಎಲ್ಲಿಗೆ ಹೋಗಿರಬಹುದು ?' ಎಂಬ ಯೋಚನೆ ಕಾರ್ತಿಕ್‌ರವರನ್ನು ಕಾಡುತ್ತಿದ್ದರೂ ಹೆಂಡತಿಯ ಕಡೆ ತಿರುಗಿ, "ಯೋಚಿಸಬೇಡ, ಈಗಲೇ ಪೊಲೀಸ್ ಕಂಪ್ಲೇಂಟ್ ಕೊಡುತ್ತೇನೆ. ರೇಡಿಯೋ ಮತ್ತು ಟಿ.ವಿ.ಗಳಲ್ಲೂ ಪ್ರಚಾರ ಮಾಡಲು ತಿಳಿಸುತ್ತೇನೆ" ಎಂದು ಸಮಾಧಾನಪಡಿಸುತ್ತಿರುವಾಗ ಗೆಳೆಯ ಡಾ॥ ಸಂಗಮ್ ಆಗಮಿಸಿದರು.

"ಶುಭಾಷಯಗಳು, ನಿಮಗೆ ಹಾರ್ದಿಕ ಶುಭಾಷಯಗಳು. ಕಡೆಗೂ ನೀವು ನಿಮ್ಮ ಪ್ರಯೋಗದಲ್ಲಿ ಯಶಸ್ವಿಯಾದಿರಿ" ಎನ್ನುತ್ತಾ ಗೆಳೆಯನಿಗೆ ಅಭಿನಂದನೆ ತಿಳಿಸಿದರು.

ಡಾ॥ ಸಂಗಮ್ ಮತ್ತು ಡಾ॥ ಕಾರ್ತಿಕ್ ತುಂಬ ಹೆಸರುವಾಸಿಯಾದ ವೈದ್ಯರುಗಳು. ಅವರಿಬ್ಬರೂ ಅನೇಕ ವರ್ಷಗಳಿಂದ ಒಟ್ಟಿಗೆ ಕೆಲಸ ಮಾಡುತ್ತಿದ್ದರು. ಇಬ್ಬರೂ ಸೇರಿ ನೆನಪಿನ ಕೋಶಗಳ ಸ್ಥಾನಪಲ್ಲಟಗಳ ಬಗ್ಗೆ ಅನೇಕ ದಿನಗಳಿಂದ ಸಂಶೋಧನೆ ನಡೆಸುತ್ತಿದ್ದರು. ಕೋತಿಗಳ ನೆನಪಿನ ಕೋಶಗಳ ಸ್ಥಾನಪಲ್ಲಟಗಳ ಸಾಧ್ಯತೆಯ ಬಗ್ಗೆ ಹಾಗೂ ಅದರ ಅದ್ಭುತ ಫಲಿತಾಂಶದ ಬಗ್ಗೆ ಆರ್ಥರ್ ಕೊಯಿಲ್‌ಸ್ಟರ್ ಅವರ ಸಂಶೋಧನೆಗಳಿಂದ ಅರಿತಿದ್ದರು. ಆ ಪ್ರಯೋಗ ಗಳನ್ನು ಮಾನವರ ಮೇಲೂ ಪ್ರಯೋಗಿಸಿದ್ದೇ ಆದರೆ ಆ ರಂಗದಲ್ಲಿ ಕ್ರಾಂತಿಯನ್ನೇ ಮಾಡಬಹುದೆಂದು ಯೋಚಿಸುತ್ತಿದ್ದರು. ಆದರೆ ಯಾವ ತಂದೆ ತಾಯಂದಿರೂ ಕೂಡ ಇಂತಹ ಪ್ರಯೋಗಗಳಿಗೆ ತಮ್ಮ ಮಕ್ಕಳನ್ನು ಬಲಿಕೊಡಲು ಸಿದ್ಧರಿರುವುದಿಲ್ಲ. ಸ್ವಲ್ಪ ಏರುಪೇರಾದರೂ ರೋಗಿಯು ಪ್ರಾಣ ಕಳೆದುಕೊಳ್ಳುವ ಸಾಧ್ಯತೆಯೇ ಹೆಚ್ಚು. ಹಾಗಾಗಿ ಡಾ॥ ಕಾರ್ತಿಕ್ ಈ ಪ್ರಯೋಗದ ಯಶಸ್ಸಿನ ಬಗ್ಗೆ ನೂರಕ್ಕೆ ನೂರರಷ್ಟು ಖಾತ್ರಿಯಿದ್ದರೂ ಮುಂದುವರಿದಿರಲಿಲ್ಲ.

ಈಗ ಅಂತಹ ಒಂದು ಅವಕಾಶ ಒದಗಿ ಬಂದಿದೆ. ಚರಣ, ಚೇತನ ಇಬ್ಬರೂ ಅಪಘಾತಕ್ಕೆ ಒಳಗಾಗಿದ್ದಾರೆ. ಚರಣನಿಗೆ ಮೆದುಳಿನ ಭಾಗಕ್ಕೆ ತುಂಬ ಡ್ಯಾಮೇಜ್ ಆಗಿರುವುದರಿಂದ ಶಸ್ತ್ರಚಿಕಿತ್ಸೆಯನ್ನು ಮಾಡಲೇಬೇಕು. ಮಾಡದಿದ್ದರೆ ಅವನು ಬದುಕುವುದಿಲ್ಲ. ಚೇತನ್ ಅಸಾಧಾರಣ ಬುದ್ಧಿವಂತ. ಅವನಾಗಲೇ ತನ್ನ ಕೊನೆಯ ಉಸಿರೆಳೆಯುತ್ತಿರುವುದರಿಂದ ಅವನ ನೆನಪಿನ ಕೋಶಗಳನ್ನು ಬೇರ್ಪಡಿಸಿ ಅವುಗಳನ್ನು ಕೂಡಲೇ ತನ್ನ ಮಗ ಚರಣನ ಮೆದುಳಿಗೆ ವರ್ಗಾಯಿಸಲು ಇದೊಂದು ಒಳ್ಳೆಯ ಅವಕಾಶ.

ಪ್ರಯೋಗದ ಯಶಸ್ಸಿನ ಬಗ್ಗೆ ನೂರಕ್ಕೆ ನೂರರಷ್ಟು ನಂಬಿಕೆಯಿದ್ದುದರಿಂದ ಅವರು ಸ್ವಲ್ಪವೂ ಅಳುಕಲೇ ಇಲ್ಲ. ಅಷ್ಟೇ ಅಲ್ಲದೆ ನುರಿತ ಶಸ್ತ್ರಚಿಕಿತ್ಸಕರಾದ ಡಾ॥ ಸಂಗಮ್‌ರವರು ಇವರ ಬಲಗೈಯಾಗಿದ್ದುದು ಇವರಿಗೆ ಮಾನಸಿಕವಾಗಿ ಹಾಗೂ ತಾಂತ್ರಿಕವಾಗಿ ಹೆಚ್ಚಿನ ಧೈರ್ಯವನ್ನು ತಂದುಕೊಟ್ಟಿತ್ತು. ಇಬ್ಬರೂ ಸೇರಿ ಶಸ್ತ್ರಚಿಕಿತ್ಸೆ ಕಾರ್ಯವನ್ನು ಯಶಸ್ವಿಯಾಗಿ ಮುಗಿಸಿದ್ದರು.

ಶಸ್ತ್ರಚಿಕಿತ್ಸೆಯ ನಂತರ ಚರಣ ನಿಧಾನವಾಗಿ ಚೇತರಿಸಿಕೊಳ್ಳತೊಡಗಿದ್ದ. ಒಂದು ಕಡೆ ಗೆಳೆಯನನ್ನು ಕಳೆದುಕೊಂಡ ದುಃಖ ಇನ್ನೊಂದು ಕಡೆ ಶಸ್ತ್ರಚಿಕಿತ್ಸೆಯ ಪರಿಣಾಮದಿಂದ ಒಂದು ರೀತಿಯಲ್ಲಿ ಮಂಕು ಕವಿದಂಥವನಾಗಿದ್ದ. ಮನೆಯಲ್ಲಿ ತಂದೆ ತಾಯಿಯರ ಜೊತೆಯಲ್ಲಿ ಕೂಡ ಹೆಚ್ಚು ಮಾತನಾಡಲಿಲ್ಲ. ಆದರೆ ಆತನು ಪರೀಕ್ಷೆಯಲ್ಲಿ ಕುಳಿತು ಉತ್ತರಿಸಲು ಪ್ರಾರಂಭಿಸಿದಾಗ ಚರಣನಲ್ಲಿರುವ ಚೇತನನ ನೆನಪಿನ ಕೋಶಗಳು ಸಚೇತನಗೊಂಡು

ಕ್ರಿಯಾಶೀಲವಾದವು. ಅವುಗಳು ಅವನಿಗೆ ಪರೀಕ್ಷೆಯಲ್ಲಿನ ಕಠಿಣ ಪ್ರಶ್ನೆಗಳನ್ನು ಉತ್ತರಿಸಲು ತುಂಬ ಸಹಾಯಕಾರಿ ಯಾದವು. ಅಲ್ಲಿಯವರೆಗಿನ ಡಾ॥ ಕಾರ್ತಿಕ್‌ರವರ ತೀರ್ಮಾನವೇನೋ ಸರಿಯಾಗಿದ್ದಿತು. ಆದರೆ ಅಲ್ಲಿಂದ ಮುಂದೆ ಚೇತನನ ಮೆದುಳಿನ ಸಂಪೂರ್ಣ ನೆನಪುಗಳು ಚರಣನಿಗೆ ವರ್ಗಾಯಿಸಲ್ಪಟ್ಟಿದ್ದವು. ಅವನಲ್ಲಿ ಅಡಕವಾಗಿದ್ದ ಚರಣನ ಮೆದುಳಿನ ನೆನಪುಗಳು ಪೂರ್ಣವಾಗಿ ಅಳಿಸಿಹೋಗಿದ್ದವು. ಹಾಗಾಗಿಯೇ ಅವನು ಐ. ಎ. ಎಸ್. ಪರೀಕ್ಷೆಯಲ್ಲಿ ಪ್ರಥಮ ಸ್ಥಾನವನ್ನು ಗಳಿಸಲು ಸಾಧ್ಯವಾಯಿತು. ಆದರೆ ಚೇತನನ ಸಂಪೂರ್ಣ ಮೆದುಳು ಚರಣನಿಗೆ ವರ್ಗಾಯಿಸಲ್ಪಟ್ಟಿತ್ತು. ಹಾಗಾಗಿ ಅವನು ತನ್ನ ಪರೀಕ್ಷೆ ಮುಗಿದ ನಂತರ ಕಾರ್ತಿಕನ ಮನೆಗೆ ಬರುವುದಕ್ಕೆ ಬದಲಾಗಿ ಅವಿನಾಶನ ಮನೆಯ ಕಡೆ ಪ್ರಯಾಣ ಬೆಳೆಸಿದ್ದ.

ಪುನಃ ಟೆಲಿಫೋನ್ ಗಂಟೆ ಬಾರಿಸಿದಾಗ ಕಾರ್ತಿಕ್ ಯೋಚನಾ ಲೋಕದಿಂದ ಹೊರಕ್ಕೆ ಬಂದ. "ಹಲೋ ! ಕಾರ್ತಿಕ್, ನಾನು ಅವಿನಾಶ್ ಮಾತನಾಡುತ್ತಿರುವುದು. ನಿನಗೆ ಹಾರ್ದಿಕ ಶುಭಾಶಯಗಳು. ನಿನ್ನ ಮಗ ಐ. ಎ. ಎಸ್. ಪರೀಕ್ಷೆಯಲ್ಲಿ ಪ್ರಥಮನಾಗಿ ಹೊರ ಬಂದಿದ್ದಾನೆ. ಆತನು ಸೀದಾ ನಮ್ಮ ಮನೆಗೆ ಬಂದಿದ್ದಾನೆ. ಇಲ್ಲೇ ರೂಮಿನಲ್ಲೇ ಕುಳಿತಿದ್ದಾನೆ. ಮನೆಗೆ ಹೋಗು ಎಂದರೆ ಹೋಗುತ್ತಿಲ್ಲ" ಎಂದರು ಅವಿನಾಶ್.

ಗರಬಡಿದಂಥವನಾಗಿ ಕಾರ್ತಿಕ್ ನೇರವಾಗಿ ಅವಿನಾಶನ ಮನೆಗೆ ಹೊರಟ. ಪರಿಸ್ಥಿತಿಯ ತೀವ್ರತೆಯನ್ನು ಗಮನಿಸಿದ ಡಾ॥ ಸಂಗಮ್ ಕೂಡ ಅವನ ಜೊತೆಯಲ್ಲಿ ಹೊರಟರು. ಇವರ ಮಾರುತಿ ಕಾರು ಅವಿನಾಶನ ಮನೆಯನ್ನು ತಲುಪಿದಾಗ ಇವರಿಗಾಗಿ ಕಾಯುತ್ತಿದ್ದ ಅವಿನಾಶ್ "ಬನ್ನಿ, ಬನ್ನಿ" ಎಂದು ಆಹ್ವಾನಿಸಿದರು.

"ಚರಣ ಎಲ್ಲಿದ್ದಾನೆ ? ಆರೋಗ್ಯವಾಗಿದ್ದಾನೆ ತಾನೇ ? ಮನೆಗೆ ಬರದೆ ಇಲ್ಲಿಗೆ ಯಾಕೆ ಬಂದನಂತೆ ?" ಎನ್ನುತ್ತಾ ಕಾರ್ತಿಕ್ ಒಂದೇ ಸಮನೆ ಪ್ರಶ್ನೆಗಳ ಮೇಲೆ ಪ್ರಶ್ನೆಗಳನ್ನು ಹಾಕತೊಡಗಿದರು.

"ನಿನ್ನೆಯ ದಿನವೇ ಹಾಸ್ಟೆಲನ್ನು ಬಿಟ್ಟಿರುವನಂತೆ. ಮನೆಗೆ ಬರುವುದನ್ನು ಬಿಟ್ಟು ಇಲ್ಲಿಗೆ ಯಾಕೆ ಬಂದಿದ್ದಾನೆ ? ಕೊನೆಯ ಪಕ್ಷ ತಾನು ಪ್ರಥಮ ರ್‍ಯಾಂಕ್ ಪಡೆದಿರುವ ವಿಷಯವನ್ನಾದರೂ ನಮಗೆ ತಿಳಿಸಬೇಡವೇ ? ಏನಾಗಿದೆ ಅವನಿಗೆ ? ಏಕೆ ಹೀಗಾಡುತ್ತಿದ್ದಾನೆ ?" ಆತಂಕ ತಡೆಯಲಾರದೆ ಸುಗಂಧಿ ಬಡಬಡಿಸತೊಡಗಿದಳು.

"ಕುಳಿತುಕೊಳ್ಳಿ, ದಯವಿಟ್ಟು ಕುಳಿತುಕೊಳ್ಳಿ" ಇಬ್ಬರನ್ನೂ ಸಮಾಧಾನಪಡಿಸುತ್ತಾ ಅವಿನಾಶ್ ಮುಂದುವರಿಸಿದ, "ಅವನು ನಿನ್ನೆಯ ದಿನವೇ ಇಲ್ಲಿಗೆ ಬಂದ. ತಾನು ಪರೀಕ್ಷೆಯಲ್ಲಿ ಪ್ರಥಮ ರ್‍ಯಾಂಕ್ ಬಂದಿರುವ ವಿಷಯವನ್ನು ತಿಳಿಸುತ್ತಾ ನಮಗಿಬ್ಬರಿಗೂ ನಮಸ್ಕರಿಸಿದ. ನಂತರ ಊಟ ಮುಗಿಸಿ ಏನನ್ನೂ ಹೇಳದೆ ನೇರವಾಗಿ ಚೇತನನ ರೂಮಿಗೆ ತೆರಳಿದ. ಅಲ್ಲಿಂದ ಇಲ್ಲಿಯವರೆಗೆ ಅವನು ಚೇತನನ ರೂಮಿನಲ್ಲೇ ಕಾಲ ಕಳೆಯುತ್ತಿದ್ದಾನೆ. ಚೇತನ ನಂತೆಯೇ ಸದಾ ಓದುತ್ತಿರುತ್ತಾನೆ. ನಿಮ್ಮ ಮಗನ ಎಲ್ಲಾ ವರ್ತನೆಗಳೂ ನಮ್ಮ ಮಗನಾದ ಚೇತನನನ್ನೇ ಹೋಲುತ್ತಿವೆ. ತನ್ನನ್ನು ಚೇತನನೆಂದೇ ತಿಳಿದು ಕೊಂಡಿದ್ದಾನೆ. ನನ್ನನ್ನು ಇವಳನ್ನು ಚೇತನ ಕರೆದಂತೆ ಅಪ್ಪ, ಅಮ್ಮ ಎಂದೇ ಕರೆಯುತ್ತಿದ್ದಾನೆ ನನಗಂತೂ ಏನೂ ಅರ್ಥವಾಗುತ್ತಿಲ್ಲ."

ಡಾ॥ ಕಾರ್ತಿಕ್ ತಮಗಾದ ಉದ್ವೇಗವನ್ನು ತಡೆದುಕೊಳ್ಳಲಾಗದೆ ಚರಣ ಇರುವ ಕೊಠಡಿಯನ್ನು ಪ್ರವೇಶಿಸಿದರು. ಅವರನ್ನು ನೋಡಿದ ತಕ್ಷಣವೇ ಎದ್ದುನಿಂತ ಚರಣ್, "ನಮಸ್ತೇ ಡಾ॥ ಅಂಕಲ್, ನಮಸ್ತೇ ಸಂಗಮ್ ಅಂಕಲ್, ನಮಸ್ತೇ ಆಂಟಿ" ಎನ್ನುತ್ತ ಎಲ್ಲರನ್ನೂ ಸ್ವಾಗತಿಸಿದ.

ಅವಿನಾಶ್ ಮಧ್ಯೆ ಬಾಯಿ ಹಾಕುತ್ತ, "ಚರಣ್ ಹಾಗೇಕೆ ಹೇಳುತ್ತಿದ್ದೀಯ ಅವರು ನಿನ್ನ ತಂದೆ ಡಾ॥ ಕಾರ್ತಿಕ್ ಮತ್ತು ತಾಯಿ ಸುಗಂಧಿಯಲ್ಲವೇ ?"

"ಏನಪ್ಪಾ, ನೀವು ಹೇಳುವುದು ? ಈ ಇಬ್ಬರು ಅಂಕಲ್‌ಗಳು ಎಷ್ಟೊಂದು ಒಳ್ಳೆಯವರು ! ಇವರಿಲ್ಲದಿದ್ದರೆ ನಾನು ಬದುಕಿ ಬರುತ್ತಿದ್ದೆನಾ ? ನಾನು ಇವರಿಗೆ ಎಷ್ಟೊಂದು ಕೃತಜ್ಞತೆ ಸಲ್ಲಿಸಿದರೂ ಸಾಲದು. ನೀವು ಹೇಳುವುದು ನಿಜ ಆಂಟಿ. ನನ್ನನ್ನು ತಮ್ಮ ಸ್ವಂತ ಮಗನಂತೆ ಕಾಣುತ್ತಾರೆ" ಎಂದ ಚರಣನ ಮಾತಿಗೆ ಇಬ್ಬರಿಗೂ ಮೂರ್ಛೆ ಬಂದಂತಾಯಿತು.

ಡಾ॥ ಕಾರ್ತಿಕ್‌ಗೆ ಏನು ಹೇಳಬೇಕೆಂದೇ ತೋಚಲಿಲ್ಲ. ಮಂಕುಬಡಿದವನಂತೆ ನಿಂತಿದ್ದ ಅವನನ್ನು ಡಾ॥ ಸಂಗಮ್ ಸಮಾಧಾನಪಡಿಸುತ್ತ, "ಕಾರ್ತಿಕ್, ನೀನು ಈಗ ನಿನ್ನ ಮಗನನ್ನು ಕಳೆದುಕೊಂಡಿದ್ದೀಯ. ಈ ಕಹಿ ಸತ್ಯವನ್ನು ಒಪ್ಪಿಕೊಳ್ಳಲೇಬೇಕು. ನಿನ್ನ ವೈಜ್ಞಾನಿಕ ಅನ್ವೇಷಣೆಗಳ ದುಷ್ಪರಿಣಾಮದ ಬಗ್ಗೆ ಯೋಚಿಸಲೇ ಇಲ್ಲ. ಬಹುಶಃ ನಿನ್ನ ಕ್ರಿಯೆಯಿಂದ ನಿನ್ನ ಮಗ ಚರಣನ ಮೆದುಳು ಚೇತನನ ಮೆದುಳಾಗಿ ಮಾರ್ಪಟ್ಟಿರುವುದಲ್ಲದೆ ಅವನ ಸಂಪೂರ್ಣ ವ್ಯಕ್ತಿತ್ವ ಚೇತನನ ವ್ಯಕ್ತಿತ್ವವಾಗಿ ಮಾರ್ಪಟ್ಟಿದೆ. ಹಾಗಾಗಿ ಅವನು ಚೇತನನಂತೆ ವರ್ತಿಸುತ್ತಿದ್ದಾನೆ" ಎಂದರು.

ಡಾ॥ ಕಾರ್ತಿಕ್ ಉಕ್ಕಿಬರುತ್ತಿರುವ ದುಃಖವನ್ನು ತಡೆಯಲಾರದೆ, "ಡಾಕ್ಟರ್, ಏನಾದರೂ ಮಾಡಿ ನನ್ನ ಮಗನನ್ನು ಉಳಿಸಿಕೊಡಿ. ನಾನು ಅವನನ್ನು ಬಿಟ್ಟಿರಲಾರೆ ! ನನ್ನ ಪ್ರಯೋಗ ಫಲಪ್ರದವಾಗಲಿಲ್ಲ. ನನ್ನ ಸ್ವಾರ್ಥ ನನ್ನನ್ನು ಕುರುಡು ಮಾಡಿತು. ಅಯ್ಯೋ ! ನಾನೇನು ಮಾಡಲಿ" ಎಂದು ವಿಲವಿಲ ಒದ್ದಾಡತೊಡಗಿದರು.

ಇವರಿಬ್ಬರ ತೊಳಲಾಟವನ್ನು ನೋಡುತ್ತಿದ್ದ ಅವಿನಾಶ್‌ಗೆ ಏನೂ ಅರ್ಥವಾಗಲಿಲ್ಲ. ಅವನು ಕಾರ್ತಿಕನ ಕಡೆ ತಿರುಗಿ, "ಕಾರ್ತಿಕ್, ಏನಾಯಿತು ? ಮಗ ರ್‍ಯಾಂಕ್ ಬಂದಿದ್ದಕ್ಕೆ ಸಂತೋಷಪಡುವುದಕ್ಕೆ ಬದಲಾಗಿ ಯಾಕಾಗಿ ಅಳುತ್ತಿದ್ದೀಯ ? ನೀನೇ ಹೀಗೆ ಅಳುತ್ತಿದ್ದರೆ ಮಗನನ್ನು ಕಳೆದುಕೊಂಡ ನಾನೆಷ್ಟು ದುಃಖಿಸಬೇಕು ?"

ಮಧ್ಯೆ ಪ್ರವೇಶಿಸಿದ ಡಾ॥ ಸಂಗಮ್, "ಇಲ್ಲ ಮಿಸ್ಟರ್ ಅವಿನಾಶ್. ಇಲ್ಲ, ನೀವು ನಿಮ್ಮ ಮಗನನ್ನು ಕಳೆದುಕೊಂಡಿಲ್ಲ. ನಿಮ್ಮ ಮಗ ಸತ್ತಿಲ್ಲ" ಎಂದರು.

"ಏನು ಮಾತನಾಡುತ್ತಿದ್ದೀರಿ ? ಈ ಕ್ರೂರ ತಮಾಷೆಯನ್ನು ನನ್ನ ಮೇಲೆ ಏಕೆ ಪ್ರಯೋಗಿಸು ತ್ತಿದ್ದೀರಿ ? ಈ ಕೈಗಳಿಂದಲೇ ನಾನು ನನ್ನ ಮಗನಿಗೆ ಚಿತೆಯನ್ನು ಹೊತ್ತಿಸಿದ್ದೇನೆ" ಎಂದು ಹೇಳುತ್ತಾ ಬಿಕ್ಕಿಬಿಕ್ಕಿ ಅಳತೊಡಗಿದರು.

ಅವಿನಾಶನನ್ನು ಸಮಾಧಾನಪಡಿಸುತ್ತಾ ಡಾ॥ ಸಂಗಮ್, "ನೀವು ಹೇಳುವುದು ನಿಜ. ಆದರೆ ಯಾವಾಗ ಚೇತನನನ್ನು ಬದುಕಿಸಲು ಸಾಧ್ಯ ವಿಲ್ಲವೆಂದು ನಮಗೆ ಅರಿವಾಯಿತೋ ಡಾ॥ ಕಾರ್ತಿಕ್ ಮತ್ತು ನಾನು ಸೇರಿ ಅವನ ನೆನಪಿನ ಕೋಶಗಳನ್ನು ತೆಗೆದು ಚರಣನ ಮೆದುಳಿಗೆ ಕಸಿ ಮಾಡಿದೆವು. ಅದರ ಪರಿಣಾಮವಾಗಿ ಚರಣ್ ಈಗ ಸಂಪೂರ್ಣವಾಗಿ ಚೇತನನಾಗಿ ಮಾರ್ಪಾಡಾಗಿದ್ದಾನೆ. ಅವನಲ್ಲಿ ಚೇತನನ ವ್ಯಕ್ತಿತ್ವವನ್ನು ಕಾಣಬಹುದೇ ವಿನಾ ಚರಣನ ವ್ಯಕ್ತಿತ್ವವನ್ನು ಕಾಣಲು ಸಾಧ್ಯವಿಲ್ಲ. ಆತನು ತಾನು ಚೇತನ ಎಂದೇ ತಿಳಿದಿದ್ದಾನೆ. ಈಗ ಪುನಃ ಮೆದುಳನ್ನು ಕಸಿ ಮಾಡಿದರೂ ಅವನು ಮೊದಲಿನ ಪರಿಸ್ಥಿತಿಗೆ ಬರಲು ಸಾಧ್ಯವಿಲ್ಲ, ಅಷ್ಟೇ ಅಲ್ಲದೆ ಹಾಗೆ ಮಾಡಿದಲ್ಲಿ ಅವನ ಜೀವಕ್ಕೂ ಕೂಡ ಅಪಾಯವಾಗಬಹುದು" ಎಂದರು.

"ಅಯ್ಯೋ ! ನಾನೇನು ಮಾಡಲಿ ? ನನ್ನ ಪ್ರಯೋಗಕ್ಕೆ ಧಿಕ್ಕಾರವಿರಲಿ. ನನ್ನ ಮಗನನ್ನು ನಾನೇ ಕೈಯಾರ ಕಳೆದುಕೊಂಡೆ. ನನ್ನಂತಹ ಪಾಪಿಷ್ಟ ಇನ್ನಾರೂ ಇರಲಾರರು. ನನ್ನನ್ನು ನಾನೇ ಕ್ಷಮಿಸಿಕೊಳ್ಳಲಾರೆ." ಎನ್ನುತ್ತ ಕಾರ್ತಿಕ್ ತಲೆತಲೆ ಚಚ್ಚಿಕೊಳ್ಳುತ್ತಾ ಗೋಳಾಡತೊಡಗಿದ. ಜೊತೆಯಲ್ಲಿ ಅವನಿಗಿಂತಲೂ ಹೆಚ್ಚಾಗಿ ಗೋಳಾಡುತ್ತಿದ್ದ ಸುಗಂಧಿಯನ್ನಂತೂ ಸಮಾಧಾನಪಡಿಸುವ ಸ್ಥಿತಿಯಲ್ಲೇ ಇರಲಿಲ್ಲ. ಅವರಿಬ್ಬರ ಪರಿಸ್ಥಿತಿಯನ್ನು ನೋಡಿ ಅವಿನಾಶನ ಕಣ್ಣುಗಳಲ್ಲಿ ನೀರುದುರುತ್ತಿತ್ತು.

ಇದಾವುದರ ಪರಿವೆಯೂ ಇಲ್ಲದ ಚರಣ ಮಾತ್ರ ಚೇತನನ ಕೊಠಡಿಯಲ್ಲಿ ಕುಳಿತುಕೊಂಡು ತನಗೆ ಸಂಬಂಧವೇ ಇಲ್ಲವೆಂಬಂತೆ ತನ್ನಷ್ಟಕ್ಕೆ ತಾನು ಯಾವುದೋ ಪುಸ್ತಕದಲ್ಲಿ ಮುಳುಗಿಹೋಗಿದ್ದ.

**ವಿ. ಗಣೇಶ್**
ನಂ. ೫೬, ಚಾಮರಾಜಪೇಟೆ
ಸಾಗರ ಪೋಸ್ಟ್, ಶಿವಮೊಗ್ಗ ಜಿಲ್ಲೆ

## ಗೂಢಾರ್ಥ

ನೀನು ಅರಚಿದ
ಮಾತು
ನನಗೆ ಕೇಳಿಸಲೇ ಇಲ್ಲ
ಆದರೆ
ನಿನ್ನ ಪಿಸು ಮಾತು
ಲೋಕವೇ ಆಲಿಸಿತ್ತು

**ಎಂ. ಜಿ. ದೇಶಪಾಂಡೆ**
ಬೀದರ್

ಎನ್. ವಿದ್ಯಾಶಂಕರ್

ಸಿನಿಮಾ ಎಂದ ಕೂಡಲೆ ಥಟ್ಟನೆ ನಮ್ಮ ಮನಸ್ಸಿನಲ್ಲಿ ಮೂಡುವ ಚಿತ್ರಗಳೆಂದರೆ ನಾಯಕ-ನಾಯಕಿಯರು, ಅದರ ಪಾತ್ರಧಾರಿಗಳಾದ ತಾರೆಯರು, ಖಳನಾಯಕರು, ಒಂದಷ್ಟು ಹಾಸ್ಯ ಸನ್ನಿವೇಶಗಳು, ಕೆಲವು ಹಾಡುಗಳು, ಕುಣಿತ, ಹೊಡೆದಾಟ-ಬಡಿದಾಟ, ನಿಸರ್ಗದ ಹಲವು ಸುಂದರ ತಾಣಗಳು, ಪ್ರೀತಿ, ಪ್ರೇಮ, ಪ್ರಣಯ ಮತ್ತು ದ್ವೇಷ-ಪ್ರತೀಕಾರದ ಕತೆಗಳು. ಹೆಚ್ಚಿನ ಜನಸಮುದಾಯಕ್ಕೆ ಇಂತಹ ಚಿತ್ರಗಳೊಟ್ಟಿಗಿರುವುದು ಭಾವನಾತ್ಮಕ ಸಂಬಂಧವೆ. ಆದ್ದರಿಂದಲೇ ಸಿನಿಮಾ ಇನ್ನೂ ಕೇವಲ ಮನೋರಂಜನೆಯ ಪರಿಕರ ಮಾತ್ರ. ಮನೋವಿಕಾಸಕ್ಕೆ, ಬುದ್ಧಿಗೆ ಸಂಬಂಧಿಸಿದ್ದಲ್ಲ.

ಇನ್ನೊಂದೆಡೆ, ಜನಮನ್ನಣೆಯನ್ನು ಪಡೆಯದ, ಸಮುದಾಯ, ಚಿತ್ರ ರಸಿಕರು ನೋಡುವ ಮುಂಚೆಯೇ 'ಕಲಾತ್ಮಕತೆ'ಯ ಹಣೆಪಟ್ಟಿ ಹೊತ್ತುಕೊಂಡು, ದೆಹಲಿಯಲ್ಲಿ ನಾಲ್ಕೈದು ಮಂದಿ ಕುಳಿತು ನಿರ್ಧರಿಸುವ ಪ್ರಶಸ್ತಿಗಳ ಕೀರ್ತಿಯಲ್ಲಿ ಮಾತ್ರ ಮಿಂಚುವ ಸಿನಿಮಾ. ಬೌದ್ಧಿಕ ಕಸರತ್ತು ಎನಿಸುವಷ್ಟರಮಟ್ಟಿಗೆ ಪುನರಾವೃತ್ತವಾಗುತ್ತಿರುವ ಈ ಅಭಿವ್ಯಕ್ತಿಗೆ ಆಸರೆಯಾಗಿರುವುದು ಪ್ರಸಿದ್ಧ ಸಾಹಿತ್ಯ ಕೃತಿಗಳು, ಕಥಾವಸ್ತುವಿನ ಆರ್ದ್ರತೆ ಮತ್ತು ಕೆಲವು ತಂತ್ರಜ್ಞರ ಕೌಶಲ್ಯ. ಇಲ್ಲಿ ಮನುಷ್ಯನ ಸೌಂದರ್ಯೋಪಾಸನೆ, ಭಾವಜೀವಿತ್ವಕ್ಕೆ ಅಷ್ಟಾಗಿ ಸ್ಥಾನವಿಲ್ಲ. ಇದು ಬರೀ ಬುದ್ಧಿಗೆ ಸಂಬಂಧಿಸಿದ್ದು.

ಈ ವಿರೋಧಾಭಾಸಗಳ ನಡುವೆ ಸಿನಿಮಾ ಮಾಧ್ಯಮ ತನ್ನ ನಿಜವಾದ ಸೃಜನಶೀಲತೆ ಮತ್ತು ಅದರ ಸಾಧ್ಯತೆಗಳನ್ನು ಕಳೆದುಕೊಂಡಿದೆಯೇನೋ ಎಂಬ ಅನುಮಾನವಿದೆ. ಸಂಗೀತ, ನೃತ್ಯ, ನಾಟಕ ಮತ್ತು ಕಾವ್ಯದ ಜೊತೆಗೆ ಆಧ್ಯಾತ್ಮಿಕ ಮತ್ತು ಅದರ ಮೂಲಕ ಭಾವನಾತ್ಮಕ ಸಂಬಂಧಗಳನ್ನು

# ನೆರಳು - ಬೆಳಕಿನ ವ್ಯಾಖ್ಯಾನಕಾರ - ವಿ. ಕೆ. ಮೂರ್ತಿ



ಸಾವಿರಾರು ವರ್ಷಗಳಿಂದ ರೂಢಿಸಿಕೊಂಡ ನಾಗರಿಕತೆ ಅವೆಲ್ಲವನ್ನೂ ಸರಳೀಕರಿಸಿ, ಅಸಭ್ಯಗೊಳಿಸಿ ಸಿನಿಮಾದಲ್ಲಿ ಅಳವಡಿಸಿಕೊಳ್ಳುವುದು ಎಷ್ಟು ಸೂಕ್ತ ಅಥವಾ ಅವೆಲ್ಲವನ್ನು ಸಂಪೂರ್ಣವಾಗಿ ನಿರಾಕರಿಸುವುದಾದರೂ ಎಷ್ಟರಮಟ್ಟಿಗೆ ಸಾಧುವಾದ ಆಯ್ಕೆ ಎನ್ನುವುದು ಇನ್ನೂ ಗಂಭೀರವಾಗಿ ಚರ್ಚೆಯಾಗಬೇಕಾದ ವಿಚಾರ. ಹಾಗೆಯೇ, ಸಿನಿಮಾದಲ್ಲಿನ ಕಲಾತ್ಮಕತೆಯ ಅಂಶಗಳು ಯಾವುವು, ಅದರಲ್ಲಿ ಕುಶಲತೆಯ ಸ್ಥಾನ ಎಲ್ಲಿದೆ, ವೇಗವಾಗಿ ಬದಲಾಗುತ್ತಲೇ ಇರುವ ಆರ್ಥಿಕ ಮತ್ತು ತಾಂತ್ರಿಕ ಆಯಾಮಗಳನ್ನು ನಿರ್ವಹಿಸುವ ಕ್ರಮ ಯಾವುದು, ಬೌದ್ಧಿಕತೆ ಮತ್ತು ಭಾವನಾತ್ಮಕತೆಯ ಸಮತೋಲನವನ್ನು ಕಾಪಾಡುವುದರ ಮಹತ್ವವೇನು... ಮುಂತಾದ ವಿಷಯಗಳ ಬಗ್ಗೆಯೂ ಹೆಚ್ಚಿನ ತಿಳಿವಳಿಕೆಯ ಅಗತ್ಯವಿದೆ.

ಭಾರತೀಯ ಚಿತ್ರರಂಗದಲ್ಲಿನ ಅತ್ಯುನ್ನತ ಪ್ರಶಸ್ತಿಯಾದ ದಾದಾಸಾಹೇಬ್ ಫಾಲ್ಕೆ ಪ್ರಶಸ್ತಿಯನ್ನು ಪಡೆದ ಮೊದಲ ತಂತ್ರಜ್ಞರಾದ, ಅಪರೂಪದ ವ್ಯಕ್ತಿತ್ವದ ಶ್ರೀ ವಿ. ಕೆ. ಮೂರ್ತಿಯವರ ನಿಧನದ ಸಂದರ್ಭದಲ್ಲಿ ನಾನು ಮೇಲೆ ಸೂಚಿಸಿದ ವಿರೋಧಾಭಾಸದ ಮಾತುಗಳನ್ನು ಪರಿಶೀಲಿಸುವ ಅಗತ್ಯವಿದೆ. ತಂತ್ರಜ್ಞ ಎಂದ ಕೂಡಲೆ ಯಂತ್ರಗಳ ಸಾಧ್ಯತೆಗಳ ಬಳಕೆ, ಕೌಶಲ್ಯ, ವೃತ್ತಿಪರತೆಯ ಬಗ್ಗೆ ಹೆಚ್ಚು ಒತ್ತುಕೊಡಲಾಗುತ್ತದೆ. ಆದರೆ ಮೂರ್ತಿಯವರ ಪ್ರತಿಭೆ ಈ ಮೂರು ಅಂಶಗಳಿಂದಾಚೆಗಿನದು. ಅವರಿಗೆ ಛಾಯಾಗ್ರಹಣ ಕೇವಲ ವೃತ್ತಿಯಾಗಿರಲಿಲ್ಲ. ಅದನ್ನು ಅವರು ಆಯ್ದುಕೊಂಡದ್ದು ಪ್ರಜ್ಞಾಪೂರ್ವಕವಾಗಿ ಮತ್ತು ತಮ್ಮ ಬದುಕಿನ ಅನ್ವೇಷಣೆಯ ಒಂದು ಮಾರ್ಗವಾಗಿ. ಮಾಧ್ಯಮದ ಸೃಜನಾತ್ಮಕ ಸಾಧ್ಯತೆಗಳ ಹುಡುಕಾಟದಲ್ಲಿ.

೧೯೨೨ರಲ್ಲಿ ಮೈಸೂರಿನಲ್ಲಿ ಜನಿಸಿದ ಮೂರ್ತಿಯವರು ಪಡೆದದ್ದು ಅಷ್ಟೇನೂ ಆರ್ಥಿಕವಾಗಿ

ಬಾಲ್ಯದಲ್ಲಿ ಸಂಗೀತವನ್ನು ಶಾಸ್ತ್ರೀಯವಾಗಿ ಅಭ್ಯಾಸಮಾಡಿದ ಮೂರ್ತಿಯವರು ಆ ಕಾಲದ ಹೊಸ ಮಾಧ್ಯಮವಾದ ಸಿನಿಮಾದ ಸೆಳೆತಕ್ಕೂ ಸಿಕ್ಕಿದ್ದರು. ಮೂಕಿ ಚಿತ್ರಗಳು ಹಿನ್ನೆಲೆಗೆ ಸಂಗೀತವನ್ನು ಚಿತ್ರಮಂದಿರಗಳಲ್ಲೇ ಅಳವಡಿಸಿಕೊಳ್ಳುತ್ತಿದ್ದ ಆ ಕಾಲದಲ್ಲಿ ಸಿನಿಮಾವನ್ನು ಅವರು ಹತ್ತಿರದಿಂದ ಕಂಡದ್ದು ಸಂಗೀತದ ಮಾಧುರ್ಯದ ಮೂಲಕ ಹಾಗೂ ಲಯಕ್ಕೆ ತಕ್ಕಹಾಗೆ ಚಲಿಸುವ ದೃಶ್ಯ ಸಂಯೋಜನೆಗಳಲ್ಲಿ. ಅವರು ನಂತರದ ದಿನಗಳಲ್ಲಿ ಆಯ್ದುಕೊಂಡ ಛಾಯಾಗ್ರಹಣ ವೃತ್ತಿಯಲ್ಲಿ ಬಹುಶಃ ಅತ್ಯಂತ ಸ್ಪಷ್ಟವಾಗಿ ಅಭಿವ್ಯಕ್ತಗೊಳ್ಳುವ ಪರಿಕಲ್ಪನೆಗಳೆಂದರೆ ಈ ಮಾಧುರ್ಯ ಮತ್ತು ಲಯಗಾರಿಕೆಗಳೇ. ಅವರ ಎಲ್ಲ ಮಹತ್ತರ ಚಿತ್ರಗಳಲ್ಲಿನ ದೃಶ್ಯ ಮತ್ತು ಬೆಳಕಿನ ಸಂಯೋಜನೆಗಳಲ್ಲಿ ಕಾಣುವುದು ನೆರಳು-ಬೆಳಕಿನ ವೈಭವ, ಲಾಲಿತ್ಯ ಮತ್ತು ಮಧುರ ಭಾವನೆಗಳ ಭಾವುಕ ಅಭಿವ್ಯಕ್ತಿಯ ಸಮತೋಲನ.

ದೃಢವಾಗಿರದ ಸಾಂಸಾರಿಕ ವಾತಾವರಣದಲ್ಲಿ. ಚಿಕ್ಕಂದಿನಲ್ಲೇ ತಾಯಿಯನ್ನು ಕಳೆದುಕೊಂಡ ಅವರಿಗೆ ಲಭಿಸಿದ್ದು ಹೆಂಗಸರೇ ಇಲ್ಲದ ಕುಟುಂಬದ ಅನುಭವ. ಹಾಗಾಗಿ ಅವರ ಬಾಲ್ಯದ ಅನುಭವಗಳಲ್ಲಿ ಹೊರಗಿನ ಪ್ರಪಂಚದ ವಿನ್ಯಾಸಗಳೇ ಹೆಚ್ಚು ಢಾಳಾಗಿ ಕಾಣುತ್ತವೆ. ಅದೃಷ್ಟವಶಾತ್, ಆ ಕಾಲದ ಮೈಸೂರು ಸಾಮುದಾಯಿಕವಾಗಿ, ಸಾಂಸ್ಕೃತಿಕವಾಗಿ ಶ್ರೀಮಂತ ಪರಿಸರ ಹೊಂದಿತ್ತು. ಮೂರ್ತಿಯವರಿಗೆ ತಮ್ಮ ಮನೆಯಲ್ಲಿ ಹೆಣ್ಣಿನ ಧರಿತ್ರಿ ಪಾಲನೆ ದೊರೆಯದೇ ಹೋದರೂ ಸಮಾಜದ ಪ್ರೀತಿ, ಸ್ನೇಹಗಳಿಗೇನೂ ಕೊರತೆಯಿರಲಿಲ್ಲ. ಅವರ ನೆನಪುಗಳಲ್ಲಿ ಯಾವತ್ತೂ ಬಾಲ್ಯದ ಬಗ್ಗೆ ವಿಷಾದವಾಗಲೀ, ಕೊರಗಾಗಲೀ, ತಮ್ಮ ಅಂದಿನ ಆರ್ಥಿಕ ಪರಿಸ್ಥಿತಿಯ ಬಗ್ಗೆ ಅವಮಾನವಾಗಲೀ, ಸಂಕೋಚವಾಗಲೀ, ಕಾಣಲೇ ಇಲ್ಲ. ಕಡೆಗಾಲದವರೆವಿಗೂ, ತಮ್ಮ ಜೀವನದ ಆ ಕಾಲವನ್ನು ಬದುಕಿನ ಆಗುಹೋಗುಗಳ ಒಂದು ಸಹಜ ಹಂತವಾಗಿ ಮಾತ್ರವೇ ಅವರು ಕಂಡಿದ್ದನ್ನು ಅವರ ಜೀವನಚರಿತ್ರೆಯ ಪುಟಗಳಲ್ಲಿ ನಾವು ಗುರುತಿಸಬಹುದು. ಬಾಲ್ಯದಲ್ಲಿ ಸಂಗೀತವನ್ನು ಶಾಸ್ತ್ರೀಯವಾಗಿ ಅಭ್ಯಾಸಮಾಡಿದ ಮೂರ್ತಿಯವರು ಆ ಕಾಲದ ಹೊಸ ಮಾಧ್ಯಮವಾದ ಸಿನಿಮಾದ ಸೆಳೆತಕ್ಕೂ ಸಿಕ್ಕಿದ್ದರು. ಮೂಕಿ ಚಿತ್ರಗಳು ಹಿನ್ನೆಲೆಗೆ ಸಂಗೀತವನ್ನು ಚಿತ್ರಮಂದಿರಗಳಲ್ಲೇ ಅಳವಡಿಸಿಕೊಳ್ಳುತ್ತಿದ್ದ ಆ ಕಾಲದಲ್ಲಿ ಸಿನಿಮಾವನ್ನು ಅವರು ಹತ್ತಿರದಿಂದ ಕಂಡದ್ದು ಸಂಗೀತದ ಮಾಧುರ್ಯದ ಮೂಲಕ ಹಾಗೂ ಲಯಕ್ಕೆ ತಕ್ಕಹಾಗೆ ಚಲಿಸುವ ದೃಶ್ಯ ಸಂಯೋಜನೆಗಳಲ್ಲಿ. ಅವರು ನಂತರದ ದಿನಗಳಲ್ಲಿ ಆಯ್ದುಕೊಂಡ ಛಾಯಾಗ್ರಹಣ ವೃತ್ತಿಯಲ್ಲಿ ಬಹುಶಃ ಅತ್ಯಂತ ಸ್ಪಷ್ಟವಾಗಿ ಅಭಿವ್ಯಕ್ತಗೊಳ್ಳುವ ಪರಿಕಲ್ಪನೆಗಳೆಂದರೆ ಈ ಮಾಧುರ್ಯ ಮತ್ತು ಲಯಗಾರಿಕೆಗಳೇ. ಅವರ ಎಲ್ಲ ಮಹತ್ತರ ಚಿತ್ರಗಳಲ್ಲಿನ ದೃಶ್ಯ ಮತ್ತು ಬೆಳಕಿನ ಸಂಯೋಜನೆಗಳಲ್ಲಿ ಕಾಣುವುದು ನೆರಳು-ಬೆಳಕಿನ ವೈಭವ, ಲಾಲಿತ್ಯ ಮತ್ತು ಮಧುರ ಭಾವನೆಗಳ ಭಾವುಕ ಅಭಿವ್ಯಕ್ತಿಯ ಸಮತೋಲನ. ದೃಶ್ಯಮಾಧ್ಯಮದಲ್ಲಿ ಸುಲಭವಾಗಿ ಪ್ರೇಕ್ಷಕರನ್ನು ಭಾವುಕರಾಗಿಸಬಹುದು, ರೊಚ್ಚಿಗೆಬ್ಬಿಸಬಹುದು, ಕಾಮ ಪ್ರಚೋದನೆಗೆ ಮಾಧ್ಯಮವಾಗಿಸಬಹುದು. ಆದರೆ ಶೃಂಗಾರ, ಬುದ್ಧಿ ಮತ್ತು ಭಾವಗಳ ಸಮತೋಲನವನ್ನು ಕಾಪಾಡುವುದೇ ಆ ಮಾಧ್ಯಮದ ಕಲಾತ್ಮಕ ಅಭಿವ್ಯಕ್ತಿಯ ಅಳತೆಗೋಲು. ಮೂರ್ತಿಯವರು ಆ ದೃಷ್ಟಿಯಿಂದ ಅತ್ಯಂತ ಯಶಸ್ವಿಯಾದ ಛಾಯಾಗ್ರಾಹಕರಲ್ಲಿ ಒಬ್ಬರು.



ಸಿನಿಮಾ ಮಾಧ್ಯಮಕ್ಕೆ ಸೆಳೆಯಲ್ಪಡುವ ಎಲ್ಲ ಮಕ್ಕಳಂತೆ, ಯುವಕರಂತೆ ಮೂರ್ತಿಯವರಿಗೂ ಚಿಕ್ಕಂದಿನಿಂದಲೂ ಸಿನಿಮಾ ಸೇರಬೇಕು, ನಟನಾಗಿ ಪ್ರಸಿದ್ಧನಾಗಬೇಕು, ಜನಪ್ರಿಯನಾಗಬೇಕು ಎನ್ನುವ ಹಂಬಲ ಇತ್ತು. ಆ ಗೀಳಿನಿಂದಲೇ ಮುಂಬೈಗೆ ಹೋದದ್ದೂ ಆಯಿತು, ಸಿನಿಮಾ ಆಕರ್ಷಣೆಯನ್ನು ದುರುಪಯೋಗಪಡಿಸಿಕೊಳ್ಳುವವರ ಸಂಚಿಗೆ ಬಲಿಯಾಗಿಯೂ ಆಯಿತು, ಮತ್ತೆ ಮೈಸೂರಿಗೆ ಹಿಂದಿರುಗಿದ್ದೂ ಆಯಿತು. ಆದರೆ ಸಿನಿಮಾ ಬಗೆಗಿನ ಅವರ ಆಸಕ್ತಿಯೇನೂ ಕಡಿಮೆಯಾಗಲಿಲ್ಲ. ಮುಂಬೈಗೆ ಹೋಗಿಬಂದ ಅನುಭವದಿಂದ ಸಿನಿಮಾದಲ್ಲಿ ಪ್ರಸಿದ್ಧರಾಗುವ, ಜನಪ್ರಿಯರಾಗುವುದರ ಮಿತಿಯ ಅರಿವು ಆಗಿದ್ದರಿಂದಲೇ ನಟನಾಗುವ ಆಸೆ ಬಿಟ್ಟು ತಂತ್ರಜ್ಞಾನದ ಬಗ್ಗೆ, ಅದರಲ್ಲೂ ಮುಖ್ಯವಾಗಿ ಛಾಯಾಗ್ರಹಣದ ಬಗ್ಗೆ, ಕುತೂಹಲವನ್ನು ರೂಢಿಸಿಕೊಂಡರು.

ಈ ಮಧ್ಯೆ ಸ್ವಾತಂತ್ರ್ಯ ಹೋರಾಟದ ಬಿಸಿ ಅವರಿಗೂ ತಟ್ಟಿ ಜೈಲುವಾಸ ಅನುಭವಿಸಿಯೂ ಆಯಿತು. ಎಂ. ವಿ. ಕೃಷ್ಣಪ್ಪ, ಶಾರದಾಪ್ರಸಾದ್ ಮೊದಲಾದವರ ಸಹವಾಸದಲ್ಲಿ ರಾಜಕೀಯ, ಸಾಮಾಜಿಕ ಹೋರಾಟದ ನೆಲೆಗಳ ಅರಿವೂ ಅವರಲ್ಲಿ ಮೂಡಿತು.

ಹಳೇ ಮೈಸೂರು ಪ್ರಾಂತ್ಯ ಆಧುನಿಕ ತಂತ್ರಜ್ಞಾನದ ಬೆಳವಣಿಗೆಯ ಬಗ್ಗೆ ದೂರದೃಷ್ಟಿತ್ವವನ್ನು ಹೊಂದಿದ್ದ ಪ್ರದೇಶ. ಸರ್ ಎಂ. ವಿ. ಮತ್ತು ಮೈಸೂರು ಮಹಾರಾಜರು ವಿಜ್ಞಾನ ಮತ್ತು ತಾಂತ್ರಿಕ ಶಿಕ್ಷಣ, ಬ್ಯಾಂಕಿಂಗ್ ಉದ್ದಿಮೆ ಮುಂತಾದ ಆಧುನಿಕ ಸಂಸ್ಥೆಗಳನ್ನು ಸ್ಥಾಪಿಸುವುದರಲ್ಲಿ ಮುಂಚೂಣಿಯಲ್ಲಿ ಇದ್ದವರು. ಅದರ ಮುಂದುವರಿಕೆಯಾಗಿ ಬೆಂಗಳೂರಿನಲ್ಲಿ ಸಿನಿಮಾಟೋಗ್ರಫಿ ಸಂಬಂಧಿತ ವೃತ್ತಿ ಶಿಕ್ಷಣ ಸಂಸ್ಥೆಯೊಂದು ನಲವತ್ತರ ದಶಕದಲ್ಲಿಯೇ ಪ್ರಾರಂಭವಾಯಿತು. ಮೂರ್ತಿಯವರು ಆ ಕಾಲದಲ್ಲಿ ತಮಗೆ ಸಿಕ್ಕಿದ ಅವಕಾಶವನ್ನು ಪೂರ್ಣವಾಗಿ ಉಪಯೋಗಿಸಿಕೊಂಡು ಆ ಕ್ಷೇತ್ರದಲ್ಲಿ ಪರಿಣತಿಯನ್ನು ಶೈಕ್ಷಣಿಕವಾಗಿ ಪಡೆದುಕೊಂಡ ಕೆಲವೇ ಕೆಲವರಲ್ಲಿ ಪ್ರಮುಖರು. ನಂತರ ಅವರು ಮುಂಬೈಗೆ ಹೋದದ್ದು, ಹಲವಾರು ಚಿತ್ರಗಳಿಗೆ ಛಾಯಾಗ್ರಾಹಕರಾದದ್ದು, ಖ್ಯಾತ ನಿರ್ದೇಶಕ ಗುರುದತ್ ಅವರ ಸಹಭಾಗಿತ್ವದಲ್ಲಿ ಸೃಜಿಸಿದ ಚಿತ್ರಗಳು ಮಾಧ್ಯಮದ ಸಾಧ್ಯತೆಗಳನ್ನು ವಿಸ್ತರಿಸಿದ್ದು, ಭಾರತೀಯ ಚಿತ್ರರಂಗದಲ್ಲಿ ಚಾರಿತ್ರಿಕವಾಗಿ ಮಹತ್ವದ ಸ್ಥಾನ ಗಳಿಸಿದ್ದು ಎಲ್ಲವೂ ಈಗ ದಂತಕತೆಯಾಗಿದೆ. ನೆರಳು-ಬೆಳಕಿನ ದೃಶ್ಯ ಸಂಯೋಜನೆಯಲ್ಲಿ 'ಮೂರ್ತಿ ಛಾಪು' ಛಾಯಾಗ್ರಹಣ ತಂತ್ರಜ್ಞಾನದ ಬಳಕೆಯ ಬೆಳವಣಿಗೆಯಲ್ಲಿ ಮೈಲಿಗಲ್ಲಿನಂತೆ ಗುರುತಿಸಲ್ಪಡುತ್ತದೆ.

ಸಿನಿಮಾ ಒಂದು ಸಮ್ಮಿಶ್ರ ಕಲೆ. ಆದರೆ ಪ್ರೇಕ್ಷಕನ ದೃಷ್ಟಿಯಲ್ಲಿ ಅದೊಂದು ಸಂಪೂರ್ಣ ಅನುಭವ. ಅದರಲ್ಲಿನ ಎಲ್ಲಾ ಅಂಶಗಳೂ ಏಕಕಾಲಕ್ಕೆ ಬಿಡಿಯಾಗಿಯೂ ಹೌದು, ಒಂದಾಗಿಯೂ ಹೌದು. ಎಲ್ಲಾ ಅಂಶಗಳಿಗೂ ಸ್ವಾಯತ್ತತೆಯೂ ಇದೆ, ಸಾವಯವ ಸಂಬಂಧವೂ ಇದೆ. ಒಳ್ಳೆಯ ಸಿನಿಮಾದ ಲಕ್ಷಣವೆಂದರೆ ಅದರ ಸಾವಯವ ಶಿಲ್ಪ. ಒಟ್ಟಂದ ಇರುವುದೇ ಸಾವಯವ ಸಮಗ್ರೀಕರಣದಲ್ಲಿ. ಈ ಎಲ್ಲ ಪರಿಕಲ್ಪನೆಗಳು ಮೂರ್ತಿಯವರ ಚಿಂತನೆಯಲ್ಲಿ ಮತ್ತು ಅವರ ಕೃತಿಗಳಲ್ಲಿ ಅಡಕವಾಗಿವೆ. ಅವರ ಮಾತಿನಲ್ಲೇ ಹೇಳುವುದಾದರೆ : "ಒಬ್ಬ ಛಾಯಾಗ್ರಾಹಕನ ಕೆಲಸ ಕೇವಲ ದೃಶ್ಯ ಮೂಡಿಸುವುದಷ್ಟೇ ಅಲ್ಲ, ಅವನೊಬ್ಬ ಲೇಖಕನಾಗಬೇಕು, ಆದರೆ ಅವನು ಬರೆಯುವ ಪರಿಕರ ನೆರಳು-ಬೆಳಕು." "ಛಾಯಾಗ್ರಾಹಕನ ಕೆಲಸ ಬರೀ ಸುಂದರವಾದ ಫೋಟೋಗ್ರಫಿ ಮಾಡೋದಲ್ಲ. ಕತೆ ಚೆನ್ನಾಗಿ ಹೇಳೋದು. ಚೆನ್ನಾಗಿ ಕತೆ ಹೇಳಿದಾಗ ಎಲ್ಲೂ ಕ್ಯಾಮರಾ ತಲೆ ಹಾಕುವುದಿಲ್ಲ." ಅವರಿಗೆ ಬರವಣಿಗೆಯಲ್ಲೂ, ಚಿತ್ರಕಲೆಯಲ್ಲೂ, ಹಾಗೂ ಸಿನಿಮಾದಲ್ಲೂ ಒಂದು ಪ್ರತಿಮೆ ಇನ್ನೊಂದು ಪ್ರತಿಮೆಯೊಂದಿಗಿನ ಸಂಬಂಧದಿಂದ ಮಾರ್ಪಾಡಾಗ ಬೇಕು. ಅದಕ್ಕೆ ಅವರು ಪೂರಕವಾಗಿ ಹೇಳುವ ಸಾದೃಶ್ಯವೆಂದರೆ ಬಣ್ಣ, ಬಣ್ಣಗಳ ಸಂಪರ್ಕ. ಹಳದಿ, ಕೆಂಪು, ಹಸಿರು ಬಣ್ಣಗಳ ಪಕ್ಕ ನೀಲಿ ಬಣ್ಣ ಇಟ್ಟರೆ ಅದು ಬರೀ ನೀಲಿಯಾಗಿರುವುದಿಲ್ಲ. ಅವರ ಪ್ರಕಾರ




ಹಾಗಾದರೆ,.... ಮನೆಬಿಟ್ಟು ಮಠ ಸೇರುವೆ...!

ಈ ಮಾರ್ಪಾಟಿಲ್ಲದೆ ಕಲೆಯೇ ಇಲ್ಲ. ಸಿನಿಮಾ ಛಾಯಾಗ್ರಹಣಕ್ಕೇ ನಿರ್ದಿಷ್ಟವಾಗಿ ಅವರು ಹೇಳುವ ಮಾತುಗಳೆಂದರೆ : "ಬೆಳಕು ಕೂಡ ಒಬ್ಬ ಕಲಾವಿದ; ಬೆಳಕಿನಿಂದ ಅದು ರಾತ್ರಿಯೋ, ಸಂಜೆಯೋ, ಮುಂಜಾನೆಯೋ ಎಂಬುದು ತಿಳಿಯುತ್ತದೆ. ಬೆಳಕನ್ನು ಕಲಾವಿದನೆಂದುಕೊಂಡಾಗ ಮಾತ್ರ ಸರಿಯಾದ ಮೂಡ್ ಸೃಷ್ಟಿಸಲು ಸಾಧ್ಯವಾಗುತ್ತದೆ."

ಮೂರ್ತಿಯವರ ಇನ್ನೊಂದು ಮಹತ್ವದ ಕೊಡುಗೆಯೆಂದರೆ 'ದೃಶ್ಯ ವ್ಯಕ್ತಿಚಿತ್ರ'ಗಳನ್ನು ಕಟ್ಟಿಕೊಟ್ಟಿದ್ದು. ಒಬ್ಬ ಛಾಯಾಗ್ರಾಹಕನಿಗೆ ದೇಹವನ್ನು ಫೋಟೋಗ್ರಾಫ್ ಮಾಡೋದು ತೀರ ಸಹಜವಾದ ಕೆಲಸ. ಆದರೆ, ಆ ದೇಹದ ಜೊತೆಗೆ ಅದರ ಹಿಂದಿರುವ ವ್ಯಕ್ತಿತ್ವವನ್ನು, ಮನಸ್ಸನ್ನು, ಆ ಕ್ಷಣದ ಮನಃಸ್ಥಿತಿಯನ್ನು ಸೂಚಿಸುವುದು ಅಪರೂಪದ ಪ್ರತಿಭೆ. ಮುಗ್ಧ ಮಕ್ಕಳ, ವಯೋವೃದ್ಧರ, ಬಡತನದ, ಕ್ರೌರ್ಯದ ಚಿತ್ರಗಳನ್ನು ನಿಷ್ಕಪಟವಾಗಿ ತೆಗೆದಾಗ ಆ ಸಾಧ್ಯತೆಗಳಿಗೆ ಅವಕಾಶವಿದೆ. ಆದರೆ ಕೃತಕವಾಗಿ ಕಟ್ಟುವ ಕೆಲಸ ಕಷ್ಟವಾದದ್ದು. ಸಿನಿಮಾ ಮಾಧ್ಯಮದಲ್ಲಿ ನಟನ ಪ್ರತಿಭೆ ಮಾತ್ರ ಇದಕ್ಕೆ ಸಾಕಾಗುವುದಿಲ್ಲ. ನಿರ್ದೇಶಕನ ಕಾಣ್ಕೆ ಮತ್ತು ತಂತ್ರಜ್ಞಾನದ ಕೌಶಲ ಎರಡೂ ಬೇಕಾಗುತ್ತವೆ. ಹೀಗೆ ಕಾಣ್ಕೆಯನ್ನು ಗ್ರಹಿಸಿದ ಮತ್ತು ಕೌಶಲ್ಯವನ್ನು ಸೃಜನಾತ್ಮಕವಾಗಿ ಬಳಸಿದ ಕೆಲವೇ ತಂತ್ರಜ್ಞರಲ್ಲಿ ಮೂರ್ತಿಯವರೂ ಒಬ್ಬರು. ಅನೇಕ ಕಲಾವಿದರ, ಅದರಲ್ಲೂ ಪ್ರಮುಖವಾಗಿ ಗುರುದತ್ ಮತ್ತು ವಹೀದಾ ರೆಹಮಾನ್ ಅವರ ಈ 'ದೃಶ್ಯ ವ್ಯಕ್ತಿಚಿತ್ರ' ಕಟ್ಟಿಕೊಡುವಲ್ಲಿ ಮೂರ್ತಿಯವರ ಕಸಬುದಾರಿಕೆ ಕೆಲಸ ಮಾಡಿದೆ. ವಹೀದಾ ರೆಹಮಾನ್ ಅವರ ಮಾತುಗಳಲ್ಲೇ ಹೇಳುವುದಾದರೆ : "ನಾನೆಂದೂ ಚೆಲುವೆ ಅಂದುಕೊಂಡಿರಲಿಲ್ಲ. ಮೂರ್ತಿ ಸಾಬ್ ಫೋಟೋಗ್ರಾಫ್ ಮಾಡಿದ ಮೇಲೆ ನನ್ನನ್ನು ನಾನು ತೆರೆಯ ಮೇಲೆ ಕಂಡಾಗ ಹಂ... ಪರವಾಗಿಲ್ಲ ಎಂದುಕೊಂಡೆ !" ಈ ಮಾತುಗಳು ಸೂಚಿಸುವ "ತನ್ನನ್ನು ತಾನು ನೋಡುವ ಕ್ರಮವಾಗಿ" ಮೂರ್ತಿಯವರ 'ದೃಶ್ಯ ವ್ಯಕ್ತಿಚಿತ್ರ'ಗಳು ಕೆಲಸ ಮಾಡಿವೆ. ಗುರುದತ್ ಮಟ್ಟಿಗಂತೂ ಇವಿನ್ನೂ ದೊಡ್ಡ ಅಲೌಕಿಕ ಸತ್ಯವೆಂಬಂತೆ ಈಗ ಕಾಣುತ್ತದೆ. ಬಹುಶಃ ಗುರುದತ್ ಚಿತ್ರಗಳ ಮೂಲಕ ಮೂರ್ತಿಯವರು ಪಡೆದ ಯಶಸ್ಸು ಅವರಿಬ್ಬರಲ್ಲೂ ಜೊತೆಯಾಗಿಯೇ 'ನೋಡುವ' ಮತ್ತು 'ಕಾಣುವ' ಸಂಬಂಧದಿಂದ ಮೂಡಿದೆ ಎಂದು ಅನ್ನಿಸದೇ ಇರಲಾರದು. ಗುರುದತ್ ಸಹಭಾಗಿತ್ವದ ಅವರ ಚಿತ್ರಗಳು ಮತ್ತು ಇತರರೊಡನೆ ಸೃಷ್ಟಿಸಿದ ಚಿತ್ರಗಳಲ್ಲಿನ ಅವರ ಕೆಲಸವನ್ನು ಕೂಲಂಕಷವಾಗಿ, ತುಲನಾತ್ಮಕವಾಗಿ ಅಭ್ಯಸಿಸಿದರೆ, ಮಾಧ್ಯಮದ ಬಗೆಗಿನ ಅವರ ಗ್ರಹಿಕೆ ಮತ್ತು ಅದರ ಬಗ್ಗೆ ನಮ್ಮ ತಿಳುವಳಿಕೆ ಹೆಚ್ಚು ಸ್ಪಷ್ಟವಾದೀತು. ಯಾವುದೇ ವೃತ್ತಿಯಾದರೂ ಸೃಜನಶೀಲತೆಯ ಸಾಧ್ಯತೆಗಳಿಗೆ ಬೇಕಾದ ಅವಕಾಶ ಮತ್ತು ಪರಿಸರದ ಅಗತ್ಯದ ಬಗೆಗಿನ ಒಂದು ವ್ಯಾಖ್ಯೆಯೂ ಆಗಬಹುದೇನೋ.



'ಪ್ಯಾಸಾ' ಚಲನಚಿತ್ರ

ಮೂರ್ತಿಯವರ ವ್ಯಕ್ತಿ ವಿಶೇಷವೊಂದನ್ನು ಎಲ್ಲರೂ ಗಮನಿಸಬೇಕಾದ್ದು ಅವಶ್ಯ. ಅದರಲ್ಲೂ ಥಳುಕಿನ ಸಿನಿಮಾ ಜಗತ್ತಿನಲ್ಲಿರುವವರೆಲ್ಲಾ ಈ ಅಂಶವನ್ನು ಮಾದರಿಯಾಗಿ ನೋಡಬೇಕಾಗಿದೆ. ಮುಂಬಯಿಯ ಥಳುಕಿನ, ಹಣದ ಹೊಳೆಯ ವಿಶಾಲ ಪ್ರಪಂಚದಲ್ಲಿ ಅತ್ಯಂತ ಪ್ರತಿಭಾನ್ವಿತನೆಂದು ಗುರುತಿಸಲ್ಪಟ್ಟಿದ್ದರೂ, ತಾರಾಪುಂಜಗಳ ನಡುವೆ ಇದ್ದರೂ ಅವರು ತಮ್ಮ ಜೀವನಶೈಲಿಯಲ್ಲಿನ ಸರಳತೆಯನ್ನು ಯಾವತ್ತೂ ಕಳೆದುಕೊಳ್ಳಲಿಲ್ಲ.

'ಕಾಗಜ಼್ ಕೆ ಫೂಲ್' ಚಿತ್ರದ ಬಿಡುಗಡೆಗೆ ಮುಂಚೆಯೇ ಮೂರ್ತಿಯವರು ಅದರ ಬಗ್ಗೆ ಹೇಳಿದ ಮಾತು ಅವರ ವ್ಯಕ್ತಿತ್ವವನ್ನು ಸಮರ್ಪಕವಾಗಿ ಸೂಚಿಸುತ್ತದೆ. ಆ ಚಿತ್ರ ಗುರುದತ್‌ರ ಅತ್ಯಂತ ಮಹತ್ವಾಕಾಂಕ್ಷಿ ಮತ್ತು ಆತ್ಮಪ್ರತ್ಯಯದ ಚಿತ್ರ. ಚಿತ್ರ ನಿರ್ದೇಶಕನ ಬದುಕಿಗೆ ಸಂಬಂಧಿಸಿದ್ದು. ಆದರೆ ಮೂರ್ತಿಯವರಿಗೆ, 'ಪ್ಯಾಸಾ' ಚಿತ್ರ ಒಬ್ಬ ಸಾಮಾನ್ಯ ಮನುಷ್ಯನ ನಡುವಿನ ಕಲಾವಿದನ ಚಿತ್ರಣವಲ್ಲದೇ ಹೋದ್ದರಿಂದ ಸಮುದಾಯ ಅದನ್ನು ನಿರಾಕರಿಸುವ ಸಾಧ್ಯತೆಯೇ ಹೆಚ್ಚೆಂದು ವಾದಿಸಿದ್ದರು. ಕಲೆ ಸಮಾಜಮುಖಿ ಆಗಬೇಕೆಂಬುದು ಮತ್ತು ಕಲಾವಿದನೇ ಆದರೂ ಸಹ ಒಬ್ಬ ವ್ಯಕ್ತಿಯ ಯಶಸ್ಸು ಮತ್ತು ಅಧಃಪತನ ಅಷ್ಟೇನೂ ಮಹತ್ವದ ಕಥಾವಸ್ತುವಲ್ಲ ವೆಂಬುದು ಅವರ ಅಭಿಮತವಾಗಿತ್ತು. ದುರದೃಷ್ಟವಶಾತ್ ಆ ಚಿತ್ರ ಮೂರ್ತಿಯವರು ಹೇಳಿದ್ದಂತೆ ಜನರಿಂದ ಸಂಪೂರ್ಣವಾಗಿ ನಿರಾಕರಿಸಲ್ಪಟ್ಟಿತ್ತು. ಆದರೆ ಇಲ್ಲಿ ನಾವು ಗಮನಿಸಬೇಕಾದದ್ದು ಮೂರ್ತಿಯವರ ಸಮಾಜದ ಕಲ್ಪನೆಯನ್ನು. ಸ್ವಾತಂತ್ರ್ಯಪೂರ್ವ ಭಾರತದ, ಗಾಂಧೀಯುಗದ ಆದರ್ಶವಾದೀ ಯುವಕರಾಗೇ ಅವರು ಜೀವನದುದ್ದಕ್ಕೂ ಬದುಕಿದವರು. ಸ್ವಾತಂತ್ರ್ಯಾನಂತರ ನವ ಬಂಡವಾಳಶಾಹಿ ಶಕ್ತಿಗಳೂ




ಸಿನಿಮಾ ಮಾಧ್ಯಮವನ್ನು ವಾಣಿಜ್ಯೋದ್ಯಮವನ್ನಾಗಿ ಮಾಡಿದಾಗಲೂ ಅವರು ಅದಕ್ಕೆ ಮಾರುಹೋಗಲಿಲ್ಲ. ಬದಲಾಗಿ ಸಿನಿಮಾವನ್ನು ಒಂದು ಸೃಜನಶೀಲ ಮಾಧ್ಯಮವಾಗಿಯೇ ಗ್ರಹಿಸಿದರು. ನವೋದಯ ಸಾಂಸ್ಕೃತಿಕ ಪರಂಪರೆಯ ಎಲ್ಲಾ ಅಂಶಗಳೂ ಅವರಲ್ಲಿ ಮೈಗೂಡಿದ್ದವು. ವ್ಯಕ್ತಿಕೇಂದ್ರಿತ ಸಾಧನೆಗಿಂತ ಹೆಚ್ಚಾಗಿ ಕುಟುಂಬನಿಷ್ಠ, ಸಮುದಾಯನಿಷ್ಠ ಸಂಸ್ಕೃತಿಗೇ ಅವರು ತಮ್ಮನ್ನು ಸಮರ್ಪಿಸಿಕೊಂಡಿದ್ದರು. ಅವರು ಮುಂಬೈನಲ್ಲಿ ಕನ್ನಡ ಸಮುದಾಯದ ನಾಯಕತ್ವವನ್ನು ವಹಿಸಿಕೊಂಡಿದ್ದರ ಹಿಂದೆ, ರಂಗಚಟುವಟಿಕೆಗಳಲ್ಲಿ ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ತೊಡಗಿಕೊಂಡಿದ್ದರ ಹಿಂದೆ, ಈ ವೈಚಾರಿಕ ನಿಲುವುಗಳನ್ನು ಗಮನಿಸಬೇಕು. ವೃತ್ತಿಯಿಂದ ನಿವೃತ್ತರಾಗಿ ಬೆಂಗಳೂರಲ್ಲಿ ನೆಲೆಸಿದ ಮೇಲೂ ಅವರು ತಮ್ಮ ಸಮುದಾಯ ನಿಷ್ಠೆಯನ್ನು ಮೆರೆದವರು. ಚಿತ್ರೋದ್ಯಮದಿಂದಾಗಲೀ, ಸರಕಾರ ದಿಂದಾಗಲೀ ಯಾವುದೇ ವಿಶೇಷ ಸವಲತ್ತು ಗಳನ್ನಾಗಲೀ ಮಾನ್ಯತೆಯನ್ನಾಗಲೀ ಬಯಸಿದವರಲ್ಲ. ಹೊಸ ತಲೆಮಾರಿನ ಅನೇಕ ಪ್ರತಿಭೆಗಳಿಗೆ ಅವರು ಗುರುವಾಗಿದ್ದರು, ಮಾರ್ಗದರ್ಶಕರಾಗಿದ್ದರು, ಅದಕ್ಕಿಂತ ಹೆಚ್ಚಾಗಿ ಅವರೊಡನೆ ಬೆರೆತಿದ್ದರು.

ಮೂರ್ತಿಯವರದು ಅಸಾಧಾರಣ ವ್ಯಕ್ತಿತ್ವ. ಸೃಜನಶೀಲತೆಯನ್ನು ಮೆರೆದದ್ದು ಅವರ ವೈಶಿಷ್ಟ್ಯ. ಸಿನಿಮಾದ ಮಟ್ಟಿಗೆ ಮಾತ್ರ ಹೇಳುವುದಾದರೆ ಅವರ ಕೃತಿಗಳು ಬುದ್ಧಿ-ಭಾವಗಳ ಅಪರೂಪದ ಸಂಗಮ.

(ಮೂರ್ತಿಯವರ ವೈಯಕ್ತಿಕ ಬದುಕಿನ ವಿವರಗಳಿಗೆ ಶ್ರೀಮತಿ ಉಮಾರಾವ್ ಅವರ 'ಬಿಸಿಲು ಕೋಲು' ಪುಸ್ತಕಕ್ಕೆ ಋಣಿಯಾಗಿದ್ದೇನೆ.)

**ಎನ್. ವಿದ್ಯಾಶಂಕರ್**
ಹೆಚ್-೦, ಕೃಷ್ಣಗ್ಲೇಡ್, ಶೇಷಾದ್ರಿಪುರಂ ಮೊದಲನೇ ಮುಖ್ಯರಸ್ತೆ
ಬೆಂಗಳೂರು - ೫೬೦ ೦೨೦

## ಸರ್ವನಾಶದ ಹಾದಿಯಲ್ಲಿ ಇರಾಕ್

ಅಮೆರಿಕ ದುರಾಕ್ರಮಣ ಮಾಡಿದ ಮೇಲೆ ಇರಾಕ್ ಒಂದಲ್ಲ ಒಂದು ದುರಂತ ಅನುಭವಿಸುತ್ತಿದೆ. ಸದ್ದಾಂ ಹುಸೇನನ ಆಡಳಿತ ಕಾಲದಲ್ಲಿ ಹೇಗೋ ಒಂದಾಗಿದ್ದ ದೇಶ ಈಗ ಛಿದ್ರಗೊಳ್ಳುವ ಸ್ಥಿತಿಯಲ್ಲಿದೆ. ಭಯೋತ್ಪಾದಕರನ್ನು ಹತ್ತಿಕ್ಕುವ ಹೆಸರಿನಲ್ಲಿ ನಡೆದ ಆಕ್ರಮಣಕಾರಿ ಯುದ್ಧದಲ್ಲಿ ಸರ್ವಾಧಿಕಾರಿಯ ಪತನದ ನಂತರ ತಲೆ ಎತ್ತಿದ ಭಯೋತ್ಪಾದಕ ಕೃತ್ಯಗಳು ವಿಪರೀತವಾಗಿ ಹೆಚ್ಚಿವೆ. ವಿದೇಶೀ ಪಡೆಗಳ ವಿರುದ್ಧವಾಗಿ ನಡೆಯುತ್ತಿದ್ದ ಆತ್ಮಾಹುತಿ ಬಾಂಬುದಾಳಿ ಹಾಗೂ ಇತರ ವಿಧ್ವಂಸಕ ಕೃತ್ಯಗಳು ಈಗ ಸಂಘಟಿತ ರೂಪ ಪಡೆದುಕೊಂಡು ಅಂತರ್ಯುದ್ಧದ ಪರಿಸ್ಥಿತಿ ಉಂಟಾಗಿದೆ. ಅಲ್‌ಖೈದಾ ಉಗ್ರಗಾಮಿಗಳ ತಂಡದ ಭಾಗವಾಗಿರುವ ಇಸ್ಲಾಮಿಕ್ ಸ್ಟೇಟ್ ಇನ್ ಇರಾಕ್ ಅಂಡ್ ಸಿರಿಯ (ಐಎಸ್‌ಐಎಸ್) – ಇರಾಕ್ ಮತ್ತು ಸಿರಿಯಾಗಳ ಇಸ್ಲಾಮಿಕ್ ರಾಜ್ಯ – ಸಂಸ್ಥೆ ದೇಶದ ಉತ್ತರ ಭಾಗದ ಕೆಲ ಪ್ರಾಂತಗಳನ್ನು ವಶಪಡಿಸಿಕೊಂಡು ಮುನ್ನುಗ್ಗುತ್ತಿವೆ. ಬಾಗ್ದಾದ್ ಪತನಗೊಳ್ಳುವ ಭೀತಿ ಇದೆ. ವಾಷಿಂಗ್ಟನ್‌ನ ಒಂದು ವರದಿಯ ಪ್ರಕಾರ ಮೊಸೂಲ್ ನಗರವನ್ನು ಆಕ್ರಮಿಸಿಕೊಂಡಿರುವ ಉಗ್ರರು ಅಲ್ಲಿನ ವಿಶ್ವವಿದ್ಯಾಲಯದಲ್ಲಿರಿಸಿದ್ದ ಯುರೇನಿಯಮ್ ಸಂಯುಕ್ತಗಳನ್ನು ವಶಪಡಿಸಿಕೊಂಡಿದೆ ಹಾಗೂ ರಾಸಾಯನಿಕ ಗಳನ್ನು ತಮ್ಮ ಸುಪರ್ದಿಗೆ ತೆಗೆದುಕೊಂಡಿದೆ. ಈ ಬಗ್ಗೆ ವಿಶ್ವಸಂಸ್ಥೆಯ ಪ್ರಧಾನ ಕಾರ್ಯದರ್ಶಿ ಬಾನ್‌ಕಿಮೂನ್ ಕೂಡ ಆತಂಕ ವ್ಯಕ್ತಗೊಳಿಸಿದ್ದಾರೆ.

ಇರಾಕ್ ಮೂರು ಭಾಗವಾಗಿ ಛಿದ್ರಗೊಳ್ಳುವ ಸಾಧ್ಯತೆಗಳು ಹೆಚ್ಚಾಗಿ ಕಾಣಬರುತ್ತಿವೆ. ಸುನ್ನಿ, ಷಿಯಾ ಮತ್ತು ಕುರ್ದಿಷರು ಅಧಿಕವಾಗಿರುವ ಪ್ರಾಂತಗಳು ಕಳಚಿಕೊಳ್ಳುವ ಸಂಭವ ಹೆಚ್ಚಾಗಿ ಕಂಡುಬರುತ್ತಿದೆ. ಕುರ್ದಿಷ್ ಜನಾಂಗದವರು ಸದ್ದಾಂ ಹುಸೇನನ ಕಾಲದಲ್ಲೇ ಪ್ರತ್ಯೇಕಗೊಳ್ಳಲು ಹೋರಾಡುತ್ತಿದ್ದರು. ತೈಲಸಂಪತ್ತಿನಿಂದ ಕೂಡಿರುವ ಈ ಭಾಗ ಸದ್ಯ ಕುರ್ದಿಷ್ ಜನಾಂಗದವರ ವಶದಲ್ಲಿದೆ. ಬಾಗ್ದಾದ್ ಪಡೆಗಳು ಅವನ್ನು ವಶಪಡಿಸಿಕೊಳ್ಳಲು ನೋಡುತ್ತಿವೆ. ಈ ಬೆಳವಣಿಗೆಗಳು ಆತಂಕಕಾರಿಯಾಗಿವೆ. ಇರಾಕ್‌ನ ಬೆಳವಣಿಗೆಗಳು ಭಾರತವನ್ನು ಒಳಗೊಂಡಂತೆ ಎಲ್ಲ ದೇಶಗಳನ್ನು ಬಾಧಿಸಿವೆ. ಅಂತಃಕಲಹದಿಂದಾಗಿ ಏರ್ಪಟ್ಟಿರುವ ಪರಿಸ್ಥಿತಿಯಿಂದ ಅತಿ ಹೆಚ್ಚು ತೈಲ ಉತ್ಪಾದಿಸುವ ಈ ದೇಶದಲ್ಲಿ ಉತ್ಪಾದನೆ ಕುಸಿದಿರುವುದರಿಂದ ಅಂತರರಾಷ್ಟ್ರೀಯ ಮಾರುಕಟ್ಟೆಯಲ್ಲಿ ತೈಲದ ಬೆಲೆ ಹೆಚ್ಚಾಗಿದೆ. ಇರಾಕಿನಲ್ಲಿ ಕೆಲಸ ಮಾಡುತ್ತಿರುವ ವಿದೇಶೀಯರು ಹೆಚ್ಚಿನ ಮಂದಿ ವಾಪಸ್ಸಾಗಿದ್ದಾರೆ. ಭಾರತ ಸರಕಾರ ಭಾರತೀಯ ನಾಗರಿಕರನ್ನು ಸುರಕ್ಷಿತವಾಗಿ ಕರೆತರಲು ವಿಶೇಷ ವ್ಯವಸ್ಥೆ ಮಾಡಬೇಕಾಗಿ ಬಂದಿತು. ಐಎಸ್‌ಐಎಸ್ ಭಯೋತ್ಪಾದಕರ ವಶದಲ್ಲಿದ್ದ ಕೇರಳದ ದಾದಿಯರು ಸುರಕ್ಷಿತವಾಗಿ ಮರಳಿಬಂದದ್ದು ಸಂತಸದ ಸಂಗತಿ. ಈ ಬೆಳವಣಿಗೆಗಳ ಪರಿಣಾಮ ಇಡೀ ಪಶ್ಚಿಮ ಏಶಿಯದ ರಾಜ್ಯಗಳ ಮೇಲಾಗುವುದರಲ್ಲಿ ಸಂಶಯವಿಲ್ಲ. ಅತೃಪ್ತಿಯ ಹೊಗೆಯಾಡುತ್ತಿರುವ ಈ ಪ್ರದೇಶ ಆಸ್ಫೋಟಗೊಂಡು ಅಂತರ್ಯುದ್ಧದಲ್ಲಿ ಮುಳುಗಡೆಯಾದರೆ ಅಚ್ಚರಿಪಡಬೇಕಾಗಿಲ್ಲ. ಅಮೆರಿಕ ಇರಾಕ್ ಮೇಲೆ ದಾಳಿ ನಡೆಸಿದಾಗ ಸರ್ವಾಧಿಕಾರಿ ಆಡಳಿತವನ್ನು ಕೊನೆಗಾಣಿಸಿ ಪ್ರಜಾಪ್ರಭುತ್ವ ವ್ಯವಸ್ಥೆ ಸ್ಥಾಪನೆ ಮಾಡುವ ಭರವಸೆ ನೀಡಿತ್ತು. ಆದರೆ ಈಗ ಆಗಿರುವುದೇ ಬೇರೆ. ಆಫ್ಘಾನಿಸ್ತಾನದಲ್ಲೂ ಇಂಥದೇ ಪರಿಸ್ಥಿತಿ ಇದೆ. ದೇಶದ ಸಾಕಷ್ಟು ಪ್ರದೇಶಗಳು ಇಸ್ಲಾಮಿಕ್ ಉಗ್ರಗಾಮಿಗಳಾದ ತಾಲಿಬಾನ್‌ಗಳ ವಶದಲ್ಲಿವೆ. ಈ ಎರಡೂ ದೇಶಗಳ ಇಂದಿನ ದುಸ್ಥಿತಿಗೆ ಅಮೆರಿಕವೇ ಹೊಣೆ.

## ಪ್ಯಾಲಸ್ತೀನಿಯನ್ನರ ಮೇಲೆ ಇಸ್ರೇಲಿ ದೌರ್ಜನ್ಯ

ಯಾವುದೇ ಅಂತರರಾಷ್ಟ್ರೀಯ ಒತ್ತಡ ಬಂದರೂ ಪ್ಯಾಲಸ್ತೈನ್ ಉಗ್ರರ ಮೇಲೆ ದಾಳಿ ನಿಲ್ಲದು ಎಂದು ಇಸ್ರೇಲಿನ ಪ್ರಧಾನಿ ನೆತಾನ್ಯಹು ಪತ್ರಿಕಾಗೋಷ್ಠಿಯಲ್ಲಿ ಗುಡುಗಿದ್ದಾರೆ. ಗಾಜಾ ಪಟ್ಟಿಯ ಮೇಲೆ ನಾವು ನಡೆಸುತ್ತಿರುವ ಕಾರ್ಯಾಚರಣೆ ಅಮೆರಿಕದ ಅಧ್ಯಕ್ಷರಿಗೆ ಅರ್ಥವಾಗಿದೆ ಎಂದೂ ಅವರು ಹೇಳಿಕೊಂಡಿದ್ದಾರೆ. ಇಸ್ರೇಲಿನ ಮಟ್ಟಿಗೆ ಅದು ಅಸ್ತಿತ್ವಕ್ಕೆ ಬಂದಾಗಿನಿಂದಲೂ ಪ್ಯಾಲಸ್ತೀನಿಯನ್ನರೆಲ್ಲ ಉಗ್ರರು ಮತ್ತು ಭಯೋತ್ಪಾದಕರೆ. ಕಳೆದ ಆರೂವರೆ ದಶಕಗಳಿಗೂ ಹೆಚ್ಚು ಕಾಲದಿಂದ ಇಸ್ರೇಲ್ ತನ್ನ ವಿಸ್ತರಣಾವಾದಿ ನೀತಿಯನ್ನು ಮುಂದುವರಿಸಿಕೊಂಡು ಬಂದು ಪ್ಯಾಲಸ್ತೈನ್‌ನ ಭಾಗಗಳನ್ನು ಕಬಳಿಸಿದೆ. ಇಡೀ ಜನಾಂಗವನ್ನೇ ನಿರ್ಮೂಲನ ಮಾಡಲು ನೋಡುತ್ತಿದೆ. ಅಮೆರಿಕದ ಸಹಚರವಾಗಿರುವ ಇಸ್ರೇಲ್ ವಿಶ್ವಸಂಸ್ಥೆಯ ಆದೇಶಗಳನ್ನು ಉಲ್ಲಂಘನೆ ಮಾಡಿರುವಷ್ಟು ಬೇರಾವ ದೇಶವೂ ಮಾಡಿಲ್ಲ ಎನ್ನಬಹುದು. ಪ್ಯಾಲಸ್ತೈನ್ ರಾಜ್ಯದ ಸ್ಥಾಪನೆಗೆ ಇಸ್ರೇಲ್ ಒಂದಲ್ಲ ಒಂದು ಅಡ್ಡಿ ತರುತ್ತಲೇ ಇದೆ. ಈ ಭೂಭಾಗದ ದೇಶಗಳ ಮೇಲೆ ಒತ್ತಡ ತರಲು, ಅವುಗಳನ್ನು ಬೆದರಿಸಲು ಇಸ್ರೇಲ್‌ಅನ್ನು ಅಮೆರಿಕ ಚೆನ್ನಾಗಿ ಬಳಸಿಕೊಳ್ಳುತ್ತಿದೆ. ಇಸ್ರೇಲ್ ಏನೇ ದೌರ್ಜನ್ಯ ನಡೆಸಿದರೂ ಅದಕ್ಕೆ ಅಮೆರಿಕದ ರಕ್ಷಣೆ ಇದೆ.

ಇತ್ತೀಚೆಗೆ ಇಸ್ರೇಲಿನ ಕಡುವಿರೋಧಿ ಹಮಾಸ್ ಹಾಗೂ ಸ್ವಾಯತ್ತ ಪ್ಯಾಲಸ್ತೈನ್ ವಿಭಾಗದಲ್ಲಿ ಆಡಳಿತ ನಡೆಸುತ್ತಿರುವ ಪ್ಯಾಲಸ್ತೈನ್ ವಿಮೋಚನಾ ಸಂಸ್ಥೆಯ ಮಧ್ಯೆ ಪರಸ್ಪರ ಸಹಕಾರ ಹಾಗೂ ಸಮ್ಮಿಶ್ರ ಸರಕಾರದ ಸ್ಥಾಪನೆಯ ಕುರಿತು ಒಪ್ಪಂದವಾಗಿತ್ತು. ಗಾಜಾ ಪಟ್ಟಿಯ ಪ್ರದೇಶದಲ್ಲಿ ಪ್ರಬಲವಾಗಿರುವ ಹಮಾಸ್ ಸಂಸ್ಥೆ ಯಾವತ್ತೂ ಇಸ್ರೇಲಿನ ವಿಸ್ತರಣ ವಾದವನ್ನು ವಿರೋಧಿಸುತ್ತ ಬಂದಿದೆ. ಆಕ್ರಮಿತ ಪ್ರದೇಶಗಳನ್ನು ಒಳಗೊಂಡಂತೆ ಸ್ವತಂತ್ರವಾದ ತಾಯ್ನಾಡು ಪ್ಯಾಲಸ್ತೈನ್‌ನ ಸ್ಥಾಪನೆಯೇ ಅದರ ಗುರಿ. ಹಾಗಾಗಿ ಅದು ಇಸ್ರೇಲಿನೊಂದಿಗೆ ಮಾಡಿಕೊಂಡ ಸ್ವಾಯತ್ತ ಆಡಳಿತೆ ನಡೆಸುವ ಒಪ್ಪಂದವನ್ನು ವಿರೋಧಿಸಿತ್ತು. ಇಸ್ರೇಲ್ ಹಮಾಸ್ ಸಂಘಟನೆಯನ್ನು ಭಯೋತ್ಪಾದಕ ಸಂಸ್ಥೆ ಎಂದು ಪರಿಗಣಿಸಿ ಗಾಜಾ ಪಟ್ಟಿಯಲ್ಲಿ ಅದರ ಪ್ರಭಾವವನ್ನು ಅಂತ್ಯಗೊಳಿಸಲು ಪ್ರಯತ್ನಿಸಿದೆ. ಪ್ಯಾಲಸ್ತೀನಿಯನ್ನರು ಒಗ್ಗೂಡುವುದನ್ನು ಸಹಿಸದ ಇಸ್ರೇಲ್ ಕುಂಟು ನೆಪ ಒಡ್ಡಿ ಗಾಜಾ ಪಟ್ಟಿ ಪ್ರದೇಶದ ಮೇಲೆ ದಾಳಿ ಪ್ರಾರಂಭಿಸಿದೆ. ಇಸ್ರೇಲಿ ಯುವಕನೊಬ್ಬನನ್ನು ಹಮಾಸ್ ಉಗ್ರರು ಕೊಲೆ ಮಾಡಿದ್ದಾರೆ ಎಂಬುದೇ ಆರೋಪ. ಅದಕ್ಕೆ ಪ್ರತೀಕಾರವಾಗಿ ಇಸ್ರೇಲಿ ಸೈನಿಕರು ದಾಳಿ ನಡೆಸಿ ಈವರೆಗೆ ನಾಲ್ಕುನೂರಕ್ಕೂ ಹೆಚ್ಚು ಮಂದಿ ಪ್ಯಾಲಸ್ತೀನಿಯರನ್ನು ಕೊಲೆಗೈದಿದ್ದಾರೆ. ಬಾಂಬು ದಾಳಿ ನಡೆಸಿರುವ ಇಸ್ರೇಲಿಗಳು ಈಗ ಅಲ್ಲಿಗೆ ಸೈನ್ಯವನ್ನು ರವಾನಿಸಿದ್ದಾರೆ. ಇಸ್ರೇಲಿನ ಈ ದೌರ್ಜನ್ಯ ಮುಂದಿನ ದಿನಗಳಲ್ಲಿ ಇನ್ನಷ್ಟು ವಿಸ್ತಾರಗೊಂಡು ಇಡೀ ಪ್ರದೇಶದಲ್ಲಿ ಅಸ್ಥಿರತೆ ಉಂಟಾಗುವ ಭೀತಿ ಆವರಿಸಿದೆ. ಸಂಘರ್ಷವನ್ನು ಅಂತ್ಯಗೊಳಿಸಲು ನಡೆಯುತ್ತಿರುವ ಪ್ರಯತ್ನಗಳು ಇಸ್ರೇಲಿನ ಹಠಮಾರಿತನದಿಂದ ಸ್ಥಗಿತಗೊಂಡಿವೆ. ಇಸ್ರೇಲಿನ ಅಟ್ಟಹಾಸಕ್ಕೆ ಕೊನೆಯೇ ಇಲ್ಲವಾಗಿದೆ. ಸಾವಿರಾರು ಸಂಖ್ಯೆಯಲ್ಲಿ ಪ್ಯಾಲಸ್ತೈನ್ ಯುವಕರು ಇಸ್ರೇಲಿ ಕಾರಾಗಾರಗಳಲ್ಲಿ ಕೊಳೆಯುತ್ತಿದ್ದಾರೆ. ಭಯೋತ್ಪಾದಕ ಎಂಬ ಹಣೆಪಟ್ಟಿ ಲಗತ್ತಿಸಿ ನೂರಾರು ಮಂದಿ ಯುವಕರನ್ನು ವಿಚಾರಣೆ ನಡೆಸದೆ ಇಸ್ರೇಲ್ ಕಾರಾಗೃಹದಲ್ಲಿರಿಸಿದೆ. ಭಾರತ ಸರಕಾರ ಈಗ ನಡೆಯುತ್ತಿರುವ ಸಂಘರ್ಷದ ವಿಚಾರದಲ್ಲಿ ತಟಸ್ಥ ಧೋರಣೆ ಅನುಸರಿಸಿರುವುದು ಹಾಸ್ಯಾಸ್ಪದ ಹಾಗೂ ಖಂಡನೀಯವಾಗಿದೆ. ಭಾಜಪ ಸರಕಾರದ ಒಲವು ಇಸ್ರೇಲ್‌ನ ಪರವಾಗಿರುವುದು ಹೊಸ ವಿಷಯವೇನೂ ಅಲ್ಲ. ಹಿಂದೆ ವಾಜಪೇಯಿ ಪ್ರಧಾನಿಯಾಗಿದ್ದಾಗ ಇಸ್ರೇಲಿ 'ಮೊಸ್ಸಾದ್' ಎಂಬ ಕುಖ್ಯಾತ ಸಂಸ್ಥೆಯೊಂದಕ್ಕೆ ಮಣೆ ಹಾಕಿದ್ದ ವಿಚಾರ ಎಲ್ಲರಿಗೂ ತಿಳಿದಿದೆ. ಭಯೋತ್ಪಾದಕತೆಯನ್ನು ಎದುರಿಸಲು ಈ ಸಂಘಟನೆಯ ಸಹಾಯ ಪಡೆಯಲಾಗಿತ್ತು. ಅದರ ಮುಂದುವರಿಕೆಯೇ ಈಗಿನ ತಟಸ್ಥ ಧೋರಣೆ. ಹಿಂದೆ ಭಾರತ ಯಾವತ್ತೂ ಪ್ಯಾಲಸ್ತೈನ್ ರಾಜ್ಯದ ಸ್ಥಾಪನೆಗೆ ಬೆಂಬಲ ನೀಡಿತ್ತು ಮತ್ತು ಪ್ಯಾಲಸ್ತೈನ್ ವಿಮೋಚನಾ ಸಂಸ್ಥೆಯೊಂದಿಗೆ ಒಳ್ಳೆಯ ಸಂಬಂಧ ಹೊಂದಿತ್ತು. ಈಗ ಅದೆಲ್ಲ ತಲೆಕೆಳಗಾಗಿದೆ. ಗಾಜಾ ಪಟ್ಟಿಯ ಮೇಲೆ ದಾಳಿ ಹೀಗೇ ಮುಂದುವರಿದರೆ ಘರ್ಷಣೆಗಳು ಇತರ ಕಡೆಗೂ ಹರಡುವ ಆತಂಕವಿದೆ.

**ಸೀಯಾರ್ಕೆ**
'ಚೌಬೀನ', ನಂ. ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ
೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು – ೫೬೦ ೦೮೫




ಲೇಖಕರು : **ಡಾ॥ ರಾಜಶೇಖರ ಮಠಪತಿ (ರಾಗಂ)**
ಪುಟಗಳು : xxiv+೨೬೪=೨೮೮ ಬೆಲೆ : ೧೮೫.೦೦
ಪ್ರಕಾಶಕರು : ಕಣ್ವ ಪ್ರಕಾಶನ
'ಕಾಲ ಕನಸು', ನಂ. ೮೯೪, ೧ನೇ ಮುಖ್ಯರಸ್ತೆ
ನಿಸರ್ಗ ಬಡಾವಣೆ, ಚಂದ್ರಾಲೇಔಟ್
ಬೆಂಗಳೂರು – ೫೬೦ ೦೭೨

ನಾನು ಓದಿದ ಪುಸ್ತಕ

**ಶ್ರೀಸುಮಿತ್ರಾಸುತ. ಅಗಸಬಾಳ...**

# ಗಾಂಧಿ ಹೊತ್ತ ಮತ್ತು ಹೊರಿಸಿದ ಹೊರೆ

'ಗಾಂಧಿ ವಾದವನ್ನಲ್ಲ ಗಾಂಧಿಯನ್ನು ಓದಿ' ಎಂದು 'ಗಾಂಧಿ : ಅಂತಿಮ ದಿನಗಳು' ಎಂಬ ತಮ್ಮ ಕೃತಿಯಲ್ಲಿ ಲೇಖಕ ರಾಜಶೇಖರ ಮಠಪತಿ (ರಾಗಂ) ಹೇಳಿ ಗಾಂಧಿಯ ಅಂತಿಮ ದಿನಗಳ ದರ್ಶನವನ್ನು ಆ ಕೃತಿಯ ಮೂಲಕ ಮಾಡಿದ್ದರು. ಈಗ ಅವರದೇ ಇನ್ನೊಂದು ಕೃತಿ 'ಗಾಂಧಿ : ಮುಗಿಯದ ಅಧ್ಯಾಯ'. ಇದು ಮೊದಲಿನ ಕೃತಿಯ ವಿಸ್ತೃತ ರೂಪ. ಸ್ವಾತಂತ್ರ್ಯ ಪಡೆದ ದಿನದಿಂದ ಗಾಂಧಿ ಹತ್ಯೆಯವರೆಗಿನ ವಿದ್ಯಮಾನಗಳನ್ನು ಒಳಗೊಂಡ ಕೃತಿ 'ಗಾಂಧಿ : ಮುಗಿಯದ ಅಧ್ಯಾಯ'. ಗಾಂಧಿ ಲೇಖನಗಳನ್ನು, ಗಾಂಧಿ ಕುರಿತ ಕೃತಿಗಳನ್ನು, ಗಾಂಧಿ ಹತ್ಯೆಗೈದ ಗೋಪಾಲ ಗೋಡ್ಸೆಯ ಕೃತಿಯನ್ನೂ ಒಳಗೊಂಡು ಹಲವಾರು ಆಕರ ಗ್ರಂಥಗಳ ಸಹಾಯದಿಂದ ಒಂದು ಉತ್ತಮ ಕೃತಿಯನ್ನು ಲೇಖಕ ರಾಜಶೇಖರ ಮಠಪತಿ (ರಾಗಂ) ರಚಿಸಿಕೊಟ್ಟಿದ್ದಾರೆ. ಕೃತಿಯ ಅವಧಿ ಗಾಂಧಿಯ ಅಂತಿಮ ದಿನಗಳಾದರೂ ಇತಿಹಾಸದ ಹಲವಾರು ಮಗ್ಗುಲಗಳ ಮೇಲೆ, ಅಂದಿನ ಹಲವಾರು ವಿದ್ಯಮಾನಗಳ ಮೇಲೆ ಲೇಖಕ ಬೆಳಕು ಚೆಲ್ಲುತ್ತಾರೆ. ಸ್ವಾತಂತ್ರ್ಯದ ಸಂದರ್ಭ ಮತ್ತು ನಂತರದ ದಿನಗಳ ತಲ್ಲಣಗಳನ್ನು ಗಾಂಧಿ ಕುರಿತು ಬರೆಯುತ್ತಲೇ ಲೇಖಕ ಓದುಗರ ಮುಂದಿರಿಸುತ್ತಾರೆ. ಗಾಂಧಿಯನ್ನು ಓದಿ ಎಂದು ಹೇಳುತ್ತಲೇ ಗಾಂಧಿವಾದದ ಹಂತಗಳನ್ನು ಸಾದರಪಡಿಸುತ್ತಾರೆ. ನಾವು ಪಡೆದದ್ದು ಸ್ವಾತಂತ್ರ್ಯವೋ ಅರಾಜಕತೆಯೋ ಎಂಬ ಅನುಮಾನ ಬರುವಂತಿದ್ದ ಅಂದಿನ ಘಟನಾವಳಿಗಳನ್ನು ಉಲ್ಲೇಖಿಸುತ್ತಾರೆ. ಈ ಕೃತಿಯಲ್ಲಿ ಗಾಂಧಿ ಪ್ರಧಾನ ವಸ್ತುವಾಗಿದ್ದರೂ ಲೇಖಕರ ಅಂಕೆ ಮೀರಿ 'ಸಂದರ್ಭ' ವಸ್ತು ಆಗುತ್ತದೆ. ಸಮಾಜಮುಖಿ ಚಿಂತನೆ ಹೀಗೇ ನಡೆಯಬೇಕು.

ದೇಶಕ್ಕೆ ಸ್ವಾತಂತ್ರ್ಯ ತಂದುಕೊಟ್ಟವರು ಗಾಂಧಿ ಎಂಬ ಮಾತು ಗಾಂಧಿಗೆ ಎಷ್ಟು ಭಾರವಾಗಿತ್ತು ಎನ್ನುವುದು ಈ ಕೃತಿಯ ಓದಿನಿಂದ ವೇದ್ಯವಾಗುತ್ತದೆ. ಅದು ಗಾಂಧಿ ಹೊತ್ತ ಹೊರೆಯೂ ಹೌದು ಮತ್ತು ಹೊರಿಸಿದ ಹೊರೆಯೂ ಹೌದು. ಭಾರತದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಹಲವಾರು ಧಾರೆಗಳಿವೆ. ಆದರೆ ಎಲ್ಲ ಧಾರೆಗಳನ್ನು ಮರೆಮಾಚಿ ಗಾಂಧಿ ಮತ್ತು ಕಾಂಗ್ರೆಸ್‌ಅನ್ನು ಮಾತ್ರ ವೈಭವೀಕರಿಸಿದ್ದರ ಹಿಂದೆ ಸ್ವಾತಂತ್ರ್ಯಾ ನಂತರ ಸ್ವಾತಂತ್ರ್ಯದ ಲಾಭ ಪಡೆದ ಹಿತಾಸಕ್ತಿಗಳ ಪೂರ್ವನಿಯೋಜಿತ ತಂತ್ರ,

ಪ್ರತಿನಿತ್ಯ ಜನ ಕೇಳುವ ಪ್ರಶ್ನೆಗಳಿಗೆ ಉತ್ತರಿಸಬೇಕಾಗಿದ್ದ ಗಾಂಧಿ, ಸಮಸ್ಯೆಗಳಿಗೆ ಪರಿಹಾರ ಸೂಚಿಸಬೇಕಿದ್ದ ಗಾಂಧಿ ಈಗ ಏಕಾಂಗಿಯಾಗಿದ್ದ. ಹಲವಾರು ಬಾರಿ ನಿರುತ್ತರನಾಗಿ ಕಣ್ಣು ಮುಚ್ಚಿ ಭಜನೆಗಳಿಗೆ ಮೊರೆ ಹೋಗುತ್ತಿದ್ದ. ಜನರ ಸಮಸ್ಯೆಗಳಿಗೆ ಪರಿಹಾರ ಕಲ್ಪಿಸಬೇಕಿದ್ದ ಪ್ರಭುತ್ವ ಗಾಂಧಿಯಿಂದ ದೂರವಾಗಿತ್ತು. ಗಾಂಧಿ ಹೇಳುತ್ತಾರೆ : "...ಒಂದು ಕಾಲವಿತ್ತು ನನ್ನ ವೈರಿಗಳೂ ನನ್ನ ಮಾರ್ಗದರ್ಶನ ತೆಗೆದುಕೊಳ್ಳುತ್ತಿದ್ದರು. ಆದರೆ ಈಗ ? ನನ್ನ ಸಹಚರರೇ, ಸ್ನೇಹಿತರೇ ನನ್ನ ಕಣ್ಣೊಳಗೆ ಕಣ್ಣಿಟ್ಟು ನೋಡುತ್ತಿಲ್ಲ. ಅದೇನು ಕಾರಣವೋ ನನ್ನ ಬಳಿಯೂ ಸುಳಿಯುತ್ತಿಲ್ಲ ..." ಸುಂದರ ಕನಸುಗಳನ್ನು ಕಟ್ಟಿಕೊಂಡು ಬದುಕೆಲ್ಲ ಸವೆಸಿ ಸಂಧ್ಯಾಕಾಲದಲ್ಲಿ ಕನಸುಗಳೇ ಕಮರಿಹೋಗುವಾಗ ಉಂಟಾಗುವ ನೋವು ಗಾಂಧಿಯ ನೋವಾಗಿತ್ತು.

ಕುತಂತ್ರಗಳಿದ್ದವೇ ಎಂದರೆ ಹೌದು ಎಂಬ ಉತ್ತರವೇ ಸಿಗುತ್ತದೆ. ಇದರರ್ಥ ಗಾಂಧಿಯ ಪಾತ್ರವನ್ನು ನಗಣ್ಯವೆಂದು ಹೇಳುವುದಲ್ಲ. ಆದರೆ ಸ್ವಾತಂತ್ರ್ಯ ಸಂಗ್ರಾಮದ ಇಡೀ ಭಾರವನ್ನು ಗಾಂಧಿಯೇ ಹೊತ್ತಿದ್ದರು ಎಂದು ಬಿಂಬಿಸಿದರ ಪರಿಣಾಮ ಸ್ವಾತಂತ್ರ್ಯಾನಂತರದ ಗಾಂಧಿಯ ಕೆಲವೇ ದಿನಗಳ ಬದುಕಿನ ಅನುಭವಗಳನ್ನು ಗಮನಿಸಿದಾಗ ಗೋಚರವಾಗುತ್ತದೆ. ಅದು ರಾಗಂ ಅವರ ಈ 'ಗಾಂಧಿ ಮುಗಿಯದ ಅಧ್ಯಾಯ' ಕೃತಿಯಲ್ಲಿ ಪರೋಕ್ಷವಾಗಿಯಾದರೂ ದಟ್ಟವಾಗಿ ಮೂಡಿಬಂದಿದೆ. ಸ್ವಾತಂತ್ರ್ಯದ ಜೊತೆ ಜೊತೆಗೇ ನಡೆದ ದೇಶ ವಿಭಜನೆ ಪರಿಣಾಮವಾಗಿ ಕೋಮು ಸಂಘರ್ಷಗಳು ಭಾರತವನ್ನು ಅದರಲ್ಲೂ ಉತ್ತರ ಭಾರತವನ್ನು ಅಗ್ನಿಕುಂಡವಾಗಿಸಿದ್ದವು. ಲಕ್ಷಾಂತರ ಜನರ ವಲಸೆ, ನಿರಾಶ್ರಿತರ ಗುಂಪುಗಳು, ಮಹಿಳೆಯರ ಮೇಲಿನ ಅತ್ಯಾಚಾರ, ಅಪಹರಣ, ಕೊಲೆ, ಸುಲಿಗೆ, ಲೂಟಿ, ಹಿಂಸೆ, ಬೆಂಕಿ ಎಲ್ಲವೂ ಭಾರತ ಮತ್ತು ಪಾಕಿಸ್ತಾನ ಎರಡೂ ದೇಶಗಳ ದಿನನಿತ್ಯದ ವಿದ್ಯಮಾನಗಳಾಗಿದ್ದವು. ಹಿಂದೂ–ಮುಸ್ಲಿಂ ಕೋಮುವಾದ ಸಾಂಸ್ಥಿಕ, ಸಾಂಘಿಕ ರೂಪ ಪಡೆದಿತ್ತು. ಎರಡೂ ದೇಶಗಳಲ್ಲಿ ಸ್ವಾತಂತ್ರ್ಯದ ಸಂಭ್ರಮದ ಬದಲು ಅಮಾಯಕ ಜನತೆ ಜೀವಭಯದಲ್ಲಿ ಬದುಕುವಂತಾಗಿತ್ತು. ಸ್ವತಂತ್ರ ದೇಶದ ಸರಕಾರಗಳು ಕಾಶ್ಮೀರ ಸಮಸ್ಯೆಯನ್ನಿಟ್ಟುಕೊಂಡು ಯುದ್ಧದ ಸನ್ನಾಹದಲ್ಲಿದ್ದವು. ಇಂಥ ಸಂದರ್ಭದಲ್ಲಿ ಬಿರ್ಲಾ ಹೌಸ್‌ನಲ್ಲಿ ಕುಳಿತ ಗಾಂಧಿ ತನ್ನೆಡೆಗೆ ತೂರಿಬರುತ್ತಿದ್ದ ಸಾವಿರಾರು ಪ್ರಶ್ನೆಗಳಿಗೆ ಉತ್ತರ ಕೊಡಬೇಕಿತ್ತು. ಯಾಕೆಂದರೆ ಸ್ವಾತಂತ್ರ್ಯ ತಂದುಕೊಟ್ಟವನು ಗಾಂಧಿಯಲ್ಲವೆ ? ಗಾಂಧಿ ಮುಗಿಯದ ಅಧ್ಯಾಯ ಇಂಥ ನೂರಾರು ಪ್ರಸಂಗಗಳನ್ನು ದಾಖಲಿಸಿ ಗಾಂಧಿಯ ಪ್ರಯತ್ನ ಮತ್ತು ಅಸಹಾಯಕತೆಗಳನ್ನು ದಾಖಲಿಸಿದೆ. ಪ್ರತಿನಿತ್ಯದ ಸಂಜೆಯ ಪ್ರಾರ್ಥನಾ ಸಭೆ ಗಾಂಧಿ ದೇಶದೊಡನೆ ನಡೆಸುವ ಮುಖಾಮುಖಿ. ಅಂಥ ಮುಖಾಮುಖಿಯಲ್ಲಿ ಗಾಂಧಿ ಹೇಳುತ್ತಾನೆ "ನನ್ನ ಇತ್ತೀಚಿನ ದಿನಗಳು ನನಗೆ ಎಷ್ಟೊಂದು ಭಾರವಾಗಿವೆ. ನಿರಾಶ್ರಿತರ ನೋವು, ಆಕ್ರಂದನಗಳನ್ನು ಕೇಳುವುದರಲ್ಲಿಯೇ ನನ್ನೆಲ್ಲ ದಿನಗಳು ಉರುಳಿ ಹೋಗಿವೆ. ನಾನು ಬಹಳ ನೊಂದಿದ್ದೇನೆ. ನಾನು ನಿಜವಾಗಿಯೂ ಅಹಿಂಸೆಯ ಆರಾಧಕನೇ ಎನ್ನುವ ಸಂಶಯ ನನ್ನೊಳಗೇ ಪ್ರಾರಂಭವಾಗಿದೆ. ಈಗ ಪ್ರಾರ್ಥನೆ, ಊಟ, ನಿದ್ರೆ ಯಾವುದರಲ್ಲಿಯೂ ಸೊಗಸಿಲ್ಲ. ಯಾವುದಕ್ಕೂ ಸಮಯವಿಲ್ಲದಂತಾಗಿದೆ. ಅಹಿಂಸೆಯ ಆರಾಧಕನಾಗಿ ಕಣ್ಣೀರು ಹಾಕದೆ ಹೃದಯವನ್ನು ಗಟ್ಟಿಗೊಳಿಸಿಕೊಳ್ಳುವುದೇ ರೂಢಿಯಾಗಿ ಬಿಟ್ಟಿದೆ. ಯಾಕೆಂದರೆ ಒಂದಿಲ್ಲಾ ಒಂದು ದಿನ ನಾನು ದುರಂತವನ್ನು ಎದುರಿಸಬೇಕಿದೆ..." ಸ್ವಾತಂತ್ರ್ಯ ಹೋರಾಟದ ಒಂದು ಪ್ರಮುಖ ಧಾರೆಯ ನಾಯಕತ್ವ ವಹಿಸಿ ಕೊಂಡಿದ್ದ ಗಾಂಧಿ ಹೀಗೆ ಹೇಳುವುದು ನೋವಿನ ಸಂಗತಿ.



ಚುನಾವಣೆಗೆ ಮತ ನೀಡಿ ಅಂತ ಕಣ್ಣೀರು ಸುರಿಸಿದಿರಿ, ಈಗ ಠೇವಣಿ ಕಳೆದುಕೊಂಡು ಕಣ್ಣೀರು ಸುರಿಸುತಿದ್ದೀರಲ್ಲಾ ಬುದ್ಧಿ... !

ಪ್ರತಿನಿತ್ಯ ಜನ ಕೇಳುವ ಪ್ರಶ್ನೆಗಳಿಗೆ ಉತ್ತರಿಸಬೇಕಾಗಿದ್ದ ಗಾಂಧಿ, ಸಮಸ್ಯೆಗಳಿಗೆ ಪರಿಹಾರ ಸೂಚಿಸಬೇಕಿದ್ದ ಗಾಂಧಿ ಈಗ ಏಕಾಂಗಿಯಾಗಿದ್ದ. ಹಲವಾರು ಬಾರಿ ನಿರುತ್ತರನಾಗಿ ಕಣ್ಣು ಮುಚ್ಚಿ ಭಜನೆಗಳಿಗೆ ಮೊರೆ ಹೋಗುತ್ತಿದ್ದ. ಜನರ ಸಮಸ್ಯೆಗಳಿಗೆ ಪರಿಹಾರ ಕಲ್ಪಿಸಬೇಕಿದ್ದ ಪ್ರಭುತ್ವ ಗಾಂಧಿಯಿಂದ ದೂರವಾಗಿತ್ತು. ಗಾಂಧಿ ಹೇಳುತ್ತಾರೆ : "...ಒಂದು ಕಾಲವಿತ್ತು ನನ್ನ ವೈರಿಗಳೂ ನನ್ನ ಮಾರ್ಗದರ್ಶನ ತೆಗೆದುಕೊಳ್ಳುತ್ತಿದ್ದರು. ಆದರೆ ಈಗ ? ನನ್ನ ಸಹಚರರೇ, ಸ್ನೇಹಿತರೇ ನನ್ನ ಕಣ್ಣೊಳಗೆ ಕಣ್ಣಿಟ್ಟು ನೋಡುತ್ತಿಲ್ಲ. ಅದೇನು ಕಾರಣವೋ ನನ್ನ ಬಳಿಯೂ ಸುಳಿಯುತ್ತಿಲ್ಲ ..." ಸುಂದರ ಕನಸುಗಳನ್ನು ಕಟ್ಟಿಕೊಂಡು ಬದುಕೆಲ್ಲ ಸವೆಸಿ ಸಂಧ್ಯಾಕಾಲದಲ್ಲಿ ಕನಸುಗಳೇ ಕಮರಿಹೋಗುವಾಗ ಉಂಟಾಗುವ ನೋವು ಗಾಂಧಿಯ ನೋವಾಗಿತ್ತು. ಇಂಥ ಹಲವಾರು ಸಂದರ್ಭಗಳನ್ನು ಈ ಕೃತಿಯಲ್ಲಿ ಕಟ್ಟಿಕೊಟ್ಟಿದ್ದಾರೆ ರಾಗಂ. ಗಾಂಧಿಯ ಬದುಕಿನ ಹಲವಾರು ಮುಖಗಳನ್ನು ಹಲವಾರು ಕೃತಿಗಳು ಕಟ್ಟಿಕೊಟ್ಟಿವೆ. ಆದರೆ ಈ ಕೃತಿ ಅವೇ ಮುಖಗಳನ್ನು ಬೇರೆ ದಿಕ್ಕಿನಲ್ಲಿಟ್ಟು ತೋರಿಸುತ್ತದೆ. ಅದೇ ಈ ಕೃತಿಯ ಮಹತ್ವ.

ಅಸಹಾಯಕನಾದಾಗ ಗಾಂಧಿ ಶ್ರೀರಾಮನ ಸ್ಮರಣೆಗೆ ತೊಡಗುತ್ತಿದ್ದರು. ಇದು ಅವರನ್ನು ಟೀಕಿಸುವವರಿಗೂ ವಸ್ತುವಾಗಿತ್ತು. ಗಾಂಧಿ ಸಾಯುವಾಗ ರಾಮನಾಮ ಸ್ಮರಣೆಯ ಆಸೆಯನ್ನು ಇಟ್ಟುಕೊಂಡಿದ್ದರು. ಆದರೆ ಆರ್. ಎಸ್. ಎಸ್.ನ ಗೋಡ್ಸೆ ಗಾಂಧಿಗೆ ಶ್ರೀರಾಮನಾಮವನ್ನು ಕೊನೆಯುಸಿರಿಗೆ ಮುಂಚೆ ಹೇಳುವ ಅವಕಾಶವನ್ನೂ ಕೊಟ್ಟಿರಲಿಲ್ಲ. ಗಾಂಧಿ ಸಾಯುವಾಗ 'ಹೇ ರಾಮ' ಎಂದರು ಎನ್ನುವುದು ಸುಳ್ಳು ಎಂದು ರಾಗಂ ಹೇಳುತ್ತಾರೆ. ಗೋಡ್ಸೆ "...ಪ್ಯಾಂಟಿನಿಂದ ಬ್ಯಾರೆಟ್ ಪಿಸ್ತೂಲನ್ನು (ನಂ. ೬೦೬೮೨೪) ಹೊರತೆಗೆದು ಮೂರು ಸುತ್ತು ಗುಂಡು ಹಾರಿಸುತ್ತಾನೆ. ಎರಡು ಗಾಂಧಿಯ ಎದೆ ಹೊಕ್ಕರೆ ಒಂದು ಆತನ ಕಿಬ್ಬೊಟ್ಟೆಯನ್ನು ಸೀಳುತ್ತದೆ. ಮೊದಲೇ ಉಪವಾಸದಿಂದ ಕೃಶಗೊಂಡಿದ್ದ ಗಾಂಧಿಯ ದೇಹ 'ಆssssಹ್' ಎನ್ನುವ ಕೊನೆಯ ಶಬ್ದದೊಂದಿಗೆ ನೆಲಕ್ಕುರುಳುತ್ತದೆ. ಆದರೆ, 'ಮಹಾತ್ಮ' ಗಾಂಧಿಯವರು ಸಾಯುವಾಗ 'ಹೇರಾಮ್' ಎಂದು ಕೈಮುಗಿದೇ ತೀರಿಕೊಂಡರೆಂದು ಕೆಲವು ಇತಿಹಾಸಕಾರರಿಂದ ದಾಖಲಾಗುತ್ತದೆ" ರಾಗಂ ಅವರ ಈ ವಿವರಣೆ ಯಾಕೆ ಮುಖ್ಯವಾಗುತ್ತದೆಂದರೆ ಗಾಂಧಿಗೆ 'ಶ್ರೀರಾಮ'ನ ಹೆಸರು ಹೇಳಲೂ ಅವಕಾಶ ಕೊಡದವರು ಇಂದು ಶ್ರೀರಾಮನ ಹೆಸರಿನಿಂದಲೇ ಬೆಳೆದು ದೇಶದ ಅಧಿಕಾರ ಹಿಡಿದಿದ್ದಾರೆ. ಆರ್. ಎಸ್. ಎಸ್.ನ್ನೂ ಮುಸ್ಲಿಂ ಲೀಗ್‌ಅನ್ನೂ ವಿರೋಧಿಸಿದ್ದ ಗಾಂಧಿ, ಅದರಲ್ಲೂ 'ಬಹುಸಂಖ್ಯಾತ ಜನಾಂಗ ಅಧಿಕಾರದ ದರ್ಪದಲ್ಲಿ ಹೋಗಿಬಿಟ್ಟರೆ ಅದನ್ನು ಸರಿದಾರಿಗೆ ತರುವುದು ಕಷ್ಟ ಎನ್ನುವುದು ಗಾಂಧಿಯ ವಾದ' ಎಂದು ರಾಗಂ ಈ ಕೃತಿಯಲ್ಲಿ ಹೇಳುತ್ತಾರೆ. ದೇಶ ಇಂದು ಅಂಥ ಅಪಾಯಕ್ಕೆ ತಳ್ಳಲ್ಪಟ್ಟಿದೆ.

ಆರ್. ಎಸ್. ಎಸ್.ನ ಗೋಪಾಲ್ ಗೋಡ್ಸೆ ಗಾಂಧಿಯನ್ನು ಕೊಂದು ಅಂದು ಖಳನಾಯಕನಾಗಿದ್ದರೂ ಇಂದು ನಾಯಕನಾಗುವ ದಾರಿಯಲ್ಲಿದ್ದಾನೆ. ಆದರೆ ರಾಜಶೇಖರ ಮಠಪತಿಯವರು ಗಾಂಧಿ ಮುಗಿಯದ ಅಧ್ಯಾಯ ಎಂದು ಹೇಳುವುದರ ಮೂಲಕ ಮಾನವತೆಗೆ ದುಡಿದವರೆಲ್ಲ ಯಾವತ್ತೂ ನಾಯಕರಾಗಿ, ಪ್ರಸ್ತುತರಾಗಿ ತಮ್ಮ ನಿಧನಾ ನಂತರವೂ ಹೊಸ ಅಧ್ಯಾಯಗಳನ್ನು ಬರೆಯುತ್ತಿರುತ್ತಾರೆ ಎಂದು ತೋರಿಸಿಕೊಟ್ಟಿದ್ದಾರೆ. ತಮ್ಮ ಸರಳ, ಪರಿಣಾಮಕಾರಿ ಭಾಷೆ ಹಾಗೂ ಶೈಲಿಯ ಮೂಲಕ ಒಂದು ಮಹತ್ವದ ಕೃತಿಯನ್ನು ಕೊಟ್ಟಿದ್ದಾರೆ.

**ಶ್ರೀಸುಮಿತ್ರಾಸುತ. ಅಗಸಬಾಳ**
ಅಗಸಬಾಳ, ತಾ॥ ಮುದ್ದೇಬಿಹಾಳ, ಜಿ॥ ವಿಜಾಪುರ

## ಗುಲಾಮರು

ಅಲ್ಲಿ ಆಗಸ್ಟ್ ೧೫
ಡೆಲ್ಲಿಯ
ಕೆಂಪು ಕೋಟೆಯಲಿ
ಸ್ವಾತಂತ್ರ್ಯದಿನ
ಆಚರಣೆ





ಇಲ್ಲಿ ಕಟ್ಟಡ ಕಾರ್ಮಿಕರಿಗೆ
ಗುತ್ತಿಗೆದಾರರ
ಗುಲಾಮೀ
ಬವಣೆ

**ದ್ವಾರನಕುಂಟೆ ಪಾತಣ್ಣ**
ನಾಗಸಂದ್ರ ಅಂಚೆ, ಬೆಂಗಳೂರು – ೫೬೦ ೦೭೩

ಸರ್ವೋಚ್ಚ ನ್ಯಾಯಾಲಯ



ಮುರಳಿಧರ ಚಿಕ್ಕಮಗಳೂರು

# ಅಕ್ಷರಧಾಮ ಸರ್ವೋಚ್ಚ ನ್ಯಾಯಾಲಯದ ತೀರ್ಪು

೧೬ ಮೇ, ೨೦೧೪ ೧೬ನೇ ಲೋಕಸಭೆ ಚುನಾವಣೆಯ ಫಲಿತಾಂಶ ಪ್ರಕಟವಾದ ದಿನ. ಮೋದಿ ಭಕ್ತರು ಪಟಾಕಿ ಸಿಡಿಸಿ, ಸಿಹಿ ಹಂಚಿ ವಿಜೃಂಭಿಸಿದ ದಿನ. ಕೇಂದ್ರದಲ್ಲಿ ಮೋದಿ ಸರ್ಕಾರದ ಅನಾವರಣಕ್ಕೆ ಸಜ್ಜಾದ ದಿನ. ದೂರದರ್ಶನದ ವಾಹಿನಿಗಳು ಮತ್ತು ಪತ್ರಿಕೆಗಳೆಲ್ಲ ಮೋದಿಮಯವೆ. ಚುನಾವಣೆ ಪೂರ್ವ ದುಡ್ಡು ಕೊಟ್ಟು ಪ್ರಚಾರ ಕೊಂಡಿದ್ದವರಿಗೆ ನಂತರ ದುಡ್ಡಿಲ್ಲದೆ ಪ್ರಚಾರ ಲಭ್ಯ. ಈ ಪ್ರಚಾರದ ಅಬ್ಬರದಲ್ಲಿ ಅಂದೇ ಸರ್ವೋಚ್ಚ ನ್ಯಾಯಾಲಯದ ತೀರ್ಪೊಂದು ಸ್ಫೋಟಗೊಂಡಿದ್ದರೂ ಮತ್ತು ನರೇಂದ್ರ ಮೋದಿಯ ಗುಜರಾತ್ ಸರ್ಕಾರಕ್ಕೆ ಸಂಬಂಧಿಸಿದ ಪ್ರಕರಣವಾದರೂ ಅದೇನೂ ಮಹತ್ವದ ಸುದ್ದಿಯಾಗಲಿಲ್ಲ. ಆದರೆ ಸರ್ವೋಚ್ಚ ನ್ಯಾಯಾಲಯದ ಇತಿಹಾಸದಲ್ಲಿ ಇದೊಂದು ದೇಶದ ಗೌರವವನ್ನು ಎತ್ತಿ ಹಿಡಿದ ಮಹತ್ವದ ನ್ಯಾಯ ನಿರ್ಣಯವೆಂಬುದರಲ್ಲಿ ಯಾವ ಸಂದೇಹವೂ ಇಲ್ಲ. ಈ ತೀರ್ಪು ಅಹಮದಾಬಾದ್‌ನ ಅಕ್ಷರಧಾಮದಲ್ಲಿ ೨೪, ಸೆಪ್ಟಂಬರ್ ೨೦೦೨ರಂದು ನಡೆದ ಭೀಕರ ಭಯೋತ್ಪಾದನೆಯ ಘಟನೆಗೆ ಸಂಬಂಧಿಸಿದ್ದು.

**ಕೋಮುಗಲಭೆಗಳ ಕರಾಳ ಚರಿತ್ರೆ**

ಸ್ವಾತಂತ್ರ್ಯೋತ್ತರ ಭಾರತದ ಚರಿತ್ರೆಯಲ್ಲಿ ಖಾಯಂ ಆಗಿ ಕಪ್ಪು ಚುಕ್ಕೆ ಛಾಪಿಸಿದ ಅನೇಕ ಬೀಭತ್ಸ ಘಟನೆಗಳು ನಡೆದುಹೋಗಿವೆ. ಅವೆಂದರೆ ದೇಶ ಇಬ್ಭಾಗವಾದಾಗ ಹಬ್ಬಿದ ಕೋಮುಜ್ವಾಲೆಯಿಂದಾಗಿ ಬಲಿಯಾದ ಸಹಸ್ರಾರು ಅಮಾಯಕರು, ತುರ್ತು ಪರಿಸ್ಥಿತಿ ಘೋಷಿಸಿ ಸಹಸ್ರಾರು ಜನರನ್ನು ಬಂಧನದಲ್ಲಿಟ್ಟದ್ದು, ದೆಹಲಿಯ ಸಿಖ್ಖರ ಮೇಲೆ ನಡೆದ ಅಮಾನುಷ ಹಲ್ಲೆ, ರಾಮನ ರಥಯಾತ್ರೆ ನಡೆಸಿ ದೇಶದಾದ್ಯಂತ ಕೋಮುದಳ್ಳುರಿ ಹಚ್ಚಿದ್ದು, ಬಾಬ್ರಿ ಮಸೀದಿಯ ಮೇಲೇರಿ ಕರಸೇವಕರು ದೈತ್ಯ ನರ್ತನ ನಡೆಸಿ ಅದನ್ನು ಧ್ವಂಸಗೊಳಿಸಿದ್ದು, ಗೋದ್ರ ರೈಲ್ವೆ ನಿಲ್ದಾಣದ ಬಳಿ ಸಬರ್‌ಮತಿ ಎಕ್ಸ್‌ಪ್ರೆಸ್ ರೈಲಿಗೆ ಬೆಂಕಿಯಿಟ್ಟಿದ್ದು, ಪ್ರತೀಕಾರದ ಹೆಸರಿನಲ್ಲಿ ನಡೆಸಿದ ಗುಜರಾತ್ ಹತ್ಯಾಕಾಂಡ, ಮತ್ತೆ ಅದಕ್ಕೆ ಪ್ರತೀಕಾರವೆಂಬಂತೆ ನಡೆದ ಅಕ್ಷರಧಾಮದ ಮೇಲಿನ ದಾಳಿ ಇತ್ಯಾದಿಗಳು.

**ಗೋದ್ರ ಘಟನೆ**

ಗುಜರಾತ್ ರಾಜ್ಯದ ಹೆಸರೆತ್ತುತ್ತಲೇ ನಮ್ಮ ಮನಃಪಟಲದ ಮೇಲೆ ಹಾಯುವುದು ಗೋದ್ರದಲ್ಲಿ ಸಬರ್‌ಮತಿ ಎಕ್ಸ್‌ಪ್ರೆಸ್ ರೈಲಿನ ಬೋಗಿಗಳಿಗೆ ಹತ್ತಿದ ಬೆಂಕಿ, ನಂತರ ಅಹಮದಾಬಾದ್, ಬರೋಡ ಮತ್ತಿತರ ಊರುಗಳಲ್ಲಿ ನಡೆದ ಕೋಮುಗಲಭೆಗಳು, ಹತ್ಯಾಕಾಂಡ ಮತ್ತು ಅದರ ಬೆನ್ನ ಹಿಂದೆಯೆ ಅಕ್ಷರಧಾಮದಲ್ಲಿ ನಡೆದ ಭಯೋತ್ಪಾದಕರ ಹುಚ್ಚು ದಾಳಿ... ಹೀಗೆ ಗುಜರಾತ್ ರಾಜ್ಯದಲ್ಲಿ ಸರಣಿಯಾಗಿ ಸಂಭವಿಸಿದ ಕೋಮುಗಲಭೆಗಳ ಕರಾಳ ಚರಿತ್ರೆಯನ್ನು ನರೇಂದ್ರ ಮೋದಿಯ ಅಬ್ಬರದ "ಅಭಿವೃದ್ಧಿ"ಯ ಪ್ರಚಾರ ಅಳಿಸಲಾಗಿಲ್ಲ. ಗುಜರಾತ್ ರಾಜ್ಯದ ಪ್ರವಾಸೋದ್ಯಮ ಇಲಾಖೆಯ ರಾಯಭಾರಿ ಅಮಿತಾಬ್ ಬಚ್ಚನ್ ಕೂಡ ಗುಜರಾತ್‌ನ ಕಳಂಕವನ್ನು ತೊಡೆದುಹಾಕಲು ಸಮರ್ಥನಾಗಲಿಲ್ಲ. ಗುಜರಾತ್‌ನ ಹತ್ಯಾಕಾಂಡ ಅಡಾಲ್ಫ್ ಹಿಟ್ಲರ್ ಆಡಳಿತದಲ್ಲಿ ಜರ್ಮನಿಯಲ್ಲಿ ನಡೆದ ಯಹೂದಿಗಳ ನರಮೇಧವನ್ನು ನೆನಪಿಸಿತ್ತು. ಆದಕಾರಣವೇ ಈ ದುರ್ಘಟನೆ ಇಡೀ ಪ್ರಪಂಚದ ಅಂತಃಸಾಕ್ಷಿಯನ್ನು ಕೆದಕಿದ್ದು ಮತ್ತು ರಾಜಧರ್ಮವನ್ನು ಧಿಕ್ಕರಿಸಿದ ನರೇಂದ್ರ ಮೋದಿಯನ್ನು ದೇಶದ ಪ್ರಜ್ಞಾವಂತ ಜನತೆ ಖಂಡಿಸಿದ್ದು.

**ಬಾಬ್ರಿ ಮಸೀದಿಯ ಧ್ವಂಸ**

ಸಂಘಪರಿವಾರದವರು ೦೬.೧೨.೧೯೯೨ರಂದು ಕೆಡವಿದ್ದು ಬಾಬ್ರಿ ಮಸೀದಿಯನ್ನು ಮಾತ್ರವಲ್ಲ, ಕೋಮುಸೌಹಾರ್ದತೆಯ ಅರಮನೆಯನ್ನೇ



ಅಕ್ಷರಧಾಮ



ಬೆಸ್ಟ್ ಬೇಕರಿ



ಸಬರ್‌ಮತಿ ಎಕ್ಸ್‌ಪ್ರೆಸ್ ರೈಲು

ಧ್ವಂಸಮಾಡಿದ್ದರು. ಅದರೊಂದಿಗೇ ಕೋಮುಗಲಭೆ ಮತ್ತು ಭಯೋತ್ಪಾದನೆಯ ಚಟುವಟಿಕೆಗಳಿಗೆ ನಾಂದಿ ಹಾಡಿದ್ದರು. ದೇಶದ ಅಖಂಡತೆಗೇ ಕೊಡಲಿ ಪೆಟ್ಟುಕೊಟ್ಟಿದ್ದರು. ನಗರ, ಪಟ್ಟಣಗಳಲ್ಲಿ ಕೋಮುಜ್ವಾಲೆಯನ್ನು ಹಬ್ಬಿಸಿದ್ದರು ಮತ್ತು ಅದು ನಂದದಂತೆ ನೋಡಿಕೊಂಡಿದ್ದರು. ವಿಶ್ವ ಹಿಂದು ಪರಿಷದ್ ಅಯೋಧ್ಯೆಯಲ್ಲಿ ಏರ್ಪಡಿಸಿದ್ದ ಪೂರ್ಣಾಹುತಿ ಮಹಾಯಜ್ಞದಲ್ಲಿ ಭಾಗವಹಿಸಿ ೨೭.೦೨.೨೦೦೨ರಂದು ಸಬರ್‌ಮತಿ ಎಕ್ಸ್‌ಪ್ರೆಸ್ ರೈಲಿನಲ್ಲಿ ಅಹಮದಾಬಾದ್‌ಗೆ ಪ್ರಯಾಣಿಸುತ್ತಿದ್ದ ೨೦೦೦ ಕರಸೇವಕರಿದ್ದ ರೈಲಿನ ಕೆಲವು ಬೋಗಿಗಳಿಗೆ ಗೋಧ್ರ ರೈಲ್ವೇ ನಿಲ್ದಾಣದ ಬಳಿ ಬೆಂಕಿ ಹತ್ತಿ ೨೫ ಮಹಿಳೆಯರೂ, ೧೫ ಮಕ್ಕಳೂ ಸೇರಿದಂತೆ ೫೯ ಜನರು ಮೃತರಾದದ್ದು ದುರಂತವೇ ಸರಿ. ಈ ದುರಂತದ ಹಿಂದಿರುವ ಕಾರಣ ಇಂದಿಗೂ ನಿಖರವಾಗಿ ತಿಳಿದುಬಂದಿಲ್ಲ. ಗುಜರಾತ್ ಸರ್ಕಾರ ನೇಮಿಸಿದ್ದ ನಾನಾವತಿ–ಷಾ ತನಿಖಾ ಆಯೋಗ ಸೆಪ್ಟಂಬರ್ ೨೦೦೮ರಲ್ಲಿ ಕೊಟ್ಟ ವರದಿಯಲ್ಲಿ ಗೋಧ್ರ ಘಟನೆ ವಿಶಾಲ ಪಿತೂರಿಯ ಒಂದು ಭಾಗವೆಂದು ನಿರ್ಣಯಿಸಿತ್ತು. ೨೦೦೪ರಲ್ಲಿ ಕೇಂದ್ರ ರೈಲ್ವೇ ಮಂತ್ರಿ ಲಾಲೂ ಪ್ರಸಾದ್ ಯಾದವ್ ನೇಮಿಸಿದ್ದ ಉಮೇಶ್‌ಚಂದ್ರ ಬ್ಯಾನರ್ಜಿ ಆಯೋಗ ಅದೊಂದು ಬೆಂಕಿ ಆಕಸ್ಮಿಕವೆಂದು ತನ್ನ ಮಧ್ಯಂತರ ವರದಿಯಲ್ಲಿ ತಿಳಿಸಿತ್ತು. ಉಮೇಶ್‌ಚಂದ್ರ ಬ್ಯಾನರ್ಜಿ ಆಯೋಗದ ರಚನೆ ಅಸಿಂಧುವೆಂದೂ ಅದು ಕೊಟ್ಟ ವರದಿಯನ್ನು ಪಾರ್ಲಿಮೆಂಟ್ ಮುಂದೆ ಮಂಡಿಸಬಾರದೆಂದೂ ಗುಜರಾತ್ ಉಚ್ಚ ನ್ಯಾಯಾಲಯ ತೀರ್ಪಿತ್ತಿತು. ನಂತರದ ವರ್ಷಗಳಲ್ಲಿ ವಿಚಾರಣೆ ನಡೆದು ಫೆಬ್ರವರಿ ೨೦೧೧ರಲ್ಲಿ ನ್ಯಾಯಾಲಯ ೩೧ ಆರೋಪಿಗಳಿಗೆ ಅಪರಾಧ ನಿರ್ಣಯ ನೀಡಿ, ಅವರ ಪೈಕಿ ೧೧ ಆರೋಪಿಗಳಿಗೆ ಮರಣದಂಡನೆ ಶಿಕ್ಷೆ ನೀಡಿದ್ದು, ೨೦ ಆರೋಪಿಗಳಿಗೆ ಜೀವಾವಧಿ ಕಾರಾಗೃಹ ಶಿಕ್ಷೆ ವಿಧಿಸಿದೆ. ಈ ಪ್ರಕರಣ ಈಗ ಗುಜರಾತ್ ಉಚ್ಚ ನ್ಯಾಯಾಲಯದ ಮುಂದಿದೆ.





ಬಾಬ್ರಿ ಮಸೀದಿ

**ಗುಜರಾತ್‌ನಲ್ಲಿ ಹಬ್ಬಿದ ಕೋಮುಜ್ವಾಲೆ**

ಗೋಧ್ರ ಘಟನೆಯ ಮರುದಿನವೇ ವಿಶ್ವ ಹಿಂದು ಪರಿಷದ್ ಗುಜರಾತ್ ಬಂದ್‌ಗೆ ಕರೆ ನೀಡಿತ್ತು. ೨೮.೦೨.೨೦೦೨ರಿಂದಲೇ ಪ್ರಾರಂಭವಾಯಿತು ಗುಜರಾತ್ ಹತ್ಯಾಕಾಂಡ. ಸುಮಾರು ೩ ವಾರ ನಡೆದ ಈ ಹಿಂಸಾಕಾಂಡದಲ್ಲಿ ಸತ್ತವರ ಸಂಖ್ಯೆ ೧೦೦೪; ೭೯೦ ಮುಸ್ಲಿಮರು ಮತ್ತು ೨೫೪ ಹಿಂದುಗಳು. ಗುಜರಾತ್ ರಾಜ್ಯ ಸರ್ಕಾರ ಪೊಲೀಸರನ್ನು ನಿಷ್ಕ್ರಿಯಗೊಳಿಸಿತ್ತು. ಪೊಲೀಸರ ಸಮ್ಮುಖದಲ್ಲೇ ಕೊಲೆ, ಮುಸ್ಲಿಂ ಮಹಿಳೆಯರ ಮಾನಭಂಗ, ಮುಗ್ಧ ಹಸುಳೆಗಳ ದಾರುಣ ಹತ್ಯೆ ನಡೆದ ಬಗ್ಗೆ ಅನೇಕ ಸಾಕ್ಷ್ಯಾಧಾರಗಳು ದೊರೆತಿವೆ. ಗುಜರಾತ್ ವಿಧಾನಸಭೆಯ ಚುನಾಯಿತ ಸದಸ್ಯೆ ಭಾರತೀಯ ಜನತಾಪಕ್ಷದ ಕಾರ್ಯಕರ್ತೆ ಮಾಯಾ ಕೊದ್ನಾನಿ ಮತ್ತು ಅದೇ ಪಕ್ಷಕ್ಕೆ ಸೇರಿದ ಬಾಬು ಭಜರಂಗಿ ಅಹಮದಾಬಾದ್ ಸಮೀಪದ ನರೋದ ಪಟಿಯದಲ್ಲಿ ನಡೆದ ಕೋಮುಗಲಭೆಗಳನ್ನು ನೇರವಾಗಿ ಪ್ರಚೋದಿಸಿದ್ದು ನ್ಯಾಯಾಲಯದ ಮುಂದೆ ಸಾಬೀತಾಗಿ ಅವರಿಗೆ ಆಜೀವ ಕಾರಾಗೃಹ ಶಿಕ್ಷೆ ವಿಧಿಸಿರುವುದು ಹತ್ಯಾಕಾಂಡಕ್ಕೆ ಗುಜರಾತ್ ಸರ್ಕಾರ ಕೊಟ್ಟ ಕುಮ್ಮಕ್ಕಿಗೊಂದು ನಿದರ್ಶನ. ಈ ಪ್ರಕರಣ ಈಗ ಉಚ್ಚ ನ್ಯಾಯಾಲಯದ ಮುಂದಿದೆ. ಮಾಯಾ ಕೊದ್ನಾನಿಗೆ ಮರಣದಂಡನೆ ಶಿಕ್ಷೆ ನೀಡಬೇಕೆಂದು ಗುಜರಾತ್ ಸರ್ಕಾರ ಮೇಲ್ಮನವಿ ಸಲ್ಲಿಸಿರುವುದು ಕಪಟ ನಾಟಕ ಅಥವಾ ಕ್ರೌರ್ಯದ ಇನ್ನೊಂದು ಮುಖ. ತಮ್ಮದು ನಿಷ್ಪಕ್ಷಪಾತ ನಡೆ ಎಂದು ಬಿಂಬಿಸಿಕೊಳ್ಳುವ ಹಾಗೂ ಮಾಯಾ ಕೊದ್ನಾನಿ ಹೇಳಬಹುದಾದ ಸತ್ಯಸಂಗತಿಗಳನ್ನು ಶಾಶ್ವತವಾಗಿ ಮುಚ್ಚಿಹಾಕುವ ಹುನ್ನಾರವಿದು. ಗುಜರಾತ್‌ನ ಅಂದಿನ ಮುಖ್ಯಮಂತ್ರಿ ನರೇಂದ್ರ ಮೋದಿಯು ಗುಜರಾತ್‌ನಲ್ಲಿ ನಡೆದ ಕೋಮುಗಲಭೆಗಳು ಗೋಧ್ರದಲ್ಲಿ ನಡೆದ ದಾಳಿಗೆ ಪ್ರತಿಕ್ರಿಯೆಯೇ ಹೊರತು ರಾಜ್ಯ ಸರ್ಕಾರಕ್ಕೂ ಮತ್ತು ಭಾರತೀಯ ಜನತಾ ಪಕ್ಷಕ್ಕೂ ಯಾವುದೇ ಸಂಬಂಧವಿಲ್ಲವೆಂದು ಹೇಳಿಕೆ ನೀಡಿದ್ದು ಭೀಕರ ಕೋಮುಗಲಭೆಗಳನ್ನು ಪ್ರತೀಕಾರದ ಒಂದು ಘಟನೆಯನ್ನಾಗಿ ಸಂಕುಚಿತಗೊಳಿಸುವ ಪ್ರಯತ್ನವಾಗಿತ್ತು. ನಾಗರಿಕ ಸಮಾಜದಲ್ಲಿ ಖಾಸಗಿ ಪ್ರತೀಕಾರಕ್ಕೆ ಆಸ್ಪದವಿಲ್ಲ.

**ಬೆಸ್ಟ್ ಬೇಕರಿ ಪ್ರಕರಣ**

ಬೆಸ್ಟ್ ಬೇಕರಿ ಬರೋಡ ನಗರದ ಬಡಾವಣೆಯೊಂದರಲ್ಲಿ ಮುಸ್ಲಿಂ ಕುಟುಂಬವೊಂದು ನಡೆಸುತ್ತಿದ್ದ ಅಂಗಡಿ. ಗುಜರಾತ್ ಕೋಮುಗಲಭೆಯ ಭಾಗವಾಗಿ ಕೇಸರಿ ಬಣ್ಣಗಳ ಬಟ್ಟೆ ತೊಟ್ಟ ಗಲಭೆಕೋರರು ಬೆಸ್ಟ್ ಬೇಕರಿ ಮತ್ತು ಅದರ ಜೊತೆಗೆ ೧೪ ಜನರನ್ನು ಸಜೀವವಾಗಿ ಸುಟ್ಟರು. ಈ ದುಷ್ಕೃತ್ಯವನ್ನು ಕಣ್ಣಾರೆ ನೋಡಿದ ೧೯ ವರ್ಷದ ಜಹೀರಾ ಹಬೀಬುಲ್ಲ ಶೇಖ್ ಪೊಲೀಸರಿಗೆ ಪ್ರಥಮ ದೂರು ನೀಡಿದ್ದಳು. ನಂತರದ ದಿನಗಳಲ್ಲಿ ಗುಜರಾತ್ ಪೊಲೀಸರು ಈ ಸಾಕ್ಷಿಯ ಮೇಲೆ ತಂದ ಒತ್ತಡದಿಂದಾಗಿ ಜಹೀರಾ ನ್ಯಾಯಾಲಯದ ಮುಂದೆ ತನ್ನ ಹೇಳಿಕೆಯನ್ನು ಬದಲಾಯಿಸಬೇಕಾಯಿತು. ಹಾಗಾಗಿ ಗುಜರಾತ್‌ನ ನ್ಯಾಯಾಲಯ ಬೆಸ್ಟ್ ಬೇಕರಿ ಪ್ರಕರಣದ ಎಲ್ಲ ಆರೋಪಿಗಳನ್ನು ಖುಲಾಸೆ ಮಾಡಿತಲ್ಲದೆ ಇದನ್ನು ಗುಜರಾತ್‌ನ ಉಚ್ಚ ನ್ಯಾಯಾಲಯ ಎತ್ತಿ ಹಿಡಿದಿತ್ತು. ಜಹೀರಾ ತನ್ನ ಮೇಲೆ ಒತ್ತಡ ತಂದ ಕಾರಣ ತಾನು ನ್ಯಾಯಾಲಯದ ಮುಂದೆ ನೀಡಿದ ಸಾಕ್ಷಿ ಸತ್ಯವಲ್ಲವೆಂದೂ ತಾನು ನೀಡಿದ್ದ ಪ್ರಥಮ ದೂರು ಸತ್ಯವಲ್ಲವೆಂದೂ ತಾನು ನೀಡಿದ್ದ ಪ್ರಥಮ ದೂರು ಸತ್ಯವಾಗಿತ್ತೆಂದೂ ಕೊಟ್ಟ ಹೇಳಿಕೆ ಬೆಸ್ಟ್ ಬೇಕರಿ ಪ್ರಕರಣಕ್ಕೆ ಹೊಸ ತಿರುವು ನೀಡಿತು. ಜಹೀರಾ ನೀಡಿದ ಅರ್ಜಿಯನ್ನು ಗುಜರಾತ್ ಉಚ್ಚ ನ್ಯಾಯಾಲಯ ತಿರಸ್ಕರಿಸಿದ ಕಾರಣ, ಜಹೀರಾ ಮತ್ತು ಟೀಸ್ಟಾ ಸೆಟ್ಲವಾಡ್ ಸರ್ವೋಚ್ಚ ನ್ಯಾಯಾಲಯಕ್ಕೆ ಮೇಲ್ಮನವಿ ಸಲ್ಲಿಸಿದರು. ಈ ಪ್ರಕರಣವನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ವೋಚ್ಚ ನ್ಯಾಯಾಲಯದ ನ್ಯಾಯಮೂರ್ತಿ ದೊರೈಸ್ವಾಮಿ ರಾಜು ಮತ್ತು ಅರಿಜಿತ್ ಪಸಾಯತ್ ಅವರು ನೀಡಿದ ಮಹತ್ವದ ತೀರ್ಪಿನಲ್ಲಿ ಜಹೀರಾ ಮತ್ತು ಟೀಸ್ಟಾ ಸಲ್ಲಿಸಿದ್ದ ಮೇಲ್ಮನವಿಯನ್ನು ಪುರಸ್ಕರಿಸಿ, ಬೆಸ್ಟ್ ಬೇಕರಿ ಪ್ರಕರಣವನ್ನು ಮುಂಬಯಿಯ ಫಾಸ್ಟ್ ಟ್ರಾಕ್ ನ್ಯಾಯಾಲಯಕ್ಕೆ ವರ್ಗಾಯಿಸಲು ಆದೇಶ ನೀಡಿದರು (ಪ್ರಕರಣ : ಜಹೀರಾ ಹಬೀಬುಲ್ಲಾ, ಎಚ್. ಶೇಖ್ ಮತ್ತು

ಇನ್ನೊಬ್ಬರು – ವಿರುದ್ಧ (v/s) ಗುಜರಾತ್ ರಾಜ್ಯ ಮತ್ತು ಇತರರು :– ಎ.ಐ.ಆರ್. ೨೦೦೪ ಎಸ್.ಸಿ. ೩೧೧೪).

**ಗುಜರಾತ್ ಪೊಲೀಸರ ಪಕ್ಷಪಾತ**

ಸರ್ವೋಚ್ಚ ನ್ಯಾಯಾಲಯದ ನ್ಯಾಯಮೂರ್ತಿಗಳು ಬೆಸ್ಟ್ ಬೇಕರಿ ಪ್ರಕರಣದ ತೀರ್ಪಿನಲ್ಲಿ ಗುಜರಾತ್ ಸರ್ಕಾರ, ಗುಜರಾತ್ ಪೊಲೀಸ್ ಮತ್ತು ಕೋಮುವಾದದ ಬಗ್ಗೆ ವ್ಯಕ್ತಪಡಿಸಿದ ಅಭಿಪ್ರಾಯಗಳು ಟೀಕೆಗಳು ಮತ್ತು ತೀರ್ಮಾನಗಳು ಪಕ್ಷಪಾತ ಧೋರಣೆ ಹೊಂದಿದ್ದ ಸರ್ಕಾರವೊಂದರ ಸರ್ಕಾರದ ರೀತಿ–ನೀತಿಗಳಿಗೆ ಹಿಡಿದ ಕನ್ನಡಿ ಎಂದು ಹೇಳಬಹುದು. ಅತ್ಯಂತ ಮಹತ್ವದ ಈ ತೀರ್ಪಿನಲ್ಲಿ ವ್ಯಕ್ತಪಡಿಸಿದ ಕೆಲವು ಅಭಿಪ್ರಾಯ ಮತ್ತು ತೀರ್ಮಾನಗಳು ಗಮನಾರ್ಹ :

"ಮಹಾತ್ಮ ಗಾಂಧಿ ಜನಿಸಿದ ನಾಡಿನಲ್ಲಿ ಭೀಕರ ಹತ್ಯೆಗಳು ಸಂಭವಿಸಿದಾಗ ಕೆಲವು ಜನರು ತಮಗೆ ಪ್ರಿಯವಾದ ಎಲ್ಲವುಗಳಿಂದ ವಿಚಲಿತರಾಗಿ ತಮ್ಮ ಸಿದ್ಧಾಂತದಿಂದ ದಿವಾಳಿಯಾಗಿದ್ದಾರೆಯೇ ಎಂಬ ಪ್ರಶ್ನೆ ಉದ್ಭವಿಸುತ್ತದೆ."

– ತೀರ್ಪಿನ ಪ್ಯಾರಾ ೬೯

"ಎಲ್ಲ ಧರ್ಮಗಳ ಬಂಗಾರದ ಸೂತ್ರವೆಂದರೆ ಪ್ರೀತಿ ಮತ್ತು ಅನುಕಂಪ. ಹಿಂಸೆಯನ್ನು ಹರಡುವ ಮತಾಂಧರು ಭಯೋತ್ಪಾದಕರಿಗಿಂತ ಕೀಳು ಮತ್ತು ವಿದೇಶಿ ಶತ್ರುವಿಗಿಂತ ಅಪಾಯಕಾರಿ."

– ತೀರ್ಪಿನ ಪ್ಯಾರಾ ೬೯

"ಈ ಪ್ರಕರಣದ ದಾಖಲಾತಿಗಳನ್ನು ಕುತೂಹಲದಿಂದ ಅವಲೋಕಿಸಿದಾಗ ನ್ಯಾಯ ವಿತರಣೆಯ ವ್ಯವಸ್ಥೆಯ ಮೇಲೆ ಸವಾರಿ ನಡೆದಿದೆ ಮತ್ತು ಚತುರತೆಯಿಂದ ಅದರ ದುರುಪಯೋಗಕ್ಕೆ ಆಸ್ಪದ ನೀಡಿ ಛಿದ್ರಗೊಳಿಸಲಾಗಿದೆ ಎಂಬ ಭಾವನೆ ಮೂಡುತ್ತದೆ."

– ತೀರ್ಪಿನ ಪ್ಯಾರಾ ೭೧

"ಯಾರು ಜೀವ ಮತ್ತು ಆಸ್ತಿ ರಕ್ಷಣೆಯ ಜವಾಬ್ದಾರಿ ಹೊತ್ತಿದ್ದಾರೊ, ನಿಷ್ಪಕ್ಷಪಾತ ಮತ್ತು ನ್ಯಾಯಬದ್ಧ ತನಿಖೆಯ ಭರವಸೆ ಕೊಡಬೇಕಾದವರೊ ಅವರೇ ನೈಜ ಕಾತರತೆಯನ್ನು ತೋರಿದಂತೆ ಕಂಡುಬರುವುದಿಲ್ಲ. ಬಹಳಷ್ಟು ಸಂಖ್ಯೆಯಲ್ಲಿ ಜನರು ಜೀವ ಕಳೆದುಕೊಂಡಿದ್ದಾರೆ. ಆರೋಪಿಗಳೇ ಇದರಲ್ಲಿ ನಿಜಕ್ಕೂ ಅತ್ಯಾಚಾರಿಗಳೆ ಅಥವಾ ಇಲ್ಲವೆ ಎಂಬುದನ್ನು ನ್ಯಾಯಸಮ್ಮತ ಮತ್ತು ನಿಷ್ಪಕ್ಷಪಾತ ತನಿಖೆಯಿಂದ ಸಾಬೀತುಪಡಿಸಬಹುದಿತ್ತು. ಬೆಸ್ಟ್ ಬೇಕರಿ, ಮುಗ್ಧ ಮಕ್ಕಳು ಮತ್ತು ಅಬಲೆಯರು ಬೆಂಕಿಯಲ್ಲಿ ಬೇಯುತ್ತಿದ್ದಾಗ ಈ ಆಧುನಿಕ "ನೀರೋಗಳು" ಬೇರೆಲ್ಲೋ ನೋಡುತ್ತಿದ್ದರು. ಬಹುಶಃ ಅವರು ಅಪರಾಧಗೈದವರನ್ನು ಹೇಗೆ ಉಳಿಸಿ ಸಂರಕ್ಷಿಸಬೇಕೆಂದು ಚರ್ಚಿಸುತ್ತಿದ್ದಿರಬೇಕು. ಕಾನೂನು ಮತ್ತು ನ್ಯಾಯ ವಿಚಾರಣೆ ಈ "ವಿಷಯಾಸಕ್ತ ಹುಡುಗರ" ಕೈಯಲ್ಲಿ ಸಿಕ್ಕ ನೊಣಗಳಾಗಿಬಿಡುತ್ತವೆ. ಬೇಲಿಯೇ ಹೊಲ ಮೇಯಲು ಹತ್ತಿದರೆ ಕಾನೂನು ವ್ಯವಸ್ಥೆ ಅಥವಾ ಸತ್ಯ ಮತ್ತು ನ್ಯಾಯದ ಬಗ್ಗೆ ವಿಚಾರಣೆಗೆ ಆಸ್ಪದವೇ ಇರುವುದಿಲ್ಲ. ಸಾರ್ವಜನಿಕ ವ್ಯವಸ್ಥೆ ಮತ್ತು ಸಾರ್ವಜನಿಕ ಹಿತಾಸಕ್ತಿ ಹುತಾತ್ಮ ಮತ್ತು ಸ್ಮಾರಕಗಳಾಗಿಬಿಡುತ್ತವೆ."

– ತೀರ್ಪಿನ ಪ್ಯಾರಾ ೭೨

"...ಪೊಲೀಸರು ನಡೆಸಿದ ತನಿಖೆ ಅಪ್ರಮಾಣಿಕ ಮತ್ತು ದೋಷಪೂರಿತವಾಗಿದೆಯೆಂದು ಉಚ್ಚ ನ್ಯಾಯಾಲಯ ತೀರ್ಮಾನಕ್ಕೆ ಬಂದಿದೆ. ಇದಿಷ್ಟೇ ಈ ಪ್ರಕರಣವನ್ನು ಪುನಃ ವಿಚಾರಣೆಗೆ ಕಳುಹಿಸಲು ಸಮರ್ಥನೀಯವಾಗಿತ್ತು."

– ತೀರ್ಪಿನ ಪ್ಯಾರಾ ೭೩

ಬೆಸ್ಟ್ ಬೇಕರಿ ಪ್ರಕರಣದಲ್ಲಿ ಸರ್ವೋಚ್ಚ ನ್ಯಾಯಾಲಯದ ಆದೇಶದ ಮೇರೆಗೆ ಮರು ವಿಚಾರಣೆ ಮಾಡಿದ ಮುಂಬಯಿಯ ಫಾಸ್ಟ್ ಟ್ರಾಕ್ ನ್ಯಾಯಾಲಯ ೯ ಮಂದಿ ಆರೋಪಿಗಳ ಮೇಲಿನ ಆಪಾದನೆಗಳನ್ನು ಎತ್ತಿ ಹಿಡಿದು ಅಪರಾಧಿಗಳಿಗೆ ಆಜೀವ ಕಾರಾಗೃಹ ಶಿಕ್ಷೆ ವಿಧಿಸಿತು ಹಾಗೂ ಗುಜರಾತ್‌ನ ಹಲವಾರು ಪೊಲೀಸ್ ಅಧಿಕಾರಿಗಳ ವರ್ತನೆಯನ್ನು ಕಟುವಾಗಿ ಟೀಕಿಸಿತು.

**ರಾಜ್ಯ ವ್ಯವಸ್ಥೆ ಸೃಷ್ಟಿಸಿದ ಭಯೋತ್ಪಾದನೆ**

ಸರ್ವೋಚ್ಚ ನ್ಯಾಯಾಲಯದ ನಿವೃತ್ತ ಮುಖ್ಯ ನ್ಯಾಯಮೂರ್ತಿ ಖರೆ ಅವರು ತಾರೀಖು ೧.೩.೨೦೦೪ರಂದು 'ದಿ ಹಿಂದು' ಪತ್ರಿಕೆಗೆ ನೀಡಿದ ಸಂದರ್ಶನದಲ್ಲಿ ಗುಜರಾತ್‌ನಲ್ಲಿ ನಡೆದ ಕೋಮುಗಲಭೆಗಳಿಗೆ ಸಂಬಂಧಿಸಿದ ಪ್ರಕರಣಗಳ ಬಗ್ಗೆ ಮಾತನಾಡುತ್ತ ಹೇಳಿದ್ದು ಗಮನಾರ್ಹ :

"ನ್ಯಾಯ ನಿಯಮಗಳನ್ನು ಗಾಳಿಗೆ ತೂರಿ ಗುಜರಾತ್‌ನ ಪ್ರಾಸಿಕ್ಯೂಷನ್ ಮತ್ತು ಆರೋಪಿಗಳ ನಡುವಿನ ಒಳಸಂಚು ನನಗೆ ಕಂಡುಬಂತು. ಈ ಒಳಸಂಚನ್ನು ಮುರಿದು ಸಾಕ್ಷಿಗಳಿಗೆ ಮತ್ತು ಬಲಿಪಶುಗಳಿಗೆ ರಕ್ಷಣೆ ನೀಡಬೇಕಾದುದರಿಂದ ಸರ್ವೋಚ್ಚ ನ್ಯಾಯಾಲಯ ಮಧ್ಯ ಪ್ರವೇಶಿಸಬೇಕಾಯಿತು."

> "ಪ್ರಕರಣ ನಡೆಯುತ್ತಿದ್ದಾಗಿನ ಅನೇಕ ಹಂತಗಳಲ್ಲಿ ತನಿಖೆ ಪ್ರಾರಂಭವಾದಾಗಿನಿಂದ ಹಿಡಿದು ಆರೋಪಿಗಳ ವಿರುದ್ಧ ಪೋಟಾ ಕಾನೂನಿನಡಿ ವಿಚಾರಣೆ ನಡೆಸಲು ರಾಜ್ಯ ಸರ್ಕಾರ ಅನುಮೋದನೆ ನೀಡುವವರೆಗೆ, ಅಪರಾಧ ನಿರ್ಣಯ ಮತ್ತು ಆರೋಪಿಗಳಿಗೆ ಶಿಕ್ಷೆಯ ತೀರ್ಪು ನೀಡುವವರೆಗೆ ನಡೆದಿರುವ ಬೆಳವಣಿಗೆಗಳನ್ನು ಗಮನಿಸಬಯಸುತ್ತೇವೆ. ಸರ್ವೋಚ್ಚ ನ್ಯಾಯಾಲಯದಲ್ಲಿರುವ ನಾವು ಈ ದೇಶದ ನಾಗರಿಕರ ಮೂಲಭೂತ ಹಕ್ಕುಗಳು ಮತ್ತು ಮಾನವ ಹಕ್ಕುಗಳ ಈ ಪರಿಯ ಬೀಭತ್ಸ ಉಲ್ಲಂಘನೆಯನ್ನು ನಮ್ಮ ಮುಂದೆ ಪ್ರಸ್ತುತ ಪಡಿಸಿದಾಗ ನಾವು ಕೈಜೋಡಿಸಿ ಕುಳಿತು ಕೊಳ್ಳಲಾಗುವುದಿಲ್ಲ."
>
> ನ್ಯಾಯಮೂರ್ತಿ ಎ. ಜೆ. ಪಟ್ನಾಯಕ್
> ನ್ಯಾಯಮೂರ್ತಿ ವಿ. ಗೋಪಾಲಗೌಡ
> ಕ್ರಿಮಿನಲ್ ಅಪೀಲ್ ನಂ. ೨೯೫೩–೬೬/೨೦೧೦
> ಅದಮ್‌ಬಾಯ್ ಸುಲೇಮಾನ್ ಬಾಯ್ ಅಜ್ಮೇರಿ ಮತ್ತು ಇತರರು ವಿರುದ್ಧ (v/s) ಗುಜರಾತ್ ರಾಜ್ಯ

ಗುಜರಾತ್‌ನ ಕೋಮುಗಲಭೆಗಳು ಮತ್ತು ಅದರಿಂದ ಉಂಟಾದ ಸಾವು–ನೋವು, ಆಸ್ತಿಪಾಸ್ತಿಗಳ ಹಾನಿ, ಸ್ವದೇಶದಲ್ಲೇ ಪರಕೀಯರಾದ ಪ್ರಜೆಗಳು, ಇವಕ್ಕೆಲ್ಲ ಕಾರಣ ಮತಾಂಧ ಶಕ್ತಿಗಳು ಮಾತ್ರವಲ್ಲ, ಅವರೊಡನೆ ಕೈಜೋಡಿಸಿದ ಪೊಲೀಸ್ ವ್ಯವಸ್ಥೆಯೂ ಕಾರಣ. ಹಾಗಾಗಿ ಇದೊಂದು ರಾಜ್ಯ ವ್ಯವಸ್ಥೆಯೇ ಸೃಷ್ಟಿಸಿದ ಭಯೋತ್ಪಾದನೆಯಾಗಿತ್ತು.

**ಅಕ್ಷರಧಾಮದಲ್ಲಿ ಭಯೋತ್ಪಾದನೆ**

ಅಹಮದಾಬಾದ್‌ನ ಗಾಂಧಿನಗರದಲ್ಲಿರುವ ಅಕ್ಷರಧಾಮ ೧೯೯೨ರಲ್ಲಿ ನಿರ್ಮಿತವಾದದ್ದು. ಸುಮಾರು ೨೩ ಎಕರೆ ಪ್ರದೇಶದಲ್ಲಿರುವ ಈ ದೇಗುಲ ಸ್ವಾಮಿನಾರಾಯಣ ಗುರುಗಳ ಭಕ್ತರಿಗೆ ಮತ್ತು ಪ್ರವಾಸಿಗರಿಗೆ ಆಕರ್ಷಣೀಯ ಸ್ಥಳ. ಅಕ್ಷರಧಾಮವೆಂದರೆ ಸನಾತನ ಮೌಲ್ಯ ಮತ್ತು ಗುಣಗಳ ಬೀಡೆಂದು ನಂಬಲಾಗಿದೆ. ಧರ್ಮನಿರಪೇಕ್ಷತೆ ಮತ್ತು ಪರಧರ್ಮ ಸಹಿಷ್ಣುತೆಯೂ ಈ ಮೌಲ್ಯಗಳ ಭಾಗವಾಗಿರಬೇಕು. ೨೪.೯.೨೦೦೨ರಂದು ಈ ಸ್ಥಳವು ಭೀಕರ ಭಯೋತ್ಪಾದನೆ ಕೃತ್ಯಕ್ಕೆ ಗುರಿಯಾದದ್ದು ನಿಜಕ್ಕೂ ಖಂಡನೀಯವಾದ ದುರಂತ. ಭಯೋತ್ಪಾದನೆ ಹುಟ್ಟಿಸುವುದು ಮತ್ತಷ್ಟು ಭಯೋತ್ಪಾದನೆಯನ್ನೇ ಎಂಬ ಐತಿಹಾಸಿಕ ಸತ್ಯ ಪದೇ ಪದೇ ನಮ್ಮ ಮುಂದೆ ನಿಲ್ಲುತ್ತದೆ. ಆದಕಾರಣವೇ ಭಯೋತ್ಪಾದಕ ಕೃತ್ಯಗಳು ಘಟಿಸಿದಾಗ, ಅದು ಯಾರಿಂದಲೇ ನಡೆದಿದ್ದರೂ, ಎಲ್ಲೇ ಆಗಿದ್ದರೂ ಅದನ್ನು ಖಂಡಿಸಬೇಕಾದದ್ದು ಎಲ್ಲ ಸಹೃದಯ ನಾಗರಿಕರ ಜವಾಬ್ದಾರಿ ಮತ್ತು ಕರ್ತವ್ಯ.

೨೪.೯.೨೦೦೨ರ ಸಂಜೆ ಸುಮಾರು ೪ ಘಂಟೆ ೩೦ ನಿಮಿಷಕ್ಕೆ ಇಬ್ಬರು ವ್ಯಕ್ತಿಗಳು ತಾವು ಹೊತ್ತು ತಂದಿದ್ದ ಎ.ಕೆ.–೫೬ ಕೋವಿಗಳು, ಕೈಬಾಂಬ್‌ಗಳು ಇತ್ಯಾದಿಗಳೊಂದಿಗೆ ಅಕ್ಷರಧಾಮವನ್ನು ಪ್ರವೇಶಿಸಿ ಅಲ್ಲಿ ಆಟವಾಡುತ್ತಿದ್ದ ಮಕ್ಕಳು ಮತ್ತು ಇನ್ನಿತರರ ಮೇಲೆ ಸತತವಾಗಿ ಹಾರಿಸಿದ ಗುಂಡಿನ ಸುರಿಮಳೆ ಮತ್ತು ಎಸೆದ ಕೈಬಾಂಬ್‌ಗಳಿಂದ ಸತ್ತವರ ಸಂಖ್ಯೆ ೩೩ ಮತ್ತು ಗಾಯಗೊಂಡವರು ೮೬ ಮಂದಿ. ದೆಹಲಿಯಿಂದ ತುರ್ತಾಗಿ ಆಗಮಿಸಿದ ಎನ್.ಎಸ್.ಜಿ. ಕಮಾಂಡೊ ಪಡೆಯೊಡನೆ ನಡೆದ ೫ ತಾಸುಗಳ ಗುಂಡಿನ ಕಾಳಗ ಆ ಇಬ್ಬರು ಭಯೋತ್ಪಾದಕರ ಸಾವಿನೊಡನೆಯೇ ಅಂತ್ಯಗೊಂಡದ್ದು.

**ನಿರಪರಾಧಿಗಳ ಬಂಧನ**

ನಂತರ ಅಸಿಸ್ಟೆಂಟ್ ಪೊಲೀಸ್ ಕಮಿಷನರ್ ಜಿ. ಎಲ್. ಸಿಂಘಲ್ ೨೪.೯.೨೦೦೨ರಂದು ನೀಡಿದ ದೂರಿನ ಆಧಾರದ ಮೇಲೆ ೨೫.೯.೨೦೦೨ರಂದು ಪ್ರಥಮ ವರ್ತಮಾನ (ಎಫ್.ಐ.ಆರ್.) ವರದಿಯನ್ನು ದಾಖಲಿಸಲಾಯಿತು. ತನಿಖೆಯನ್ನು ಆ್ಯಂಟಿ ಟೆರರಿಸ್ಟ್ ಸ್ಕ್ವಾಡ್‌ಗೆ ವರ್ಗಾಯಿಸಲಾಯಿತು. ಸುಮಾರು ೧೧ ತಿಂಗಳು ಅಪರಾಧಿಗಳ ಬಗ್ಗೆ ಪೊಲೀಸರಿಗೆ ಯಾವ ಸುಳಿವೂ ಸಿಕ್ಕಿರಲಿಲ್ಲ. ೨೯.೦೮.೨೦೦೩ರಂದು

ಏಕಾಏಕಿ ಪೊಲೀಸರು ಅಲ್ತಾಫ್ ಮಾಲೆಕ್ (ಆರೋಪಿ-೧), ಅದಂಬಾಯ್ ಅಜ್ಮೇರಿ (ಆರೋಪಿ-೨), ಮೊಹಮದ್ ಸಲಿಂ ಶೇಖ್ (ಆರೋಪಿ-೩), ಅಬ್ದುಲ್ ಕಯ್ಯಾಂ ಮುಫ್ತಿಸಾಬ್ ಬಾಯ್ (ಆರೋಪಿ-೪) ಮತ್ತು ಅಬ್ದುಲ್‌ಮಿಯ ಯಾಸಿನ್ ಮಿಯ (ಆರೋಪಿ-೫) ಇವರನ್ನು ಬಂಧಿಸಿದರು. ನಂತರ ಚಾಂದ್‌ಖಾನ್ (ಆರೋಪಿ-೬)ನನ್ನು ಬಂಧಿಸಿ, ಆರೋಪಿಗಳು ಸೌದಿ ಅರೇಬಿಯ, ಹೈದರಾಬಾದ್, ಅಹಮದಾಬಾದ್ ಮತ್ತು ಜಮ್ಮು-ಕಾಶ್ಮೀರದಲ್ಲಿ ಪಿತೂರಿ ನಡೆಸಿ ಅಕ್ಷರಧಾಮದ ಭಯೋತ್ಪಾದನೆಯ ಕೃತ್ಯದಲ್ಲಿ ಭಾಗಿಗಳಾಗಿದ್ದರೆಂದು ಗುರುತಿಸಿ ಭಾರತೀಯ ದಂಡಸಂಹಿತೆ, ಶಸ್ತ್ರಕಾಯ್ದೆ, ಸ್ಫೋಟಕ ವಸ್ತುಗಳ ಕಾಯ್ದೆಗಳಡಿ ಅವರ ಮೇಲೆ ಆರೋಪ ಹೊರಿಸಲಾಯಿತು.




ಅಪ್ಪಾ... ನೀವು ಓದುತ್ತಿದ್ದ ಸ್ವಾತಂತ್ರ್ಯ ದಿನದ ಭಾಷಣದ ಹಳೆಯ ಪ್ರತಿ ಎಲ್ಲಿದೆ ?

**ಕರಾಳ ಪೋಟಾ ಕಾನೂನಿಗೆ ಮೊರೆ**

ನಂತರ ೩೦.೦೮.೨೦೦೩ರಂದು ಕರಾಳ ಶಾಸನವೆನಿಸಿಕೊಂಡಿದ್ದ ಪ್ರಿವೆನ್ಷನ್ ಆಫ್ ಟೆರರಿಸ್ಟ್ ಆ್ಯಕ್ಟ್‌ನ (ಪೋಟಾ) ಪ್ರಕಾರ ಆರೋಪಿಗಳ ಮೇಲೆ ಆರೋಪಗಳನ್ನು ಹೊರಿಸಿ, ಪೋಟಾ ಕಾನೂನಿನ ವ್ಯಾಪ್ತಿಯಲ್ಲಿ ವಿಚಾರಣೆ ನಡೆಸಲು ಗುಜರಾತ್ ಸರ್ಕಾರದ ಅನುಮತಿ ಪಡೆದು, ವಿಶೇಷ ನ್ಯಾಯಾಲಯ (ಪೋಟಾ)ದ ಮುಂದೆ ವಿಚಾರಣೆ ನಡೆಸಲಾಯಿತು. ೧೨೬ ಸಾಕ್ಷಿಗಳ ವಿಚಾರಣೆಯ ನಂತರ ವಿಶೇಷ ನ್ಯಾಯಾಲಯ ಆರೋಪಿಗಳ ಮೇಲೆ ಹೊರಿಸಿದ ಹಲವು ಆರೋಪಗಳು ಸಾಬೀತಾಗಿವೆಯೆಂದು ತೀರ್ಪು ನೀಡಿ ಅದಂಬಾಯ್ ಅಜ್ಮೇರಿ (ಆರೋಪಿ-೨), ಅಬ್ದುಲ್ ಕಯ್ಯಾಂ ಮುಫ್ತಿ ಸಾಬ್ ಬಾಯ್ (ಆರೋಪಿ-೪) ಮತ್ತು ಚಾಂದ್ ಖಾನ್‌ಗೆ (ಆರೋಪಿ-೬) ಮರಣದಂಡನೆ ಶಿಕ್ಷೆ ವಿಧಿಸಿತು. ಮೊಹಮದ್ ಸಲೀಂ ಶೇಖ್‌ಗೆ (ಆರೋಪಿ-೩) ಆಜೀವ ಕಾರಾಗೃಹ ಶಿಕ್ಷೆ, ಅಲ್ತಾಫ್ ಮಾಲೆಕ್‌ಗೆ (ಆರೋಪಿ-೧) ೫ ವರ್ಷ ಕಠಿಣ ಸಜ ಮತ್ತು ಅಬ್ದುಲ್‌ಮಿಯ ಯಾಸಿನ್ ಮಿಯಗೆ (ಆರೋಪಿ-೫) ೧೦ ವರ್ಷ ಕಠಿಣ ಸಜ ವಿಧಿಸಿತು. ಆರೋಪಿಗಳೆಲ್ಲರೂ ೨೦೦೩ರಿಂದ ಕಾರಾಗೃಹದಲ್ಲಿ ಬಂಧನದಲ್ಲಿದ್ದರು.

**ನಂಬಲನರ್ಹ ಸಾಕ್ಷಿ**

ಗುಜರಾತ್‌ನ ವಿಶೇಷ ನ್ಯಾಯಾಲಯ (ಪೋಟಾ)ದ ತೀರ್ಪನ್ನು ಪ್ರಶ್ನಿಸಿ ಎಲ್ಲ ಆರೋಪಿಗಳು ಗುಜರಾತ್ ಉಚ್ಚ ನ್ಯಾಯಾಲಯದ ಮುಂದೆ ಸಲ್ಲಿಸಿದ್ದ ಮೇಲ್ಮನವಿಯನ್ನು ವಜಾ ಮಾಡಲಾಯಿತು. ತದನಂತರ ಪ್ರಕರಣ ಸರ್ವೋಚ್ಚ ನ್ಯಾಯಾಲಯ ತಲುಪಿತು. ಸರ್ವೋಚ್ಚ ನ್ಯಾಯಾಲಯದ ಕೂಲಂಕಷ ಪರಿಶೀಲನೆಗೆ ಬಂದ ಪ್ರಮುಖ ಅಂಶಗಳೆಂದರೆ :

(i) ಪೋಟಾ ಕಾನೂನಿನ ವ್ಯಾಪ್ತಿಯಲ್ಲಿ ವಿಚಾರಣೆ ನಡೆಸಲು ಗುಜರಾತ್ ಸರ್ಕಾರ ಕೊಟ್ಟ ಅನುಮತಿ ನ್ಯಾಯಸಮ್ಮತವೇ ?

(ii) ಆರೋಪಿಗಳು ಮಾಡಿದರೆನ್ನಲಾದ ತಪ್ಪೊಪ್ಪಿಗೆ ಕಾನೂನು ಸಮ್ಮತವಾಗಿತ್ತೇ ?

(iii) ಅಕ್ಷರಧಾಮದಲ್ಲಿ ಸತ್ತ ಇಬ್ಬರು ಫಿದಾಯಿಗಳ ಪ್ಯಾಂಟ್ ಜೇಬಿನಲ್ಲಿ ಸಿಕ್ಕಿತೆನ್ನಲಾದ ಉರ್ದು ಭಾಷೆಯಲ್ಲಿ ಬರೆದ ಪತ್ರಗಳು ನಂಬಲರ್ಹವೇ ?

(iv) ಪ್ರಮುಖ ಸಾಕ್ಷಿಗಳನ್ನು ಪ್ರಾಸಿಕ್ಯೂಷನ್ ವಿಶೇಷ ನ್ಯಾಯಾಲಯದ ಮುಂದೆ ಹಾಜರುಪಡಿಸದಿದ್ದುದು ನ್ಯಾಯಸಮ್ಮತವೇ ?

ಗುಜರಾತ್ ಉಚ್ಚ ನ್ಯಾಯಾಲಯ ಮೇಲೆ ಉಲ್ಲೇಖಿಸಿದ ಎಲ್ಲ ಅಂಶಗಳನ್ನು ಎತ್ತಿ ಹಿಡಿದು ಅಕ್ಷರಧಾಮದ ಮೇಲೆ ನಡೆದ ಭಯೋತ್ಪಾದಕ ಕೃತ್ಯ ಒಂದು ಅಂತರರಾಷ್ಟ್ರೀಯ ಪಿತೂರಿಯೆಂದೂ ಆರೋಪಿಗಳು ಅದರಲ್ಲಿ ಭಾಗಿಗಳೆಂದೂ ತೀರ್ಮಾನಿಸಿತ್ತು. ಅಕ್ಷರಧಾಮ ಪ್ರಕರಣದ ವಿಚಾರಣೆಯ ಸಮಸ್ತ ದಾಖಲಾತಿಗಳನ್ನು, ಸಾಕ್ಷಿ ವಿಚಾರಣೆಗಳನ್ನು, ವಿಶೇಷ ನ್ಯಾಯಾಲಯ (ಪೋಟಾ) ಮತ್ತು ಉಚ್ಚ ನ್ಯಾಯಾಲಯದ ತೀರ್ಪುಗಳನ್ನು ಸಮಗ್ರವಾಗಿ ಪರಿಶೀಲಿಸಿದ ಸರ್ವೋಚ್ಚ ನ್ಯಾಯಾಲಯ ಗುಜರಾತ್ ಉಚ್ಚ ನ್ಯಾಯಾಲಯ ತೀರ್ಪನ್ನು ತಳ್ಳಿಹಾಕಿ ಆರೋಪಿಗಳನ್ನೆಲ್ಲ ಅವರ ಮೇಲೆ ಹೊರಿಸಿದ ಆರೋಪಗಳಿಂದ ಮುಕ್ತರನ್ನಾಗಿಸಿ ಬಿಡುಗಡೆ ಮಾಡಬೇಕೆಂದು ೧೬.೦೫.೨೦೧೪ರಂದು ಆದೇಶ ನೀಡಿತು.

**ನಿರಪರಾಧಿಗಳ ಬಿಡುಗಡೆ**

ವಿಚಾರಣೆಯ ಸಮಸ್ತ ದಾಖಲಾತಿಗಳನ್ನು ಮತ್ತು ವಿಶೇಷ ನ್ಯಾಯಾಲಯ ಮತ್ತು ಉಚ್ಚ ನ್ಯಾಯಾಲಯದ ತೀರ್ಪುಗಳನ್ನು ಸಮಗ್ರವಾಗಿ ಪರಿಶೀಲಿಸಿದ ಸರ್ವೋಚ್ಚ ನ್ಯಾಯಾಲಯ ಗುಜರಾತ್ ಉಚ್ಚ ನ್ಯಾಯಾಲಯದ ತೀರ್ಪನ್ನು ತಳ್ಳಿಹಾಕಿ, ಆರೋಪಿಗಳನ್ನೆಲ್ಲ ಅವರ ಮೇಲೆ ಹೊರಿಸಿದ ಆರೋಪಗಳಿಂದ ಮುಕ್ತರನ್ನಾಗಿಸಿ ಬಿಡುಗಡೆ ಮಾಡಿದೆ. ಪೋಟಾ ಕಾನೂನಿನಡಿ ವಿಚಾರಣೆ ನಡೆಸಲು ಗುಜರಾತ್ ಸರ್ಕಾರ ಕೊಟ್ಟ ಅನುಮತಿಯನ್ನು ಅಸಿಂಧುವೆಂದು ಘೋಷಿಸಿದ್ದಲ್ಲದೆ ಆರೋಪಿಗಳು ಕೊಟ್ಟರೆಂದು ಹೇಳಲಾದ ತಪ್ಪೊಪ್ಪಿಗೆಗಳನ್ನು ಅವರನ್ನು ಹಿಂಸೆಗೆ ಒಳಪಡಿಸಿ ಪಡೆದು ಅವರನ್ನು ಮತ್ತೆ ಪೊಲೀಸ್ ಕಸ್ಟಡಿಗೆ ಕೊಟ್ಟದ್ದು ನ್ಯಾಯಬಾಹಿರವೆಂದೂ, ಗುಂಡಿನ ದಾಳಿಯಲ್ಲಿ ಸತ್ತ ಇಬ್ಬರು ಫಿದಾಯಿಗಳ ರಕ್ತಸಿಕ್ತ ಪ್ಯಾಂಟ್‌ನ ಜೇಬಿನಲ್ಲಿ ಸಿಕ್ಕಿತೆನ್ನಲಾದ ಉರ್ದು ಭಾಷೆಯಲ್ಲಿ ಬರೆದ ಎರಡು ಕಾಗದಗಳು ಮಾತ್ರ ಸ್ವಚ್ಛವಾಗಿಯೆ ಇದ್ದುದು ಅಸಹಜ ಮತ್ತು ಅಸಂಭವವೆಂದೂ ಮತ್ತು ಪ್ರಮುಖ ಸಾಕ್ಷಿಗಳನ್ನು ವಿಶೇಷ ನ್ಯಾಯಾಲಯದ ಮುಂದೆ ಹಾಜರುಪಡಿಸದಿದ್ದುದು ಮತ್ತು ಆರೋಪಿಗಳು ಪೊಲೀಸ್ ಕಸ್ಟಡಿಯಲ್ಲಿದ್ದಾಗ ಅವರ ಮೇಲೆ ಪೊಲೀಸರು ಮಾಡಿದ ಹಿಂಸೆಯಿಂದಾಗಿ ಮೂಳೆ ಮುರಿದ ಬಗ್ಗೆ ಇದ್ದ ಎಕ್ಸ್‌ರೇ ದಾಖಲಾತಿ ಮಾಯವಾದದ್ದು ನ್ಯಾಯಸಮ್ಮತವಲ್ಲವೆಂದು ಸರ್ವೋಚ್ಚ ನ್ಯಾಯಾಲಯ ತನ್ನ ಸುದೀರ್ಘ ತೀರ್ಪಿನಲ್ಲಿ ನಿರ್ಧರಿಸಿದೆ. ತೀರ್ಪಿನ ಅಂತ್ಯದಲ್ಲಿ ಸರ್ವೋಚ್ಚ ನ್ಯಾಯಾಲಯ ಗುಜರಾತ್ ಸರ್ಕಾರ ಮತ್ತು ಗುಜರಾತ್ ಪೊಲೀಸರ ಪಕ್ಷಪಾತ ನೀತಿ-ರೀತಿಗಳ ಬಗ್ಗೆ ಉದ್ಗರಿಸಿರುವುದು ಮಾರ್ಮಿಕವಾಗಿದೆ :

"ಈ ತೀರ್ಪಿಗೆ ವಿದಾಯ ಹೇಳುವ ಮುನ್ನ ದೇಶದ ಅಖಂಡತೆ ಮತ್ತು ಭದ್ರತೆಗೆ ಸಂಬಂಧಿಸಿದ ಈ ಘೋರ ಪ್ರಕರಣವನ್ನು ಅದಕ್ಷ ರೀತಿಯಲ್ಲಿ ತನಿಖೆ ನಡೆಸಿದ ತನಿಖಾ ಏಜನ್ಸಿಯ ಬಗ್ಗೆ ನಮ್ಮ ವೇದನೆಯನ್ನು ಅರುಹಬೇಕು. ಅಸಂಖ್ಯಾತ ಅಮಾಯಕರ ಸಾವಿಗೆ ಕಾರಣರಾದ ನಿಜವಾದ ಪಾತಕಿಗಳನ್ನು ಹಿಡಿಯುವ ಬದಲು ಪೊಲೀಸರು ನಿರಪರಾಧಿಗಳನ್ನು ಬಂಧಿಸಿ ಅವರ ಮೇಲೆ ಗುರುತರ ಆರೋಪ ಹೊರಿಸುವಂತೆ ಮಾಡಿ, ತತ್ಪರಿಣಾಮವಾಗಿ ಅವರನ್ನು ದೋಷಿಗಳನ್ನಾಗಿಸಿ ಶಿಕ್ಷೆಗೊಳಗಾಗುವಂತೆ ಮಾಡಿದ್ದಾರೆ."

– ನ್ಯಾಯಮೂರ್ತಿ ಎ. ಜೆ. ಪಟ್ನಾಯಕ್
– ನ್ಯಾಯಮೂರ್ತಿ ವಿ. ಗೋಪಾಲ ಗೌಡ
ಸರ್ವೋಚ್ಚ ನ್ಯಾಯಾಲಯ

೨೦೦೨ರಲ್ಲಿ ನಡೆದ ಸರಣಿ ಮತೀಯ ಗಲಭೆಗಳು ನಡೆದ ಅವಧಿಯಲ್ಲಿ ಗುಜರಾತ್ ರಾಜ್ಯದ ಮುಖ್ಯಮಂತ್ರಿ ನರೇಂದ್ರ ಮೋದಿ ರಾಜ್ಯದ ಗೃಹ ಸಚಿವರೂ ಕೂಡ. ಗೋಧ್ರ ಪ್ರಕರಣ, ಗುಜರಾತ್ ಹತ್ಯಾಕಾಂಡದ ಪ್ರಕರಣ ಮತ್ತು ಅಕ್ಷರಧಾಮ ಪ್ರಕರಣಗಳ ತನಿಖೆ/ವಿಚಾರಣೆ ನಡೆಯುತ್ತಿದ್ದ ಅವಧಿಯಲ್ಲಿ ನರೇಂದ್ರ ಮೋದಿ ಗೃಹ ಮಂತ್ರಿ ಮತ್ತು ಅವರ ಆಪ್ತರಾದ ಅಮಿತ್ ಶಾ ಗೃಹಖಾತೆಯ ರಾಜ್ಯ ಸಚಿವರು. ಈಗ ನರೇಂದ್ರ ಮೋದಿ ದೇಶದ ಪ್ರಧಾನ ಮಂತ್ರಿ ಮತ್ತು ಅಮಿತ್ ಶಾ ಭಾರತೀಯ ಜನತಾ ಪಕ್ಷದ ರಾಷ್ಟ್ರಾಧ್ಯಕ್ಷ. ಈ ಇಬ್ಬರೂ ಸೃಷ್ಟಿಸಿದ "ಗುಜರಾತ್ ಮಾದರಿ"ಯ ಇನ್ನೊಂದು ಕರಾಳ ಮುಖವನ್ನು ಮತ್ತೆ ಮತ್ತೆ ಪರಿಚಯಿಸಿದ ಸರ್ವೋಚ್ಚ ನ್ಯಾಯಾಲಯ ಅಭಿನಂದನಾರ್ಹ.


**ಮುರಳೀಧರ ಚಿಕ್ಕಮಗಳೂರು**
ವಕೀಲರು, ನಂ. ೮೩, ೫ನೇ ಅಡ್ಡರಸ್ತೆ, ಮಲ್ಲೇಶ್ವರಂ ವೃತ್ತ
ಬೆಂಗಳೂರು – ೫೬೦ ೦೦೩






ಬೀದರ್ ಕೋಟೆಯ ಪ್ರವೇಶದ್ವಾರ






# ನೆನಪು - ಕಮಲೇಶ್

ರೇಖಾ ಚಿತ್ರಗಳು, ಅಕ್ಷರ ವಿನ್ಯಾಸಗಳಲ್ಲದೆ ಹಲವು ಪ್ರಕಾರಗಳಲ್ಲಿ ದೀರ್ಘಕಾಲ ಕಲಾಸೇವೆಗೈದು ಪ್ರಖ್ಯಾತರಾದ ಶ್ರೀ ಕಮಲೇಶ್ ಕಳೆದ 30–06–2014ರಂದು ನಮ್ಮನ್ನಗಲಿದ ವಾರ್ತೆ ನಮಗೆಲ್ಲ ಅತ್ಯಂತ ನೋವಿನ ಸಂಗತಿ. ಸುಮಾರು ನಲವತ್ತು ವರ್ಷಗಳಿಂದ ನವಕರ್ನಾಟಕದೊಂದಿಗೆ ಒಡನಾಟವಿದ್ದ ಅವರು ನಮ್ಮ ಆತ್ಮೀಯ ಗೆಳೆಯರೂ ಹೌದು.

ನವಕರ್ನಾಟಕ ಇಂದು ಬಳಸುತ್ತಿರುವ ಸಂಸ್ಥೆಯ ಲಾಂಛನವನ್ನು ವಿನ್ಯಾಸಗೊಳಿಸಿದ್ದು ಶ್ರೀ ಕಮಲೇಶ್. ನವಕರ್ನಾಟಕದ ವಿಶ್ವಕಥಾಕೋಶದ ಇಪ್ಪತ್ತೈದು ಸಂಪುಟಗಳ ರಕ್ಷಾಪುಟಗಳ ಹೊಣೆ ಹೊತ್ತು ವಿನ್ಯಾಸಗೊಳಿಸಿದ್ದಾರೆ. ಅಲ್ಲದೆ ಹಲವು ಮುಖಪುಟಗಳಿಗೆ ಅಕ್ಷರ ವಿನ್ಯಾಸವೇ ಅಲ್ಲದೆ ರಕ್ಷಾಪುಟಗಳನ್ನು ಮಾಡಿಕೊಟ್ಟಿದ್ದೂ ಅವರೇ. ಕರ್ನಾಟಕ ಇತಿಹಾಸಕ್ಕೆ ಸಾಕ್ಷಿಯಾದ ಅಮೂಲ್ಯ ವಾಸ್ತುಶಿಲ್ಪದ ಹಲವಾರು ರೇಖಾಚಿತ್ರಗಳನ್ನು ಇವರು ರಚಿಸಿದ್ದಾರೆ. ಇದನ್ನೆಲ್ಲ ಸ್ಮರಿಸುತ್ತ ನವಕರ್ನಾಟಕ ಪ್ರಕಾಶನ, ಹೊಸತು ಬಳಗ ಕಮಲೇಶ್ ಅವರ ನಿಧನಕ್ಕೆ ತೀವ್ರ ಸಂತಾಪ ವ್ಯಕ್ತಪಡಿಸಿ ಅವರ ಕುಟುಂಬದ ದುಃಖದಲ್ಲಿ ಪಾಲ್ಗೊಳ್ಳುತ್ತದೆ.





ಸಾವಿರ ಕಂಬದ ಬಸದಿ – ಮೂಡಬಿದರೆ



ಹೊಯ್ಸಳೇಶ್ವರ ದೇವಸ್ಥಾನ – ಹಳೇಬೀಡು

Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Editor : Dr. Siddanagouda Patil

